

ಶ್ರೀಮದಾನಂದತೀರ್ಥಭಗವತ್ಪಾದ ಪ್ರಣೀತ

# ದ್ವಾದಶಸ್ತೋತ್ರ

ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯ

ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನ (ರಿ.)
ಬೆಂಗಳೂರು




ಶ್ರೀಮದಾನಂದತೀರ್ಥಭಗವತ್ಪಾದಪ್ರಣೀತ

# ದ್ವಾದಶಸ್ತೋತ್ರ

## (ಕಂದುಕಸ್ತುತಿ ಸಮೇತ)

## (ಕನ್ನಡ ಅನುವಾದ, ವಿವರಣೆ, ಪದ್ಯಾನುವಾದ ಸಮೇತ)

ಅನುವಾದ - ವಿವರಣೆ - ಪದ್ಯಾನುವಾದ :

**ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯ**

ಪ್ರಕಾಶನ :

**ಐತರೇಯ ಪ್ರಕಾಶನ ವ್ಯಾಸನಕೆರೆ**

ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನದ ಪ್ರಕಾಶನ ವಿಭಾಗ

ಪಾಜಕ, ೯೧-೨೬, ೩ನೇ ಮುಖ್ಯರಸ್ತೆ, ಮೌಂಟ್‌ಜಾಯ್ ಎಕ್ಸ್‌ಟೆನ್ಷನ್,

ಹನುಮಂತನಗರ, ಬೆಂಗಳೂರು - ೫೬೦ ೦೧೯

**Dvādaśastotra of Sri Mādhvācārya**: Edited with an introduction, translation, Kannada rendering and explanatory notes by Dr. Vyasanakere Prabhanjanacharya, (Recipient of Karnataka State Sanskrit Award-1999 & **Karnataka Rajyotsava Award-2002**, **Śrī Vidyāmānya Mahāpraśasti** of Śrī Pejavar Math, Udupi and **Rashtrapati Award - 2005**) M.A., Ph.D., D.Litt., Principal (Rtd.), Govt. First Grade College, K.R.Puram, Bangalore and Published by **Aitareya Prakāśana Vyāsanakere**, Publication wing of **Śrī VyāsaMadhva Samśodhana Pratiṣṭhāna,** No. 91/26, Pajaka, 3rd Main, 1st Cross, Mount Joy Extension, Hanumanthanagar, Bengaluru - 560019. Pages: 16+244=260.

Phone : 26602802; 26611011.
Internet : www.vyasamadhwa.org
E-mail : info@vyasamadhwa.org

ISBN No.: 978-93-81826-89-8



First Edition : 2022
Second Edition : 2022

Price : Rs. 100/-

Typeset by :
**Śrī Vyāsa Madhva Samśodhana Pratiṣṭhāna**

Printed at :
**Vāgartha,** Hanumantha Nagar, Bangalore - 19, Ph: 22427677,.

# ಪ್ರಸ್ತಾವನೆ

ಶ್ರೀಮಧ್ವಾಚಾರ್ಯರು(ಕ್ರಿ.ಶ. ೧೨೦೦-೧೨೮೦) ಜಗತ್ತು ಕಂಡ ಅಪ್ರತಿಮ ದಾರ್ಶನಿಕರು; ಭಗವಂತನ ಪಾರಮ್ಯ, ವಿಶ್ವಸತ್ಯತ್ವಗಳನ್ನು ಸಾರಿದ **ವಿಶ್ವಗುರುಗಳು.** ವಾಯುದೇವರ ತೃತೀಯಾವತಾರರಾದ ಅವರು ಜಗತ್ತಿನ ಉಸಿರಾದರೆ, ಅವರ ಕೃತಿಗಳು ಅಧ್ಯಾತ್ಮದ ಉಸಿರು. ಅವರ ಆಕೃತಿಯಂತೆ ಕೃತಿಗಳೂ ಅಪೂರ್ವ, ಅನನ್ಯ. ವಿಷಯವೈಪುಲ್ಯ, ವಿವೇಚನೆಯ ಸಮಗ್ರತೆಯ ದೃಷ್ಟಿಯಲ್ಲಿ ಶ್ರೀವೇದವ್ಯಾಸರ ಅನಂತರದ ಸ್ಥಾನ ಅವರದ್ದೇ. ಅವರು ನಿಜವಾದ ಅರ್ಥದಲ್ಲಿ **ಅಭಿನವವೇದವ್ಯಾಸರು.** ಆಸೇತುಹಿಮಾಚಲ ಮಾತ್ರವಲ್ಲದೆ ಉತ್ತರಬದರಿಯನ್ನೂ ಸಂದರ್ಶಿಸಿದ ಏಕಮಾತ್ರ ಪರಿವ್ರಾಜಕರು ಎಂಬುದು ಅವರ ಇನ್ನೊಂದು ಮಹತ್ತ್ವ. ಇಂತಹ ವಿಶ್ವಗುರುವನ್ನು ನೀಡಿದ ಭಾಗ್ಯ ಕನ್ನಡನಾಡಿನದು. ಅವರ ಜೀವನಗಾಥೆ ಸುಮಧ್ವವಿಜಯದಲ್ಲಿದ್ದರೆ, ಅವರ ಸಂದೇಶ ಅವರ ಕೃತಿಶ್ರೇಣಿಯಲ್ಲಿದೆ.

ಸರ್ವಮೂಲವೆಂಬುದಾಗಿ ಪ್ರಸಿದ್ಧವಾಗಿರುವ ಅವರ ಕೃತಿಗಳು ವೇದ, ಉಪನಿಷತ್ತು, ಗೀತೆ, ಬ್ರಹ್ಮಸೂತ್ರ, ಮಹಾಭಾರತ, ರಾಮಾಯಣ, ಭಾಗವತ, ಪಂಚರಾತ್ರ, ಬ್ರಹ್ಮತರ್ಕ, ತಂತ್ರಸಾರ ಮೊದಲಾದ ಸಕಲಗ್ರಂಥಗಳ ಭಾವದೀಪಗಳು. ಟೀಕಾಕೃತ್ಪಾದರಾದ ಶ್ರೀಜಯತೀರ್ಥರು, ದ್ವೈತಕುಲತಿಲಕ ಶ್ರೀಶ್ರೀಪಾದರಾಜರು, ವ್ಯಾಸತ್ರಯಗಳ ಶ್ರೀವ್ಯಾಸರಾಜರು, ಯುಕ್ತಿಮಲ್ಲಿಕೆಯ ಶ್ರೀವಾದಿರಾಜರು, ಭಾವಬೋಧಕಾರ ಶ್ರೀರಘೂತ್ತಮರು, ಕಲಿಯುಗದ ಕಲ್ಪವೃಕ್ಷ ಕಾಮಧೇನು ಎನ್ನಿಸಿರುವ ಶ್ರೀರಾಘವೇಂದ್ರರು ಇವರ ಪರಂಪರೆಯ ಯತಿಶೇಖರರು. ಪರಮತಧುರೀಣರಾಗಿದ್ದ ತ್ರಿವಿಕ್ರಮಪಂಡಿತರು ಇವರಿಗೆ ಮಣಿದು, ಇವರ ಪರಮಪ್ರಿಯಶಿಷ್ಯರಲ್ಲೊಬ್ಬರೆನ್ನಿಸಿದರು. ಶ್ರೀಪುರಂದರದಾಸರು, ಶ್ರೀಕನಕದಾಸರು, ಶ್ರೀವಿಜಯದಾಸರು, ಶ್ರೀಜಗನ್ನಾಥದಾಸರು, ಶ್ರೀಗೋಪಾಲದಾಸರು ಇವರ ಉಪದೇಶಾಮೃತವನ್ನು ಕನ್ನಡದಲ್ಲಿ ಆವಿಷ್ಕರಿಸಿದ ಪ್ರಸಿದ್ಧ ಹರಿದಾಸರು.

ಶ್ರೀಮದಾಚಾರ್ಯರ ಪ್ರತಿಯೊಂದು ಕೃತಿಯೂ ಅವರ ಪ್ರತಿಕೃತಿ. ನಿಜವಾದ ಅರ್ಥದಲ್ಲಿ ಅವರ ಸುವರ್ಣಪ್ರತೀಕ. ಸಾಲಿಗ್ರಾಮ, ತುಳಸಿಗಳಂತೆ ವೈಷ್ಣವರ ಮನೆಮನೆಗಳಲ್ಲಿ ಇರಲೇಬೇಕಾದ ಅಪೂರ್ವನಿಧಿ. ಅವರ ಸರ್ವಮೂಲಕೃತಿಗಳಂತೂ ಅವರ ಚಲಪ್ರತಿಮೆಯೇ ಸರಿ: **ರೂಪಮನ್ಯದಿವ ಧನ್ಯಮಾತ್ಮನಃ.** ಅವುಗಳ ಅಧ್ಯಯನದಂತೆ ಅವುಗಳ ನಿತ್ಯಪೂಜೆಯೂ ಸರ್ವಾನಿಷ್ಟನಿವಾರಕ, ಸಮಸ್ತಮಂಗಲಕಾರಕ; ಅವುಗಳನ್ನು ಓದಿದವರು ಪೂಜಿಸುವರು; ಪೂಜಿಸುವವರು ಓದುವಂತಾಗುವರು; ಆ ಬಳಿಕ ಮುಂಚೆಗಿಂತ ಹೆಚ್ಚಾಗಿ ಅವರನ್ನು ಪೂಜಿಸತೊಡಗುವರು.

ಸುಮಧ್ವವಿಜಯ ದಾಖಲಿಸಿರುವಂತೆ ಶ್ರೀಮದಾಚಾರ್ಯರಿಂದ ರಚಿತವಾದ ಕೃತಿಗಳು ಅಸಂಖ್ಯ. ಆದರೆ ಅವರ ಮೂವತ್ತೇಳು ಕೃತಿಗಳು ಸರ್ವಮೂಲ ಎಂಬುದಾಗಿ ಅಧ್ಯಯನ ಪರಂಪರೆಯಲ್ಲಿ ಮಾನ್ಯವಾಗಿವೆ. ಬ್ರಹ್ಮಸೂತ್ರ, ಗೀತೆ, ಉಪನಿಷತ್ತುಗಳು, ಋಗ್ವೇದ, ಇತಿಹಾಸಪುರಾಣಗಳು, ಪ್ರಕರಣಗಳು, ಸ್ತೋತ್ರಗಳು, ಆಚಾರಗ್ರಂಥಗಳು ಎಂಬುದಾಗಿ ಅವರ ಗ್ರಂಥಗಳು ಸಮಸ್ತ ಮೂಲಗ್ರಂಥಗಳ ಭಾವವನ್ನು ಅನಾವರಣಗೊಳಿಸಿವೆ. ನಖಸ್ತುತಿ ಹಾಗೂ ದ್ವಾದಶಸ್ತೋತ್ರ ಅವರ ಸ್ತೋತ್ರಕೃತಿಗಳು. ಕಂದುಕಸ್ತುತಿ ಎಂಬ ಮತ್ತೊಂದು ಸ್ತೋತ್ರಕೃತಿ ಅವರ ಬಾಲ್ಯದ ರಚನೆ.

## ದ್ವಾದಶಸ್ತೋತ್ರ

ದ್ವಾದಶಸ್ತೋತ್ರವು ಸ್ತೋತ್ರರಾಜ; ಸ್ತೋತ್ರಸಾಹಿತ್ಯದ ಮಕುಟಮಣಿ; ಇದು ಹನ್ನೆರಡು ಸ್ತೋತ್ರ (ಅಥವಾ ಅಧ್ಯಾಯ)ಗಳ ಒಂದು ಗುಚ್ಛ – ಅವುಗಳ ವಿವರ ಹೀಗಿದೆ :

೧. **ಆಪಾದಸ್ತೋತ್ರ** – ಶ್ರೀಹರಿಯ ಆಪಾದಮೌಲಿಪರ್ಯಂತ ವರ್ಣನೆ.

೨. ಶ್ರೀಹರಿಯ **ಮಹಾಮಾಹಾತ್ಮ್ಯದ** ಭವ್ಯಸ್ವರೂಪದ ಚಿತ್ರಣ.

೩. **ಹರ್ಯಷ್ಟಕ** – ಅವರ ಉಪದೇಶ ಹಾಗೂ ಸಿದ್ಧಾಂತದ ಸಾರಸರ್ವಸ್ವ.

೪. **ಹರಿಸ್ತವನ(ಅಷ್ಟಕ)** – ಮೂರನೆಯ ಸ್ತೋತ್ರದ ಮುಂದುವರೆದ ಭಾಗದಂತಿರುವ ಈ ಕೃತಿಯಲ್ಲಿ ಭಗವಂತನ ಅನಂತಕಲ್ಯಾಣಗುಣಪರಿಪೂರ್ಣತ್ವ, ಸಕಲದೋಷದೂರತ್ವ, ಭಕ್ತವಾತ್ಸಲ್ಯ ಮೊದಲಾದ ವಿಷಯಗಳು ನಿರೂಪಣೆ.

೫. **ಹರಿಗೀತಿ** – ಭಗವಂತನಾದ ವಾಸುದೇವನ ಕೇಶವಾದಿದ್ವಾದಶಮೂರ್ತಿಗಳ ಸ್ತೋತ್ರ; ಮತ್ತೊಂದು ರೀತಿಯಲ್ಲಿ ದ್ವಾದಶಮಾಸಗಳ ನಿಯಾಮಕರೂಪಗಳ ಸ್ತುತಿ; ಅಧಿಕಮಾಸದ ಪುರುಷೋತ್ತಮರೂಪದ ಸ್ತುತಿಯು ಸಹ.

೬. **ಹರಿಗಾಥಾ** – ದಶಾವತಾರಸ್ತೋತ್ರ.

೭. **ಶ್ರೀಸ್ತುತಿ** – ಮಹಾಲಕ್ಷ್ಮಿಯ ವಿಶ್ವಸ್ಥಿತ್ಯಾದಿಕರ್ತೃತ್ವದ ವರ್ಣನೆ. ಬ್ರಹ್ಮ, ರುದ್ರ, ಶೇಷ ಹಾಗೂ ಗರುಡರ ವಿಶೇಷ ಮಾಹಾತ್ಮ್ಯದ ನಿರೂಪಣೆ. ದೇವತೆಗಳು ಹಾಗೂ ಋಷಿಗಳ ಹಿರಿಮೆಯ ವರ್ಣನೆ. ಬ್ರಹ್ಮಾದಿಸಮಸ್ತದೇವತೆಗಳ ಸಮಸ್ತ ಸಾಮರ್ಥ್ಯವೂ ಲಕ್ಷ್ಮೀಕಟಾಕ್ಷದ ಫಲ. ಲಕ್ಷ್ಮಿಯ ಹಿರಿಮೆಗೆ ಭಗವತ್ಕಟಾಕ್ಷವೇ ಮೂಲ ಎಂಬ ಮಹಾಪ್ರಮೇಯವನ್ನು ಅನನ್ಯ ರೀತಿಯಲ್ಲಿ ವರ್ಣಿಸುವ ಈ ಕೃತಿ ಶ್ರೀಸ್ತುತಿ ಎಂದೇ ಪ್ರಸಿದ್ಧ. **ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ** ಎಂಬುದು ಪ್ರತಿಶ್ಲೋಕದ ಚತುರ್ಥಚರಣವಾಗಿ ಬಂದಿದೆ. ಸ್ತೋತ್ರಪ್ರಪಂಚ-ದಲ್ಲಿಯೇ ಅನುಪಮವೂ, ಅದ್ಭುತವೂ ಆದ ರಚನಾಸಂವಿಧಾನ ಇದರ ವೈಶಿಷ್ಟ್ಯ. ಸಕಲದೇವತಾಸ್ತೋತ್ರಕ್ಕೂ ಮಾರ್ಗದರ್ಶಕವಾದ ಅತ್ಯಂತರೋಚಕವಾದ ಕೃತಿ.

೮. **ಪ್ರೀಣಯಾಮೋ ವಾಸುದೇವಂ** ಎಂಬ ಪಲ್ಲವಿಯ ದ್ವಾದಶಶ್ಲೋಕಗಳು ಇದರಲ್ಲಿವೆ. ಭಗವಂತನ ಸೃಷ್ಟಿಸ್ಥಿತ್ಯಾದಿಕರ್ತೃತ್ವ ಮೊದಲಾದ ವಿಶಿಷ್ಟವೈಭವವನ್ನು ಅತ್ಯಂತಪರಿಣಾಮಕಾರಿಯಾಗಿ ನಿರೂಪಿಸುವ ಇದರ ಗೇಯತೆ ಅನ್ಯಾದೃಶವಾದುದು. ಇದರ ಪ್ರತಿಶ್ಲೋಕವು ಅನುಪ್ರಾಸಭರಿತವಾಗಿದ್ದು ಇಲ್ಲಿಯ ಆದಿಪ್ರಾಸವಂತೂ ಹರಿದಾಸಸಾಹಿತ್ಯದ ವಿಶಿಷ್ಟಲಕ್ಷಣಗಳಲ್ಲೊಂದಾದ ದ್ವಿತೀಯಾಕ್ಷರಪ್ರಾಸದ ಪರಿಕಲ್ಪನೆಗೆ ಮುಖ್ಯಸ್ಫೂರ್ತಿ ಎನ್ನಬಹುದು.

೯. **ಹರಿನುತಿ** – **'ಶುಭತಮಕಥಾಶಯ ಪರಮ ಸದೋದಿತ ಜಗದೇಕಕಾರಣ ರಾಮ ರಮಾರಮಣ'** ಎಂಬುದಾಗಿ ಪ್ರತಿಶ್ಲೋಕದ ಉತ್ತರಾರ್ಧವು ಪಲ್ಲವಿಯಂತಿರುವುದು ಈ ಸ್ತೋತ್ರದ ವಿಶೇಷ. ಇದರಲ್ಲಿ ಭಗವತ್ಸ್ವರೂಪದ ಚಿತ್ರಣದೊಂದಿಗೆ ದಶಾವತಾರಗಳ ಬೇರೊಂದು ಬಗೆಯ ಸ್ತುತಿ ಇದರಲ್ಲಿದೆ. ಒಂದರ್ಥದಲ್ಲಿ ಇದು ಅವರ ಆರನೆಯ ಅಧ್ಯಾಯಕ್ಕೆ ವಿವರಣರೂಪವೂ ಆಗಿದೆ.

೧೦. **ಹರಿಗಾಥಾ** – ಆರನೆಯ ಸ್ತೋತ್ರದಂತೆ ಇದೂ ಸಹ ಹರಿಗಾಥಾಸ್ತೋತ್ರವೇ ಆಗಿದೆ. **ಕರುಣಾಪೂರ್ಣ ವರಪ್ರದಚರಿತಂ ಜ್ಞಾಪಯ ಮೇ ತೇ** ಎಂಬ ಉತ್ತರಾರ್ಧವನ್ನು ಪ್ರತಿಶ್ಲೋಕಕ್ಕೂ ಪಲ್ಲವಿಯಂತೆ ಹೊಂದಿರುವ ಈ ಕೃತಿ ಮತ್ತೊಂದು ಬಗೆಯಲ್ಲಿ ಭಗವಂತನ ಆಪಾದಮೌಲಿಪರ್ಯಂತ ವರ್ಣನೆಯಾಗಿದ್ದು ಪ್ರಥಮಸ್ತೋತ್ರಕ್ಕೆ ವಿವರಣರೂಪವಾಗಿದೆ.

೧೧. **ಹರಿಸ್ತೋತ್ರ** – ಒಂಭತ್ತು ಹಾಗೂ ಹತ್ತನೆಯ ಸ್ತೋತ್ರಗಳಲ್ಲಿರುವಂತೆ, ಪ್ರತಿಶ್ಲೋಕಕ್ಕೂ ಇಲ್ಲಿ ಉತ್ತರಾರ್ಧಪಲ್ಲವಿಯಂತೆ ಪುನರಾವರ್ತಿತವಾಗಿದೆ. ಅವರ ನಖಸ್ತುತಿ ಶ್ರೀನರಸಿಂಹನ ನಖಗಳ ಸ್ತುತಿಯಾಗಿರುವಂತೆ ಈ ಸ್ತುತಿ ಭಗವಂತನ ಪಾದದ ಸ್ತೋತ್ರವಾಗಿದೆ. ಮತ್ತೊಂದು ರೀತಿಯಲ್ಲಿ ಇದು ಎರಡನೆಯ ಅಧ್ಯಾಯದಂತೆ ಭಗವತ್ಸ್ವರೂಪವರ್ಣನೆಯೂ ಆಗಿದ್ದು ತತ್ತ್ವಚಿಂತನೆಗೆ ಅಪೂರ್ವ ನೆರವನ್ನು ನೀಡುವುದು.

೧೨. **ಆನಂದತೀರ್ಥಪರಾನಂದವರದ** – ಹಿಂದಿನ ಮೂರು ಸ್ತೋತ್ರಗಳಂತೆ ಇದೂ ಸಹ ಉತ್ತರಾರ್ಧವನ್ನು ಪಲ್ಲವಿಯನ್ನಾಗಿ ಹೊಂದಿದೆ. ಭಕ್ತನು ಭಗವತ್ಸಾಕ್ಷಾತ್ಕಾರದ ಹಂತದಲ್ಲಿ ತನ್ಮಯನಾಗಿ ಸ್ತುತಿಸುವ ವಿಶಿಷ್ಟಪರಿಯನ್ನು ತೆರೆದಿಡುವ ಅದ್ವಿತೀಯಸ್ತೋತ್ರ. **'ಆನಂದತೀರ್ಥ'** ಎಂಬ ಪದ ಅಂಕಿತದಂತೆ ಬಳಕೆಯಾಗಿದ್ದು ಇದು ಹರಿದಾಸರ ಕೃತಿಗಳ ಅಂಕಿತದ ಪರಿಕಲ್ಪನೆಗೆ ಮುಖ್ಯ ಪ್ರೇರಣೆಯಂತಿದೆ.

★★

ದ್ವಾದಶಸ್ತೋತ್ರ ಸಂಸ್ಕೃತಸಾಹಿತ್ಯದಲ್ಲೇ ಒಂದು ಅಪೂರ್ವ ಸ್ತೋತ್ರ ಕೃತಿ. ಮೇಲ್ನೋಟಕ್ಕೇ ಇದರ ವೈವಿಧ್ಯ ಗಮನಸೆಳೆಯುತ್ತದೆ. ಅಧ್ಯಾಯರೂಪದಲ್ಲಿ ಹೀಗೆ ಪ್ರಸಿದ್ಧವಿರುವ ಮತ್ತೊಂದು ಸ್ತೋತ್ರಕೃತಿ ಪಂಚರಾತ್ರಾಂತರ್ಗತವಾದ ಜಿತಂತೇಸ್ತೋತ್ರ ಮಾತ್ರ; ಅದು ಬ್ರಹ್ಮಕೃತ; ಇದು ಭಾವಿಬ್ರಹ್ಮಕೃತ ಎಂಬುದು ವಿಶೇಷ.

ಮೊದಲ ಹಾಗೂ ಹತ್ತನೆಯ ಅಧ್ಯಾಯಗಳಲ್ಲಿ ಬರುವ ಭಗವಂತನ ಆಪಾದಮೌಲಿ- ಪರ್ಯಂತವರ್ಣನ ಭಾಗವತದಲ್ಲಿ ಬರುವ ಕಪಿಲಗೀತೆಯಲ್ಲಿನ ಭಗವದ್ಧ್ಯಾನ ಹಾಗೂ ದ್ವಿತೀಯಸ್ಕಂಧದಲ್ಲಿನ ವಿರಾಡ್ರೂಪಚಿಂತನೆಗಳ ವಿವರಣೆಯಂತಿದೆ. ಆ ಅರ್ಥದಲ್ಲಿ ಅವೂ ಭಾಗವತತಾತ್ಪರ್ಯವೇ ಆಗಿವೆ. ಪರಮಾತ್ಮನ ಪಾದಾದಿಅವಯವಗಳೂ ಪರಿಪೂರ್ಣ, ಹಾಗೂ ವಂದ್ಯ ಎಂಬ ಭವ್ಯ ಚಿತ್ರ ಇವುಗಳಲ್ಲಿದೆ.

ದ್ವಾದಶಸ್ತೋತ್ರವು ತನ್ನ ಹೆಸರಿನಿಂದಲೇ ದ್ವಾದಶಸ್ಕಂಧಗಳ ಭಾಗವತವನ್ನು ಜ್ಞಾಪಿಸುತ್ತದೆ. ಹನ್ನೆರಡು ಅಧ್ಯಾಯಗಳು ಹನ್ನೆರಡು ಸ್ಕಂಧಗಳ ಭಾಗವತದ ಅನೇಕ ಭಾಗಗಳಿಗೆ ವಿವರಣೆಯಂತಿದ್ದು, ಸ್ತೋತ್ರರೂಪ ಭಾಗವತತಾತ್ಪರ್ಯನಿರ್ಣಯಸಂಗ್ರಹದಂತಿದೆ.

**ಸಂತತಂ ಚಿಂತಯೇಽನಂತಮಂತಕಾಲೇ ವಿಶೇಷತಃ ।**
**ನೈವೋದಾಪುರ್ಗೃಣಂತೋಽಂತಂ ಯದ್ಗುಣಾನಾಮಜಾದಯಃ ॥**

ಎಂಬ ಪ್ರಥಮಾಧ್ಯಾಯದ ಕೊನೆಯ ಶ್ಲೋಕ ಪ್ರತಿಯೊಬ್ಬರ ಬಾಳಿಗೆ ಆಚಾರ್ಯರು ನೀಡಿದ ಭವ್ಯಸಂದೇಶ; ಒಂದರ್ಥದಲ್ಲಿ ಇದನ್ನು ಒಂದೇ ಶ್ಲೋಕದ ಭಾಗವತಸಾರ ಎನ್ನಬಹುದು.

**ಕುರು ಭುಂಕ್ಷ್ವ ಚ** ಎಂಬ ಮೂರನೆಯ ಅಧ್ಯಾಯ ಭಗವದ್ಗೀತೆಯ ಭಾಷ್ಯರೂಪವಾಗಿದ್ದು ಕರ್ಮಯೋಗದ ಸಾರವಾದರೆ, ಶ್ರೀಹರಿಯು ಪುರುಷೋತ್ತಮ ಎಂಬುದಾಗಿ ನಿರೂಪಿಸುತ್ತಾ, ಹದಿನೈದನೆಯ ಅಧ್ಯಾಯದ ಪುರುಷೋತ್ತಮಯೋಗದ ಸಾರವಾಗಿದೆ. ಕೇಶವಾದಿ ರೂಪಗಳ ಸ್ತೋತ್ರ ಮಾಸಮೂರ್ತಿಯ ಸ್ತುತಿಯಾಗಿದ್ದರೆ, ಆರು ಮತ್ತು ಒಂಭತ್ತನೆಯ ಅಧ್ಯಾಯಗಳು ದಶಾವತಾರಸ್ತುತಿಯಾಗಿದ್ದು ಭಗವಂತನ ಸಕಲ ಅವತಾರಗಳ ಚಿಂತನೆಗೆ ದಾರಿದೀಪದಂತಿವೆ. ಏಳನೆಯ ಅಧ್ಯಾಯ ಬ್ರಹ್ಮಾದಿಗಳ ಹಿರಿಮೆ, ಅವರ ಹಿರಿಮೆಯಲ್ಲಿ ಲಕ್ಷ್ಮೀ ಅನುಗ್ರಹದ ಪಾತ್ರ, ಮಹಾಲಕ್ಷ್ಮಿಗೂ ಶ್ರೀಹರಿಯ ಅನುಗ್ರಹದ ಅಗತ್ಯತೆ ಮೊದಲಾದ ಪ್ರಮೇಯಗಳನ್ನು ಹೃದಯಂಗಮವಾಗಿ ನಿರೂಪಿಸುವುದು.

ಒಟ್ಟು ಹನ್ನೆರಡು ಸ್ತೋತ್ರಗಳಲ್ಲಿ ಮೊದಲ ಆರು ಅಧ್ಯಾಯಗಳಿಗೆ ಪಲ್ಲವಿ ಕಂಡುಬರುವುದಿಲ್ಲ. ಮುಂದಿನ ಆರು ಅಧ್ಯಾಯಗಳಿಗೆ ಧ್ರುವಪದದಂತೆ ಪಲ್ಲವಿ ಇರುವುದು ವಿಶೇಷ.

ಪ್ರತಿಯೊಂದು ಸ್ತೋತ್ರವೂ ವಿವಿಧ ರಾಗತಾಳಗಳಿಗೆ ಹೊಂದಬಲ್ಲ ಅಪೂರ್ವ ಗೇಯತೆ- ಯನ್ನು ಹೊಂದಿರುವುದು ಇದರ ಮತ್ತೊಂದು ವಿಶೇಷ. ಸಂಸ್ಕೃತದಲ್ಲಿ ಗೀತಗೋವಿಂದವನ್ನು ಬಿಟ್ಟರೆ ಬೇರಾವ ಕೃತಿಗೂ ಇಂತಹ ರಾಗತಾಳಗಳ ವೈವಿಧ್ಯ ಹಾಗೂ ಗೇಯತೆ ಅಷ್ಟಾಗಿ ಕಂಡುಬರುವುದಿಲ್ಲ. ಗೀತಗೋವಿಂದವು ಕೃಷ್ಣಸ್ತೋತ್ರರೂಪಕೃತಿಯೇ ಆದರೂ ಅದರಲ್ಲಿ ಶೃಂಗಾರರಸಕ್ಕೇ ಪ್ರಾಧಾನ್ಯ. ಆದರೆ ಈ ದ್ವಾದಶಸ್ತೋತ್ರ ಹಾಗಲ್ಲ. ಇದು ಪರಿಶುದ್ಧವಾದ

ಭಕ್ತಿಕಾವ್ಯವಾಗಿದ್ದು, ಸರಳತೆಯಲ್ಲೂ ಗೀತಗೋವಿಂದಕ್ಕಿಂತ ಮಿಗಿಲು, ಅರ್ಥದಲ್ಲಂತೂ ಇದಕ್ಕೆ ಇದೇ ಸಾಟಿ. ಗೀತಗೋವಿಂದದಲ್ಲಿ ಭಗವಂತನ ಪ್ರಸ್ತಾಪವಿದ್ದರೂ ಅದು ದಾರ್ಶನಿಕ ಕೃತಿ ಅಲ್ಲ; ಕಾವ್ಯಮಾತ್ರ. ದ್ವಾದಶಸ್ತೋತ್ರ ಸ್ತೋತ್ರರೂಪದ ಕಾವ್ಯವಾಗಿದ್ದೂ ಮೂಲತಃ ಅಪೂರ್ವವಾದ ಶಾಸ್ತ್ರ. ಆದ್ದರಿಂದ ಇದು ರಮ್ಯತೆಯಿಂದಾಗಿ ಹೃದಯವನ್ನು ತಟ್ಟುವಂತೆ, ತಾತ್ತ್ವಿಕತೆಯಿಂದಾಗಿ ಬುದ್ಧಿಯನ್ನೂ ಮುಟ್ಟುವುದು. ಅರ್ಥವೈಪುಲ್ಯಕ್ಕಂತೂ ದ್ವಾದಶಸ್ತೋತ್ರಕ್ಕೆ ಸಾಟಿಯಾದ ಮತ್ತೊಂದು ಸ್ತೋತ್ರಕೃತಿಯೇ ಇಲ್ಲ. ಅದಕ್ಕೆ ಅದೇ ಸಾಟಿ. ವೇದೋಪನಿಷತ್ತುಗಳ ದರ್ಶನದ ಸಾರಸರ್ವಸ್ವ ಇಲ್ಲಿ ಮಡುಗಟ್ಟಿ ನಿಂತಿದೆ.

★★

ಹರಿದಾಸಸಾಹಿತ್ಯವು ಯಾವುದೇ ಭಾಷೆಯಲ್ಲಿಯೂ ಕಂಡುಬರದ ಕನ್ನಡದ ಅಪೂರ್ವ ದಾರ್ಶನಿಕ ಭಕ್ತಿಸಾಹಿತ್ಯ; ದರ್ಶನ, ಸಾಹಿತ್ಯ ಹಾಗೂ ಸಂಗೀತಗಳ ತ್ರಿವೇಣೀಸಂಗಮ. ಜನಸಾಮಾನ್ಯರ ನಿತ್ಯಜೀವನದಲ್ಲೂ ಆವರಿಸಿಕೊಂಡಿರುವ ಇದರ ಹಿರಿಮೆ ಅನ್ಯಾದೃಶ. ಆದರೆ ಅದರ ಹಿರಿಮೆ ಗರಿಮೆಗಳ ಮೂಲ ಸೆಲೆ ದ್ವಾದಶಸ್ತೋತ್ರ ಎಂಬುದನ್ನು ಜನ ಗಮನಿಸಿಲ್ಲ. ಹರಿದಾಸಸಾಹಿತ್ಯದಲ್ಲಿ ತುಂಬಿರುವ ರಾಗತಾಳಗಳ ವೈವಿಧ್ಯ ದ್ವಾದಶಸ್ತೋತ್ರದ ನೇರ ಸ್ಫೂರ್ತಿ. ದರ್ಶನವಂತೂ ಅದರದ್ದೇ. ಹರಿದಾಸಸಾಹಿತ್ಯದಲ್ಲಿ ಭಗವಂತನ ಆಪಾದಮೌಲಿಪರ್ಯಂತ ಅವಯವಗಳ ವರ್ಣನೆ, ಭಕ್ತಜನರಿಗಾಗಿ ಸಂದೇಶ, ಉಪದೇಶಗಳು, ಕೇಶವನಾಮ, ದಶಾವತಾರಸ್ತೋತ್ರ, ಲಕ್ಷ್ಮೀಬ್ರಹ್ಮಾದಿ ಇತರ ದೇವತೆಗಳ ಸ್ತುತಿ ಎಲ್ಲವೂ ದ್ವಾದಶಸ್ತೋತ್ರದ ಪ್ರೇರಣೆಯ ಫಲಶ್ರುತಿ; ಎಂದರೆ ಈ ಕೃತಿ ಅಂತಹ ಒಂದು ಅತ್ಯಂತ ಪ್ರಭಾವಿಯಾದ ಸಾಹಿತ್ಯಪ್ರಕಾರಕ್ಕೆ ಜನ್ಮನೀಡಿತು. **ಪ್ರೀಣಯಾಮೋ ವಾಸುದೇವಂ, ಶ್ರೀರ್ಯತ್ಕಟಾಕ್ಷ-ಬಲವತ್ಯಜಿತಂ ನಮಾಮಿ, ಕರುಣಾಪೂರ್ಣ ವರಪ್ರದಚರಿತಂ ಜ್ಞಾಪಯ ಮೇ ತೇ. ಶುಭತಮಕಥಾಶಯ ಪರಮ ಸದೋದಿತ ಜಗದೇಕಕಾರಣ ರಾಮ ರಮಾರಮಣ, ಆನಂದಸ್ಯ ಪದಂ ವಂದೇ ಬ್ರಹ್ಮೇಂದ್ರಾದ್ಯಭಿವಂದಿತಂ** ಇವು ದಾಸಸಾಹಿತ್ಯದಲ್ಲಿ ಪಲ್ಲವಿಗಳಿಗೆ ಸ್ಫೂರ್ತಿಯಾದರೆ, **ಆನಂದತೀರ್ಥಪರಾನಂದವರದ** ಎಂಬುದು ಅಂಕಿತದ ಪರಿಕಲ್ಪನೆಗೆ ನಾಂದಿ ಹಾಡಿದೆ.

★★

ಇಂತಹ ಸ್ತೋತ್ರರಚನೆಯನ್ನು ಆಚಾರ್ಯರು ಪ್ರಾರಂಭಿಸಿದ್ದು ಉಡುಪಿಯಲ್ಲಿ; ಅದನ್ನು ರಚಿಸಿ ಹಾಡುತ್ತಲೇ ಸಮುದ್ರತೀರದ ಬಳಿಗೆ ಶಿಷ್ಯರೊಂದಿಗೆ ಸಾಗಿದರು. ಆಗಲೇ ಹಡಗೊಂದು ಮುಳುಗುವಂತಾಗುವ ಘಟನೆ ನಡೆದದ್ದು. ಆಚಾರ್ಯರು ಹಡಗನ್ನು ಮುಳುಗದಂತೆ ಪಾಲಿಸಿದರು. ಹಡಗಿನ ಯಜಮಾನ ಆಚಾರ್ಯರಿಗೆ ಗೋಪೀಚಂದನಗಡ್ಡೆಯನ್ನು ಸಮರ್ಪಿಸಿದ. ಅದರಿಂದ ಶ್ರೀಕೃಷ್ಣ ಪ್ರಾದುರ್ಭವಿಸಿದ. ಆ ವೇಳೆಗೆ ದ್ವಾದಶಸ್ತೋತ್ರದ

ಐದು ಅಧ್ಯಾಯಗಳು ಪೂರೈಸಿದ್ದವು. ಎಂದರೆ ದ್ವಾದಶಸ್ತೋತ್ರ ಹಾಡಿದ ಮೇಲೆ ಅಲ್ಲ; ಹಾಡುತ್ತಿರುವಾಗಲೇ ಶ್ರೀಕೃಷ್ಣ ಕಣ್ಣಿಗೆ ಕಾಣಿಸಿದ. ಭೀಷ್ಮರು ವಿಷ್ಣುಸಹಸ್ರನಾಮ ಹೇಳಿದಾಗ ಭಗವಂತನಾದ ಕೃಷ್ಣ ಅವರ ಪಕ್ಕದಲ್ಲಿ ಕುಳಿತು ಕೇಳಿದ. ಆದರೆ ಶ್ರೀಮದಾಚಾರ್ಯರು ದ್ವಾದಶಸ್ತೋತ್ರ ಹಾಡಿದಾಗ ದ್ವಾರಕೆಯಿಂದ ಧಾವಿಸಿ ಬಂದ, ಎದುರಿಗೆ ನಿಂತ, ನಲಿದು ಕೇಳಿದ. ದ್ವಾದಶಸ್ತೋತ್ರದ ಮಹಿಮೆ ಇಂತಹದು. ಇದನ್ನು ಶ್ರದ್ಧೆಯಿಂದ ಪಠಿಸುವವರಿಗೆ ಭಗವದ್ದರ್ಶನ ಖಚಿತ ಎಂಬ ಸೂಚನೆಯನ್ನು ಈ ಹಿನ್ನೆಲೆಯಲ್ಲಿ ಗುರುತಿಸಬಹುದು. ಆಚಾರ್ಯರು ಕೃಷ್ಣನನ್ನು ಕಂಡ ಸಂಭ್ರಮದಲ್ಲಿ ಆ ರೂಪವನ್ನೇ ವಿಶೇಷವಾಗಿ ಸ್ತುತಿಸಿ ದಶಾವತಾರಸ್ತುತಿ ರಚಿಸಿದರು ಎಂಬುದಾಗಿ ಶ್ರೀವಿಶ್ವಪತಿತೀರ್ಥರು ಬರೆದಿರುವರು:

**'ಏನಾಂ ಕಾರ್ಷ್ಣೀಂ ಕಥಾಂ ಪಠತ್ಯೈವಾಚಾರ್ಯೇಣ ರೂಪ್ಯಪೀಠಾಧಿವಾಸಃ ಶ್ರೀಕೃಷ್ಣಃ ಸಮುದ್ರಜಠರಾದಾನೀತಃ' ಇತಿ ಆಭಾಣಕಮಾಭಣಂತಿ ಸಂಪ್ರದಾಯವಿದಃ । ಅತ ಏವ ಅಸ್ಮಿನ್ ಸ್ತೋತ್ರೇ 'ದೇವಕಿನಂದನ ನಂದಕುಮಾರ' ಇತ್ಯಾರಭ್ಯ 'ಆನಂದಸುಪೂರ್ಣ' ಇತ್ಯಂತಂ ಪ್ರಥಮತ ಏವ ಮೂಲಕೋಶೇಷು ಪಠ್ಯತೇ । ತತ್ರ ಚೇತ್ಥಮಾಭಾಣಕಂ ವರ್ಣಯಂತಿ । ರೂಪ್ಯಪೀಠಪುರಾತ್ ಶ್ರೀಕೃಷ್ಣಾನಯನಾರ್ಥಂ ಪಶ್ಚಿಮಸಮುದ್ರಂ ಪ್ರತಿ ಗಮನಸಮಯೇ 'ವಂದೇ ವಂದ್ಯಮ್' ಇತ್ಯಾದಿನಾ ಭಗವಂತಂ ಸ್ತುವನ್ನೇವ ಗತಃ ಶ್ರೀಮದಾನಂದತೀರ್ಥಮುನಿಃ ಸಮುದ್ರತೀರಂ ಗತಃ ಸನ್ ದ್ವಾರಕಾತಃ ಸಮಾಗತಂ ಶ್ರೀಕೃಷ್ಣಂ ದೃಷ್ಟ್ವಾ ಸಮನಂತರಮೇವ 'ದೇವಕಿನಂದನ' ಇತ್ಯಾದಿನಾ 'ಆನಂದಸುಪೂರ್ಣ' ಇತ್ಯಂತೇನ ಶ್ರೀಕೃಷ್ಣಂ ಸ್ತುತ್ವಾ ಅನಂತರಂ ಚ 'ಮತ್ಸ್ಯಕರೂಪ' ಇತ್ಯಾದಿನಾ ದಶಾವತಾರಾತ್ಮಕತಯಾ ಚ ತಮೇವ ಸ್ತುತವಾನಿತಿ । ಅತ ಏವ 'ರಾಘವ ರಾಘವ' 'ಪಾಂಡವಬಂಧೋ' 'ದೈತ್ಯವಿಮೋಹಕ' ಇತ್ಯಾದಿರೂಪೇಣ ದಶಾವತಾರಕ್ರಮೇಣ ಕೃಷ್ಣಸ್ತುತಿಃ ಪೃಥಕ್ ಚ ಮೂಲಗ್ರಂಥೇಷು ಪಠ್ಯತೇ ॥**

**– ಶ್ರೀವಿಶ್ವಪತಿತೀರ್ಥಕೃತ ದ್ವಾದಶಸ್ತೋತ್ರವ್ಯಾಖ್ಯಾನ (೬/೮)**

ಇದು ಈ ಕೃತಿಯ ರಚನೆಯ ಹಿನ್ನೆಲೆಯ ವೈಭವವಾದರೆ, ಅದರ ಸಿದ್ಧಿಗೆ ನಿದರ್ಶನ ಸಹ.

★★

ಇಂದ್ರದೇವರು ಶ್ರೀಮದಾಚಾರ್ಯರ ಬಳಿ ವೃಷಭರೂಪದಿಂದ ಸೇವಕರಾಗಿದ್ದು ಆಚಾರ್ಯರ ಗ್ರಂಥಭಂಡಾರವನ್ನು ಹೊರುತ್ತಿದ್ದರು. ಪಾಠಕಾಲದಲ್ಲಿ ಅವರ ಬಳಿಯೇ ಕುಳಿತು ಶ್ರವಣ ಮಾಡುತ್ತಿದ್ದರು; ತಮ್ಮ ಅಪೂರ್ವ ಗ್ರಂಥಗಳಿಗೆ ಈ ಎತ್ತು ವ್ಯಾಖ್ಯಾನ ರಚಿಸುವುದು ಎಂದು ಒಮ್ಮೆ ಶ್ರೀಮದಾಚಾರ್ಯರು ನುಡಿದಾಗ ಕೆಲವು ಮತ್ಸರಿಗಳು ಅದನ್ನು ಹಾವು ಕಡಿದು ಸಾಯುವಂತೆ ಶಪಿಸಿದರಂತೆ. ಅದರಂತೆ ಹಾವು ಕಚ್ಚಿ ಅದು ಮೃತವೂ ಆಯಿತು. ಆಗ ಶ್ರೀಮದಾಚಾರ್ಯರು ದ್ವಾದಶಸ್ತೋತ್ರವನ್ನು ಪಠಿಸಿ ಅದರಿಂದ ಅಭಿಮಂತ್ರಿತವಾದ

ಜಲವನ್ನು ಆ ಎತ್ತಿಗೆ ಪ್ರೋಕ್ಷಿಸಿ ಅದನ್ನು ಪುನಃ ಬದುಕಿಸಿದರು. ಆ ಎತ್ತೇ ಮುಂದಿನ ಜನ್ಮದಲ್ಲಿ ಟೀಕಾಕೃತ್ಪಾದರೆನ್ನಿಸಿದ ಶ್ರೀಜಯತೀರ್ಥರು ಎಂಬುದಾಗಿ ಜಯತೀರ್ಥರ ಸ್ತೋತ್ರ, ವಿಜಯ, ಮೊದಲಾದ ಕೃತಿಗಳಲ್ಲಿ ಸ್ಪಷ್ಟವಾಗಿ ಉಕ್ತವಾಗಿದೆ.

ಈ ಮೂಲಕ ದ್ವಾದಶಸ್ತೋತ್ರದ ವಿಷಹರಸಾಮರ್ಥ್ಯವನ್ನು ಶ್ರೀಮದಾಚಾರ್ಯರು ಭಕ್ತವರ್ಗಕ್ಕೆ ತೋರಿಸಿರುವರು. ಅದರ ಸಂಕೇತವಾಗಿ ನೈವೇದ್ಯ ಸಮಯದಲ್ಲಿ ದ್ವಾದಶಸ್ತೋತ್ರವನ್ನು ಪಠಿಸುವ ಸಂಪ್ರದಾಯವಿದೆ. ಇದನ್ನು ನೈವೇದ್ಯಕಾಲದಲ್ಲಿ ಮಾತ್ರವೇ ಪಠಿಸಬೇಕು ಎಂಬುದು ಮಾತ್ರ ತಪ್ಪು ಕಲ್ಪನೆ. ಸಮಗ್ರವಾಗಿಯೂ, ಪ್ರತ್ಯೇಕವಾಗಿಯೂ ಪಠಿಸುವ ಅವಕಾಶ ಇರುವುದು ದ್ವಾದಶಸ್ತೋತ್ರ ಎಂಬ ಹೆಸರಿನಿಂದಲೇ ಸೂಚಿತ.

ಇದರ ಮೊದಲ ಅಕ್ಷರ **ವ(ವಂದೇ)**; ಕೊನೆಯ ಅಕ್ಷರ **ದ (ಆನಂದತೀರ್ಥ-ಪರಾನಂದವರದ)**. 'ವ' ಎಂಬುದು ಅಮೃತಬೀಜ; 'ದ' ಎಂದರೆ ಅದನ್ನು ಕೊಡುವವನು ಎಂದರ್ಥ. ಹೀಗೆ (ವಿಷವನ್ನು ಪರಿಹರಿಸಿ) ಅಮೃತವನ್ನು ನೀಡುವ ಅಪೂರ್ವಕೃತಿಯೆಂಬ ಸೂಚನೆ ಈ ಆದ್ಯಂತ ಅಕ್ಷರಗಳ ಜೋಡಣೆಯಲ್ಲೇ ಅಡಗಿದೆ.

ದ್ವಾದಶಸ್ತೋತ್ರವು ವಿವಿಧ ಆಯಾಮಗಳಲ್ಲಿ ಹೊಸಹೊಸ ಅರ್ಥಗಳ ಪ್ರವಾಹವನ್ನೇ ಹೊರಹೊಮ್ಮಿಸುವ ಅತ್ಯಂತ ಅಪೂರ್ವವಾದ ಸ್ತೋತ್ರಕೃತಿ. ಇಂತಹ ಅಪೂರ್ವ ಅರ್ಥವೈಭವದ ಮತ್ತೊಂದು ಸ್ತೋತ್ರಕೃತಿ ಸಂಸ್ಕೃತ ಸಾಹಿತ್ಯದಲ್ಲೇ ದುರ್ಲಭ. ಅತ್ಯಂತ ಸರಳಪದಗಳಿಂದ ಅತ್ಯಂತ ವಿಶಿಷ್ಟವಾದಂತಹ ಅರ್ಥಗಳನ್ನು ಅನಾಯಾಸವಾಗಿ ಗ್ರಹಿಸಲು ಸಾಧ್ಯವನ್ನಾಗಿಸುವ ಇಲ್ಲಿಯ ರಚನಾಸಂವಿಧಾನ ನಿಜಕ್ಕೂ ಅನನ್ಯ. ಪ್ರತಿ ಬಾರಿ ನೋಡಿದಾಗಲೂ ಹೊಸಹೊಸತಾಗಿಯೇ ಕಾಣುವ ವಿಲಕ್ಷಣ ಹಿರಿಮೆ ಈ ಕೃತಿಯದು. ವಿಷ್ಣುಸಹಸ್ರನಾಮದಲ್ಲಿನ ನೂರಾರು ನಾಮಗಳು ಇದರಲ್ಲಿ ಓತಪ್ರೋತವಾಗಿದ್ದು ಅದರ ಅರ್ಥವೈಭವವೂ ಇದರಲ್ಲಿ ಮೈದಾಳಿದೆ. ಸಮಗ್ರ ಸರ್ವಮೂಲಗ್ರಂಥಗಳನ್ನು ಓದಿದವರಿಗೆ ಅವುಗಳೆಲ್ಲವನ್ನು ಮನನ ಮಾಡುತ್ತಲೇ ಭಗವತ್ತತ್ತ್ವವನ್ನು ಚಿಂತಿಸಲು ಈ ಕೃತಿ ನೀಡುವ ಸಹಾಯ ಅತ್ಯಂತ ಅಪಾರ; ಹಾಗೆ ಓದದವರಿಗೆ ಗ್ರಂಥಗಳನ್ನು ಓದುವ ಪ್ರೇರಣೆಯೊಂದಿಗೆ ಸಿದ್ಧಾಂತದ ವಿಷಯಪ್ರವೇಶಿಕೆಯಾಗಿಯೂ ಇದು ಉಪಯುಕ್ತವೆನ್ನಿಸುವುದು. ಕೇಳುವವರ ಮನಸ್ಸನ್ನು ಸೂಜಿಗಲ್ಲಿನಂತೆ ಸೆಳೆದು ಸಂಸ್ಕೃತ, ಸಂಸ್ಕೃತಿ, ಸಂಗೀತ ಹಾಗೂ ತತ್ತ್ವಚಿಂತನೆಗಳ ರಸಸ್ಪರ್ಶವನ್ನು ಮಾಡಿಸುವ ಮಾಂತ್ರಿಕಶಕ್ತಿ ಇದರದು. ವಿಷ್ಣುಸಹಸ್ರನಾಮದಿಂದ ಅರ್ಚನೆ ವಿಹಿತವಾಗಿ-ರುವಂತೆ, ದ್ವಾದಶಸ್ತೋತ್ರದಿಂದ ನೈವೇದ್ಯ ವಿಹಿತವಾಗಿದೆ ಎಂಬುದನ್ನು ಗಮನಿಸಬೇಕು. ದ್ವಾದಶಸ್ತೋತ್ರದ ಪಠನೆಯಿಂದ ನೈವೇದ್ಯಪದಾರ್ಥಗಳಲ್ಲಿನ ವಿಷ ಮಾತ್ರವಲ್ಲದೆ, ಮನಸ್ಸಿನ ಕಾಮಕ್ರೋಧಾದಿಗಳ ವಿಷವೂ ಇನ್ನಿಲ್ಲದಂತೆ ಮಾಯವಾಗುವುದು. ಶ್ರೀಮದಾಚಾರ್ಯರೇ ತಿಳಿಸಿರುವಂತೆ ಇದು ಜ್ಞಾನದಾಯಕ, ಭಕ್ತಿಕಾರಕ, ಸಿದ್ಧಿದಾಯಕ ಹಾಗೂ ಮೋಕ್ಷಪ್ರಾಪಕವಾದ

ಆತ್ಯಮೋಘಕೃತಿ. ಸಕಲಾನಿಷ್ಟನಿವೃತ್ತಿಯೊಂದಿಗೆ, ಸರ್ವೇಷ್ಟಪ್ರಾಪ್ತಿಯನ್ನೂ ಈ ಕೃತಿಯ ಮೂಲಕ ಪಡೆಯಬಹುದು ಎಂದು ಸ್ವತಃ ಶ್ರೀಮದಾಚಾರ್ಯರೇ ಸಾರಿರುವರು: **ಅಭಿಯಾತಿ ತಯೋರಭೀಷ್ಟಂ; ಪಠತಃ ಪ್ರಿಯತೇ ಹರಿಃ; ಭವತಿ ಧ್ರುವಮುಚ್ಚಸುಖಮ್; ಹರಿಭಕ್ತಿವಿವರ್ಧನಶೌಂಡತಮಾ; ಶುಭಾ ನಿತ್ಯಸುಖಾರ್ಥಾ; ಪಠನ್ನಾನಂದತಾಮಿಯಾತ್.**

★★

ದ್ವಾದಶಸ್ತೋತ್ರವು ಒಂದು ರೀತಿಯಲ್ಲಿ ದ್ವಾದಶಾಕ್ಷರವಾಸುದೇವಮಂತ್ರದ ವಿವರಣೆ-ಯಂತೆಯೂ ಇದೆ. ಪ್ರಾರಂಭದ ಸ್ತೋತ್ರದ ಮೊದಲ ಶ್ಲೋಕದಲ್ಲಿ, ಐದನೆಯ ಅಧ್ಯಾಯದ ಮೊದಲನೆಯ ಶ್ಲೋಕದಲ್ಲಿ ಹಾಗೂ ಎಂಟನೆಯ ಅಧ್ಯಾಯದ ಪಲ್ಲವಿಯಲ್ಲಿ ವಾಸುದೇವಪದದ ಉಲ್ಲೇಖ ಹಾಗೂ ಮಾಹಾತ್ಮ್ಯ ವಿಶೇಷವಾಗಿ ನಿರೂಪಿತವಾಗಿದೆ. ಮೋಕ್ಷ ಕೊಡುವ ಭಗವದ್ರೂಪ ಎಂಬುದು ವಾಸುದೇವರೂಪದ ವಿಶೇಷತೆ: **ವಾಸುದೇವನಾಮಾ ಬಭೂವ ನಿಜಮುಕ್ತಿಪದಪ್ರದಾತಾ (ಮ.ಭಾ.ತಾ.ನಿ. ೧/೬).**

ಉಡುಪಿಯಲ್ಲಿ ಕೃಷ್ಣನ ಪ್ರತಿಷ್ಠಾಪನೆಯನ್ನು ಶ್ರೀಮದಾಚಾರ್ಯರು ಮಾಡಲು ಒಂದು ಕಾರಣ ಅದರ ದರ್ಶನದಿಂದ ಭಕ್ತವರ್ಗದ ಸಾಧನೆಗೆ ಬರುವ ವಿಘ್ನಗಳ ಪರಿಹಾರ: **ಸಿದ್ಧಿವಿಘ್ನಮುಖದೋಷಭೇಷಜಮ್**. ಆ ಶ್ರೀಕೃಷ್ಣರೂಪದ ವಿಶೇಷಸ್ತುತಿಯಾಗಿರುವ ಕಾರಣದಿಂದ ಇದು ವಿಘ್ನಪರಿಹಾರಕವಾದ ವಿಶಿಷ್ಟಸ್ತೋತ್ರವೂ ಆಗಿದೆ.

ದ್ವಾದಶಸ್ತೋತ್ರದಿಂದ ಅಭಿಮಂತ್ರಿತವಾದ ಜಲದ ಪ್ರೋಕ್ಷಣೆಯಿಂದ ಎತ್ತಿನರೂಪದಲ್ಲಿದ್ದ ಇಂದ್ರದೇವರು ಮುಂದೆ ಶ್ರೀಜಯತೀರ್ಥರಾಗಿ ನ್ಯಾಯಸುಧೆಯನ್ನು ಬರೆಯಲು ಕಾರಣವಾಯಿತು. ಎಂದರೆ ಇದು, ನ್ಯಾಯಸುಧೆಯ ಅಧ್ಯಯನಕ್ಕೆ ಅರ್ಹತೆಯನ್ನು ತಂದುಕೊಡುವ ವಿಶೇಷತೆಯನ್ನು ಸಹ ಹೊಂದಿದೆ.

ಇದರ ಏಳನೆಯ ಅಧ್ಯಾಯವು ಶ್ರೀಸ್ತುತಿ ಎಂದೇ ಪ್ರಸಿದ್ಧವಾಗಿದ್ದು, ಋಗ್ವೇದದ ಅಂಭೃಣೀಸೂಕ್ತದ ಶ್ಲೋಕರೂಪದ ಭಾಷ್ಯವೆನ್ನಿಸುವುದು. ಅಂಭೃಣೀಸೂಕ್ತದಲ್ಲಿ ಎಂಟು ಋಕ್ಕು-ಗಳಿದ್ದು, ಅದರ ವಿವರಣೆಯಂತೆ ಇದು ಅಷ್ಟಕಸ್ವರೂಪದ ಅಧ್ಯಾಯವೂ ಆಗಿದೆ. ಇದರ ಒಂಭತ್ತನೆಯ ಶ್ಲೋಕದಲ್ಲಿ ಬಂದಿರುವ ಫಲಶ್ರುತಿ ಅಂಭೃಣೀಸೂಕ್ತಕ್ಕೆ ತಂತ್ರಸಾರದಲ್ಲಿ ವಿಹಿತವಾಗಿ ರುವ **ಹರಿತುಷ್ಟಿದಂ** ಹಾಗೂ **ಅಖಿಲಕಾಮದಂ** ಎಂಬ ಪದಗಳ ವಿವರಣೆರೂಪವಾಗಿದೆ.

ಇದರ ಮೂರನೆಯ ಅಧ್ಯಾಯದಲ್ಲಿ ಬಂದಿರುವ ಉಪದೇಶ ಭಗವದ್ಗೀತೆಯ **ಕರ್ಮಣ್ಯೇ ವಾಧಿಕಾರಸ್ತೇ ಮಾ ಫಲೇಷು ಕದಾಚನ** ಎಂಬುದಕ್ಕೆ ಶ್ಲೋಕರೂಪದ ಭಾಷ್ಯದಂತಿರುವ ಭಾಗವಾಗಿದೆ; ಅದರಂತೆ ಈಶಾವಾಸ್ಯೋಪನಿಷತ್ತಿನ ಮಹಾತಾತ್ಪರ್ಯವೂ ಆಗಿದೆ. ಅದೇ ಅಧ್ಯಾಯದ **ಯದಿ ನಾಮ ಪರೋ...** ಎಂಬ ಶ್ಲೋಕದಿಂದ ಪ್ರಾರಂಭಿಸಿ ಮುಂದಿನ ಶ್ಲೋಕಗಳು ಬ್ರಹ್ಮಸೂತ್ರದ ದ್ವಿತೀಯಾಧ್ಯಯ, ಅದರಲ್ಲೂ ಸಮಯಪಾದದ ಸಾರಸರ್ವಸ್ವದಂತಿರುವ ಅತ್ಯಪೂರ್ವವಾದ ಭಾಗ.

ಇದರಲ್ಲಿನ ರಾಗವೈವಿಧ್ಯ ಭಗವಂತನ ಬಗೆಗೆ ಅನುರಾಗವನ್ನು ಹುಟ್ಟಿಸುವ ಮೂಲಕ ಭಕ್ತಿಯ ವಿಶೇಷ ಪ್ರಚೋದನೆಗೆ ಕಾರಣವಾಗುವುದು. ಅದರಂತೆ ಇಲ್ಲಿನ ರಾಗಗಳು ಭಗವದ್ಭಕ್ತರ ಬಗ್ಗೆ ಅನುರಾಗಕ್ಕೆ ಕಾರಣವಾಗುವಂತೆ ವಿಷಯಗಳ ಬಗ್ಗೆ ವಿರಾಗಕ್ಕೂ ಕಾರಣವಾಗುವವು. ಇದರಲ್ಲಿನ ತಾಳವೈವಿಧ್ಯ ದೇಹಗತ ನಾಡಿಗಳ ಶುದ್ಧಿಗೆ ಕಾರಣವಾಗುವ ವಿಶೇಷತೆಯಿಂದ ಕೂಡಿದೆ.

ಮಹಾಭಾರತ, ರಾಮಾಯಣ, ಶ್ರೀಮದ್ಭಾಗವತ, ಹರಿವಂಶ ಹಾಗೂ ಮಹಾಭಾರತತಾತ್ಪರ್ಯನಿರ್ಣಯ ಮೊದಲಾದವುಗಳ ಅನೇಕ ಸನ್ನಿವೇಶಗಳಿಗೆ ಇದರಲ್ಲಿನ ಮಾತುಗಳು ತಾತ್ವಿಕ ವಿವೇಚನೆಯ ಸ್ವರೂಪವನ್ನು ಹೊಂದಿದ್ದು, ಅವುಗಳ ಮಹತ್ತ್ವವನ್ನು ವಿಶೇಷರೀತಿಯಲ್ಲಿ ಮನನ ಮಾಡಲು ಸಹಕಾರಿಯಾಗುವವು.

★★

೧೨ ಎಂಬ ಇಲ್ಲಿಯ ಈ ಸ್ತೋತ್ರದ ಸಂಖ್ಯೆ ೧+೨=೩ ಎಂದು ಮಾಡಿಕೊಂಡಾಗ ಶ್ರವಣ, ಮನನ ಹಾಗೂ ಧ್ಯಾನ ಎಂಬ ಸಾಧನೆಯ ಬಗೆಯನ್ನು ಸೂಚಿಸಿದರೆ, ಜ್ಞಾನ, ಭಕ್ತಿ, ವೈರಾಗ್ಯ ಎಂಬ ಸಿದ್ಧಿಯ ಸ್ವರೂಪವನ್ನು ಸೂಚಿಸುವುದು.

೧೨ ಎಂಬ ಸಂಖ್ಯೆಯನ್ನು ವ್ಯತ್ಕ್ರಮವಾಗಿ ಓದಿದಾಗ ೨೧ ಎಂದು ಆಗಿ, ೨೧ ದುರ್ಭಾಷ್ಯಗಳ ನಿರಾಸದ ಕಾರ್ಯಕ್ಕೂ ಸಂಕೇತವೆನ್ನಿಸುವುದು.

ಅದರಂತೆ ೧೨ ಎಂಬುದು ಸಾಕ್ಷಿ, ಮನಸ್ಸು, ಐದು ಜ್ಞಾನೇಂದ್ರಿಯಗಳು ಹಾಗೂ ಐದು ಕರ್ಮೇಂದ್ರಿಯಗಳು ಎಂಬುದಾಗಿ ಒಟ್ಟು ೧೨ ಇಂದ್ರಿಯಗಳನ್ನು ಸೂಚಿಸುತ್ತಾ, ಅವುಗಳ ಪರಿಶುದ್ಧಿಗೂ ಕಾರಣವಾಗುವುದು. ದ್ವಾದಶ ಎಂಬ ಇಲ್ಲಿಯ ಸಂಖ್ಯೆ ವಿಪ್ರರಿಗೆ ಅಗತ್ಯವಾದ ದ್ವಾದಶ ಸಂಖ್ಯೆಯ ವಿಶೇಷ ಗುಣಗಳನ್ನು ಸೂಚಿಸುವುದು.

ಮೊದಲ ಅಧ್ಯಾಯದ **ಸಂತತಂ ಚಿಂತಯೇಽನಂತಂ ಅಂತಕಾಲೇ ವಿಶೇಷತಃ** ಎಂಬ ಮಾತು ಶ್ರೀಮದ್ಭಾಗವತಪುರಾಣದ ಒಟ್ಟು ಸಂದೇಶದ ಸಂಗ್ರಹವೇ ಆಗಿದೆ.

★★

೧೨+೯+೯+೮+೮+೯+೯+೧೨+೧೬+೧೯+೯+೯=೧೨೯. ಈ ೧೨೯ ಸಂಖ್ಯೆಯನ್ನು ಎರಡು ಅಂಕೆಗಳಿಗೆ ಪರಿವರ್ತಿಸಿದಾಗ ೧+೨+೯=೧೨ ಎಂದೇ ಆಗಿ ದ್ವಾದಶಸ್ತೋತ್ರ ಎಂಬ ಹೆಸರು ಈ ಅರ್ಥದಲ್ಲೂ ಸಾರ್ಥಕವೆನ್ನಿಸುವುದು.

೧೨ ಎಂಬುದು ಪ್ರತಿನಿತ್ಯದ ದಿನದ ೧೨ ಹಾಗೂ ರಾತ್ರಿಯ ೧೨ ತಾಸುಗಳ ಅವಧಿಯನ್ನು ಸೂಚಿಸುತ್ತಾ, ಒಟ್ಟಾಗಿ ಸದಾಕಾಲ ಹರಿಸ್ಮರಣೆ ಕರ್ತವ್ಯ ಎಂಬ ಸಂದೇಶವನ್ನು ಸಹ ಸೂಚಿಸುವುದು. ೧೨+೧೨ ಎಂಬ ಹಗಲು-ರಾತ್ರಿಗಳ ಮೊತ್ತ ಒಟ್ಟು ೨೪ ಎಂದಾಗಿ, ಅದು ಗಾಯತ್ರೀಮಂತ್ರದ ೨೪ ಅಕ್ಷರಗಳನ್ನು ಸಹ ಸೂಚಿಸುವ ಮೂಲಕ ಅದರ ಭಾಷ್ಯವೂ ಆಗುವುದು.

ಇಲ್ಲಿಯ ೧೨ರ ೨೧ ಎಂಬ ವ್ಯುತ್ಕ್ರಮ ಸಂಖ್ಯೆ ೩X೭=೨೧ ಅವರ ೩೭ ಸಂಖ್ಯೆಯ ಸರ್ವಮೂಲಗ್ರಂಥಗಳ ಸಾರಸರ್ವಸ್ವವಾಗಿದ್ದು, ಅವರ ಭಾಷ್ಯವು ಏಕವಿಂಶತಿಕುಭಾಷ್ಯ-ನಿರಾಕರಣರೂಪ ಎಂಬ ವಿಶೇಷತೆಯನ್ನು ಸಹ ಸೂಚಿಸುವುದು.

ಇಲ್ಲಿಯ ದ್ವಾದಶ ಎಂಬ ಸಂಖ್ಯೆಯು ದ್ವಾದಶ ಊರ್ಧ್ವಪುಂಡ್ರಧಾರಣೆಯ ಸಂಕೇತವಾಗಿದ್ದು, ಸಾಧನೆಗೆ ಅತ್ಯಗತ್ಯವಾದ ವೈಷ್ಣವದೀಕ್ಷೆಯ ಸ್ವರೂಪವನ್ನು ತಿಳಿಸಿಕೊಡುವುದು. ಅದರಂತೆ ದ್ವಾದಶೀವ್ರತದ ಸಂಕೇತವೂ ಆಗಿದ್ದು, ಒಟ್ಟಾಗಿ ದಶಮೀ, ಏಕಾದಶೀ ಹಾಗೂ ದ್ವಾದಶೀ ಎಂಬ ದಿನತ್ರಯದ ಮಹತ್ತ್ವವನ್ನು ಸಹ ಸೂಚಿಸುವುದು.

ಹಗಲನ್ನು ಬೆಳಗುವ ದ್ವಾದಶಾದಿತ್ಯರ ಸಂಖ್ಯೆಯನ್ನು ಸಹ ದ್ವಾದಶ ಎಂಬ ಇದರ ಪದ ಸೂಚಿಸುವುದು ಇನ್ನೊಂದು ವಿಶೇಷ. ಇದು ಅಜ್ಞಾನವೆಂಬ ರಾತ್ರಿಯನ್ನು ಪರಿಹರಿಸಿ, ಸುಜ್ಞಾನವೆಂಬ ಹಗಲನ್ನು ಬಾಳಿಗೆ ನೀಡುವ ವಿಶೇಷತೆಯನ್ನು ಹೊಂದಿರುವ ಸ್ತೋತ್ರ ಎಂದಾಗುವುದು.

ವರ್ಷದ ಹನ್ನೆರಡು ತಿಂಗಳು – ಹಗಲಿನ ಹನ್ನೆರಡು ಹಾಗೂ ರಾತ್ರಿಯ ಹನ್ನೆರಡು ಗಂಟೆಗಳು ಸಹ ಭಗವಂತನ ಚಿಂತನೆಗೆ ಮೀಸಲಾಗಬೇಕು ಎಂಬ **ಸಂತತಂ ಚಿಂತಯೇಽನಂತಂ** ಎಂಬ ಸಂದೇಶದ ಭಾವವು ದ್ವಾದಶ ಎಂಬ ಹೆಸರಿನಿಂದಲೇ ಸೂಚಿತವಾಗುವುದು.

ಮತ್ತೊಂದು ರೀತಿಯಲ್ಲಿ ಇದು ಶ್ರೀಕೃಷ್ಣನು ಕೈಲಾಸಯಾತ್ರಾ ಪ್ರಸಂಗದಲ್ಲಿ ಒಂದು ದಿನವನ್ನು ಹನ್ನೆರಡು ವರ್ಷಗಳನ್ನಾಗಿ ಪರಿವರ್ತಿಸಿದ ವಿಶೇಷ ಮಾಹಾತ್ಮ್ಯವನ್ನು ಸೂಚಿಸುವ ಹೆಸರೂ ಆಗಿದೆ.

ವಾಮನರೂಪಿ ಪರಮಾತ್ಮನ ಅವತಾರಕ್ಕೆ ಕಾರಣವಾದ ದ್ವಾದಶದಿನಗಳ ವಿಶಿಷ್ಟವ್ರತವೆನ್ನಿಸಿದ ಪಯೋವ್ರತದ ಸೂಚನೆಯೂ ಆಗಿದೆ.

ಮತ್ತೊಂದು ರೀತಿಯಲ್ಲಿ ಇದರ ಪ್ರತಿಶ್ಲೋಕದ ಪ್ರತಿಸ್ತೋತ್ರವು ಒಂದಲ್ಲ ಒಂದು ಬ್ರಹ್ಮಸೂತ್ರದ ವಿವರಣೆಯಾಗಿದ್ದು, ಮತ್ತೊಂದು ಅಣುಭಾಷ್ಯದಂತೆ ಮಾನ್ಯವಾಗುವ ಕೃತಿಯಾಗಿದೆ.

ಇದರ ಅಧ್ಯಯನ ಇತರ ಸರ್ವಮೂಲಗ್ರಂಥಗಳ ಅಧ್ಯಯನಕ್ಕೆ ಪ್ರವೇಶಿಕೆಯಂತಿದ್ದರೆ, ಸರ್ವಮೂಲಗಳ ಅಧ್ಯಯನ ಪೂರೈಸಿದವರಿಗೆ ಅವೆಲ್ಲವುಗಳ ಸಾರಸರ್ವಸ್ವದಂತೆ ಭಗವದಾರಾಧನೆಗೆ ಅಳವಡಿಸಿಕೊಳ್ಳುವ ಮಾರ್ಗದರ್ಶಿಕೆಯಾಗಿದೆ ಎನ್ನಬಹುದು.

ದ್ವಾದಶಸ್ತೋತ್ರದ ಮೊದಲ ಅಧ್ಯಾಯದ ಕೊನೆಯ ಶ್ಲೋಕದಲ್ಲಿ ಬಂದಿರುವ **ಅಂತಕಾಲೇ ವಿಶೇಷತಃ** ಎಂಬ ಮಾತು ಶ್ರೀಮದ್ಭಾಗವತದ ಜನ್ಮಲಾಭಃ **ಪರಃ ಪುಂಸಾಮಂತೇ ನಾರಾಯಣಸ್ಮೃತಿಃ** ಎಂಬ ಶ್ಲೋಕದ ಹಿನ್ನೆಲೆಯಲ್ಲಿ ತೆರೆದುಕೊಳ್ಳುವ ರೀತಿಯಂತೂ ಅತ್ಯದ್ಭುತ. ಇದು ಮತ್ತೊಂದು ರೀತಿಯಲ್ಲಿ **ಸ್ಥಿತ್ವಾಽಸ್ಯಾಮಂತಕಾಲೇಽಪಿ ಬ್ರಹ್ಮನಿರ್ವಾಣಮೃಚ್ಛತಿ** ಎಂಬ ಭಗವದ್ಗೀತೆಯ ಎರಡನೆಯ ಅಧ್ಯಾಯದ ಕೊನೆಯ ಶ್ಲೋಕದ ಹಾಗೂ ಎಂಟನೆಯ ಅಧ್ಯಾಯದ **ತ್ಯಜತ್ಯಂತೇ ಕಲೇವರಂ** ಎಂಬ ಮಾತಿನ ಸಾರಸರ್ವಸ್ವವಾಗಿರುವುದು ಸಹ ಅತ್ಯಂತ

ರೋಚಕ. ಇದೊಂದನ್ನೇ ನೂರೆಂಟು ರೀತಿಯಲ್ಲಿ ಅರ್ಥಮಾಡಿಕೊಳ್ಳಲು ಸಾಧ್ಯವಿದ್ದು, ಅದನ್ನು ನಮ್ಮ ಪ್ರಕಾಶನದ ಸಂಸ್ಕೃತ ವ್ಯಾಖ್ಯಾನಸಮೇತವಾದ ದ್ವಾದಶಸ್ತೋತ್ರದಲ್ಲಿ ಕೊಡಲಾಗಿದೆ.

★★

## ದ್ವಾದಶಸ್ತೋತ್ರದ ವ್ಯಾಖ್ಯಾನಗಳು

೦೧. ಶ್ರೀವಿಶ್ವಪತಿತೀರ್ಥಕೃತವ್ಯಾಖ್ಯಾಸಂಗ್ರಹ (ಪ್ರಕಾಶಿತ, ಉಡುಪಿ)

೦೨. ಗಂಗೋದಕಮಿಶ್ರಕೃತ ವ್ಯಾಖ್ಯಾ(ಪ್ರಕಾಶಿತ)

೦೩. ಶ್ರೀಪುಣ್ಯಶ್ರವಣಭಿಕ್ಷುಗಳು (ಅಪ್ರಕಾಶಿತ)

೦೪. ಶ್ರೀನರಸಿಂಹಾಚಾರ್ಯ ಛಲಾರಿ (ಅನುಪಲಬ್ಧ)

೦೫. ವ್ಯಾಸತೀರ್ಥಪೂಜ್ಯಚರಣಶಿಷ್ಯ ಶ್ರೀತಿಮ್ಮಣ್ಣಾಚಾರ್ಯ ಚನ್ನಪಟ್ಟಣ (ಪ್ರಕಾಶಿತ, ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ)

೦೬. ಶ್ರೀಜನಾರ್ದನಾಚಾರ್ಯರು (ಅಪ್ರಕಾಶಿತ) (ಜ)(ಶ್ರೀಜಯತೀರ್ಥ ಸಂಸ್ಕೃತ ಹಸ್ತಲಿಖಿತ ಗ್ರಂಥಾಲಯ, ವ್ಯಾಸನಕೆರೆ)

೦೭. ಶ್ರೀತಿರುಮಲಭಟ್ಟರು (ಅಪ್ರಕಾಶಿತ)(ಜ) (ಶ್ರೀಜಯತೀರ್ಥ ಸಂಸ್ಕೃತ ಹಸ್ತಲಿಖಿತ ಗ್ರಂಥಾಲಯ, ವ್ಯಾಸನಕೆರೆ)

೦೮. ಶ್ರೀಜನಾರ್ದನಭಟ್ಟರು (ಅನುಪಲಬ್ಧ)

೦೯. ಶ್ರೀವೇಂಕಟದಾಸರು (ಮೈಸೂರು ಪ್ರಾಚ್ಯಕೋಶಾಗಾರ ಹಾಗೂ ಸಂಸ್ಕೃತ ಅಕಾಡೆಮಿ, ಮೇಲುಕೋಟೆ) (ಅಪ್ರಕಾಶಿತ)

೧೦. ಶ್ರೀಅನಂತಪದ್ಮನಾಭಾಚಾರ್ಯರು (ಅನುಪಲಬ್ಧ)

೧೧. ಶ್ರೀನರಸಿಂಹಾಚಾರ್ಯರು (ಮೈಸೂರು ಪ್ರಾಚ್ಯಕೋಶಾಗಾರ-೪೩೬೦)

೧೨. ಶ್ರೀ ಉಮರ್ಜೆ ತಿರುಮಲಾಚಾರ್ಯರು (ಅನುಪಲಬ್ಧ)

೧೩. ನಾರದಾನುಗ್ರಹೀತ ಶ್ರೀಪಾಂಘ್ರಿ ಶ್ರೀನಿವಾಸಾಚಾರ್ಯರು (ಭಾಗಶಃ) (ಪ್ರಕಾಶಿತ)

೧೪. ದ್ವಾದಶಸ್ತೋತ್ರ [೧]ಅರ್ಥವೈಭವ (ದ್ವಾದಶಸ್ತೋತ್ರವ್ಯಾಖ್ಯಾ) (ಶ್ರೀವ್ಯಾಸಮಧ್ವಸಂಶೋಧನಪ್ರತಿಷ್ಠಾನ)

★★

೧ ಇದರ ಮೊದಲ ಆವೃತ್ತಿಯ ಪ್ರತಿಗಳು ತೀರಿದ್ದು ಅನುಪಲಬ್ಧ; ದ್ವಿತೀಯಾವೃತ್ತಿ ಇಷ್ಟರಲ್ಲಿಯೇ ಪ್ರಕಾಶನಗೊಳ್ಳಲಿದೆ.

'**ಉತ್ತಮಾರ್ಥಂ**' ಎಂಬುದಾಗಿ ಇದರಲ್ಲೇ ಉಕ್ತವಾಗಿರುವಂತೆ ಇದರ ಅರ್ಥವೈಭವ ಊಹಾತೀತವಾದದ್ದು. ಈ ಬಗ್ಗೆ ನಮ್ಮ ಪ್ರಕಾಶನದ ಶ್ರೀವಿಶ್ವಪತಿತೀರ್ಥೀಯವ್ಯಾಖ್ಯಾನ-ಸಮೇತವಾದ 'ದ್ವಾದಶಸ್ತೋತ್ರ (ಸಂಸ್ಕೃತ)' ಕೃತಿಯನ್ನು ನೋಡಬಹುದು. ಅದರ ವಿಸ್ತೃತ ದ್ವಿತೀಯಾವೃತ್ತಿ ಇಷ್ಟರಲ್ಲಿಯೇ ಪ್ರಕಾಶನಗೊಳ್ಳಲಿದೆ. ಪ್ರಸ್ತುತ ಆವೃತ್ತಿಯಲ್ಲಿ ಪ್ರತಿಶ್ಲೋಕದ ಪದಚ್ಛೇದ, ಅನ್ವಯಕ್ರಮ, ಅನುವಾದ, ವಿವರಣೆಗಳನ್ನು ಕೊಡಲಾಗಿದೆ. ಜೊತೆಗೆ ಸುಮಾರು ನಲ್ವತ್ತುವರ್ಷಗಳ ಹಿಂದೆ ನಾನು ಸಿದ್ಧಪಡಿಸಿದ್ದ ದ್ವಾದಶಸ್ತೋತ್ರದ ಕನ್ನಡಪದ್ಯಾನುವಾದವನ್ನು ಸಹ ಇದರಲ್ಲಿ ಅಳವಡಿಸಲಾಗಿದೆ. ಮೂಲಶ್ಲೋಕದ ನೇರ ಅರ್ಥಗ್ರಹಣವನ್ನು ಮಾಡಿಕೊಳ್ಳಲು ಅವು ಸಹಾಯವಾಗುವುದೆಂದು ಭಾವಿಸಿದ್ದೇನೆ. ಶ್ರೀಮದಾಚಾರ್ಯರ '**ಕಂದುಕಸ್ತುತಿ**' ಹಾಗೂ ಶ್ರೀಅಕ್ಷೋಭ್ಯತೀರ್ಥವಿರಚಿತ '**ವೇದಸಾರ**' ಕೃತಿಗಳ ಅನುವಾದವೂ ಸಹ ಇದರಲ್ಲಿ ಸೇರಿವೆ.

★★

ಇದರ ಮೊದಲ ಆವೃತ್ತಿಯನ್ನು ದ್ವಾದಶಸ್ತೋತ್ರದ ಪ್ರಸ್ತುತ ಅನುವಾದ ವಿವರಣೆಗಳ ಈ ಕೃತಿ ಸಿದ್ಧವಾದದ್ದು ಇತ್ತೀಚಿಗೆ. ಕೆಲವೇ ತಿಂಗಳುಗಳಲ್ಲಿ ಅದರ ಪ್ರತಿಗಳು ತೀರಿದ್ದರಿಂದ, ಬಹುಜನರ ಅಪೇಕ್ಷೆಯಂತೆ ಈ ದ್ವಿತೀಯಾವೃತ್ತಿ ಪ್ರಕಾಶನಗೊಳ್ಳುತ್ತಿದೆ.

ಇದರ ಪ್ರಾಯೋಜಕರು ಶ್ರೀಮದಾಚಾರ್ಯರ ಸಿದ್ಧಾಂತದ ಪ್ರಸಾರದಲ್ಲಿ ತುಂಬಾ ಆಸಕ್ತರೂ, ಶ್ರೀಹರಿಗುರುಗಳ ಭಕ್ತರೂ ಆದ **ಶ್ರೀಮತಿ ಶಶಿಕಲಾ ಪ್ರಸಾದ್** ಹಾಗೂ **ಆರ್. ಶ್ರೀನಿವಾಸಪ್ರಸಾದ್** ದಂಪತಿಗಳು; ಅವರಿಗೆ ನಮ್ಮ ಪ್ರತಿಷ್ಠಾನ ಸಕಲವಿಧಶ್ರೇಯಸ್ಸನ್ನು ಹಾರೈಸುವುದು.

ಇದರ ಟಂಕಣಕಾರ್ಯ ನಮ್ಮ ಪ್ರತಿಷ್ಠಾನದ್ದು, ಸಹಕಾರ ಚಿ. ಸುದರ್ಶನ (ಆನಂದಪದ್ಮನಾಭ), ಪ್ರವೀಣಕಟ್ಟೆ ನನ್ನ ಪುತ್ರ ಡಾ. ಜಯಂತ ವ್ಯಾಸನಕೆರೆ, ನನ್ನ ಪತ್ನಿ ಶ್ರೀಮತಿ ಜಯಶ್ರೀ ವ್ಯಾಸನಕೆರೆ ಹಾಗೂ ನನ್ನ ಸೊಸೆ ಚಿ. ಸೌ. ಶ್ರುತಿ ವ್ಯಾಸನಕೆರೆ ಅವರದು. ಇದರ ಮುದ್ರಣಕಾರ್ಯ ವಾಗರ್ಥ ಅವರದು. ಇವರೆಲ್ಲರಿಗೂ ನಮ್ಮ ಪ್ರತಿಷ್ಠಾನದ ಶುಭಹಾರೈಕೆಗಳು ಸಲ್ಲುವವು.

**ಶುಭಕೃತ್ - ಶ್ರೀಮಧ್ವಜಯಂತೀ** ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯ
**(ವಿಜಯಾದಶಮೀ)**
**೦೫.೧೦.೨೦೨೨**

# ವಿಷಯಾನುಕ್ರಮಣಿಕೆ



★★★★★

## ಶ್ರೀರಾಮಧ್ಯಾನಮ್

ಶ್ಯಾಮಂ ರವೀಂದ್ವಮಿತದೀಧಿತಿಕಾಂತಿಯುಕ್ತಂ
ಜ್ಞಾನಂ ಶರಂ ಚ ದಧತಂ ಪ್ರಿಯಯಾ ಸಮೇತಮ್ ।
ಸ್ವಾತ್ಮಸ್ವರೂಪಮಮಿತಂ ಹನುಮನ್ಮುಖೇಷು
ಸಂದರ್ಶಯಂತಮಜಿತಂ ಸ್ಮರತೋರುಗೀರ್ಭಿಃ ॥

– ಶ್ರೀಮದಾನಂದತೀರ್ಥಭಗವತ್ಪಾದರು
(ತಂತ್ರಸಾರಸಂಗ್ರಹ – ೪/೩೬)

***

## ಶ್ರೀಕೃಷ್ಣಧ್ಯಾನಮ್

ಧ್ಯಾಯೇದ್ ಹರಿನ್ಮಣಿನಿಭಂ ಜಗದೇಕವಂದ್ಯಂ
ಸೌಂದರ್ಯಸಾರಮರಿಶಂಖವರಾಭಯಾನಿ ।
ದೋರ್ಭಿರ್ದಧಾನಮಜಿತಂ ಸರಸಂ ಚ ಭೈಷ್ಮೀ-
ಸತ್ಯಾಸಮೇತಮಖಿಲಪ್ರದಮಿಂದಿರೇಶಮ್ ॥

– ಶ್ರೀಮದಾನಂದತೀರ್ಥಭಗವತ್ಪಾದರು
(ತಂತ್ರಸಾರಸಂಗ್ರಹ – ೪/೪೦)

*****

॥ ಶ್ರೀಃ ॥

# ಶ್ರೀಮದಾನಂದತೀರ್ಥಭಗವತ್ಪಾದಪ್ರಣೀತ

# ದ್ವಾದಶಸ್ತೋತ್ರ

## ೧. ಪ್ರಥಮಾಧ್ಯಾಯ (ಆಪಾದಮೌಲಿಸ್ತೋತ್ರ)

**ವಂದೇ ವಂದ್ಯಂ [೧]ಸದಾನಂದಂ [೨]ವಾಸುದೇವಂ [೩]ನಿರಂಜನಮ್ ।**
**ಇಂದಿರಾಪತಿಮಾದ್ಯಾದಿವರದೇಶವರಪ್ರದಮ್ ॥ ೧ ॥**

**ಪದಚ್ಛೇದ :** ವಂದೇ, ವಂದ್ಯಂ, ಸದಾನಂದಂ, ವಾಸುದೇವಂ, ನಿರಂಜನಮ್, ಇಂದಿರಾಪತಿಮ್, ಆದ್ಯಾದಿವರದೇಶವರಪ್ರದಮ್ ।

**ಅನ್ವಯ :** ವಂದ್ಯಂ ಆದ್ಯಾದಿವರದೇಶವರಪ್ರದಮ್ ಸದಾನಂದಂ, ನಿರಂಜನಮ್, ಇಂದಿರಾಪತಿಮ್, ವಾಸುದೇವಂ, ವಂದೇ ।

**ಪ್ರತಿಪದಾರ್ಥ : ವಂದ್ಯಂ** – ವಂದನೆಗೆ ಅರ್ಹನಾದ; **ಆದ್ಯಾದಿವರದೇಶವರಪ್ರದಮ್** – ಬ್ರಹ್ಮಾದಿ ಶ್ರೇಷ್ಠದೇವತೆಗಳಿಗೂ ವರ ನೀಡುವ; **ಸದಾನಂದಂ** – ಸದಾ ಆನಂದಪೂರ್ಣನಾದ; **ನಿರಂಜನಮ್** – ನಿರ್ದೋಷನಾದ; **ಇಂದಿರಾಪತಿಮ್**– ಮಹಾಲಕ್ಷ್ಮಿಗೆ ಪತಿಯಾದ; **ವಾಸುದೇವಮ್** – ವಾಸುದೇವನನ್ನು; **ವಂದೇ** – ವಂದಿಸುವೆನು.

**ಕನ್ನಡ ಪದ್ಯಾನುವಾದ**

**ಸಿರಿವಾಸುದೇವ ಚೆಲುನಲಿವರೂಪ ನಿರವದ್ಯ ವಂದ್ಯ ನಮನ ।**
**ವರವೀಯುವಂಥ ಬ್ರಹ್ಮಾದಿಗಳಿಗು ವರವೀವ ಇಂದಿರೇಶ ॥ ೧ ॥**

**ಅನುವಾದ : ವಂದನೆಗೆ ಅರ್ಹನಾದ, ಬ್ರಹ್ಮಾದಿ ಶ್ರೇಷ್ಠದೇವತೆಗಳಿಗೂ ವರ ನೀಡುವ, ಯಾವಾಗಲೂ ಆನಂದಪೂರ್ಣನಾದ, ನಿರ್ದೋಷನಾದ, ಮಹಾಲಕ್ಷ್ಮಿಗೆ ಪತಿಯಾದ, ವಾಸುದೇವನನ್ನು ವಂದಿಸುವೆನು.**

---

೧. ಅನಿರುದ್ಧಃ ಸದಾನಂದೋ ಗೋವಿಂದೋ ಗೋವಿದಾಂಪತಿಃ । – ವಿಷ್ಣುಸಹಸ್ರನಾಮ

೨. ಬ್ರಹ್ಮಾಂಡಂ ಸರ್ವಮತುಲಂ ವಾಸಿತಂ ಯಸ್ಯ ವಾಸನಾತ್ ।
ಸಾ ತಸ್ಮಾದ್ ವಾಸುದೇವಸ್ತು ಪ್ರೋಚ್ಯತೇ ನೃಪನಂದನ ॥
– ಪದ್ಮಪುರಾಣ(ಪಾತಾಲಖಂಡ ೮೪/೯೬)

**ವಾಸುದೇವೋ** ಬೃಹದ್ಭಾನುರಾದಿದೇವಃ, ವಸುಪ್ರದೋ **ವಾಸುದೇವಃ**, ಭೂತಾವಾಸೋ **ವಾಸುದೇವಃ** – ವಿಷ್ಣುಸಹಸ್ರನಾಮ

೩. ಅಜೋ ನಿರಂಜನಃ ಕಾಮಜನಕಃ ಕಂಜಲೋಚನಃ । – ಕೃಷ್ಣಾಷ್ಟೋತ್ತರಶತನಾಮಸ್ತೋತ್ರ

**ವಿವರಣೆ:** ೧. ಶ್ರೀಮದಾಚಾರ್ಯರು ದ್ವಾದಶಸ್ತೋತ್ರ ಎಂಬ ಅಪೂರ್ವ ಕೃತಿಯನ್ನು ರಚಿಸುತ್ತಾ ಪ್ರಾರಂಭದ ಈ ಪದ್ಯದಲ್ಲಿ ವಾಸುದೇವರೂಪದ ಶ್ರೀಹರಿಯನ್ನು ಸ್ತುತಿಸುತ್ತಿರುವರು. ಸ್ವತಃ ತಾವು ಯಾವುದೇ ವಿಧವಾದ ವಿಘ್ನವನ್ನು ಹೊಂದದ ಮಹನೀಯರಾದರೂ, ಗ್ರಂಥದ ಪ್ರಾರಂಭದಲ್ಲಿ ವಿಘ್ನಾದಿಗಳ ನಿವಾರಣೆಗೆ ಅತ್ಯಗತ್ಯವಾದ ಮಂಗಳಾಚರಣೆಯು ಅಗತ್ಯಕರ್ತವ್ಯ ಎಂಬುದಾಗಿ ಶಿಷ್ಯಶಿಕ್ಷಣ ಮಾಡಿರುವರು ಎಂದು ತಿಳಿಯಬೇಕು.

೨. **ವಂದ್ಯ** ಎಂದರೆ ವಂದನೆಗೆ ಅರ್ಹನಾದವನು ಎಂದರ್ಥ. ಗುಣಪೂರ್ಣತ್ವ ಹಾಗೂ ದೋಷದೂರತ್ವಗಳು ವಂದನೆಗೆ ಅತಿಮುಖ್ಯವಾದ ಅರ್ಹತೆ. ಶ್ರೀಹರಿಯು ಅನಂತಾನಂತ ಕಲ್ಯಾಣಗುಣಗಳಿಂದ ಪರಿಪೂರ್ಣನಾದವನು. ಸಮಸ್ತ ದೋಷಗಳಿಂದ ರಹಿತನಾದವನು. ಅದರಂತೆ ಭಕ್ತರು ಬೇಡುವ ಸಕಲ ಇಷ್ಟಾರ್ಥಗಳನ್ನು ನೀಡುವ ಸಮರ್ಥ ಹಾಗೂ ಕರುಣಾಳು; ಆದ್ದರಿಂದ ಅವನ ವಂದನೆ ಕರ್ತವ್ಯ. ಇಲ್ಲಿ '**ವಂದ್ಯ**' ಎಂದರೆ ರಮಾಬ್ರಹ್ಮಾದಿಸಕಲದೇವತೆಗಳಿಂದಲೂ, [೧]ಸಕಲವಿಧದಲ್ಲೂ ಸದಾ ವಂದ್ಯ ಎಂದು ಭಾವ. ಸಾಮಾನ್ಯವಾಗಿ ವಿಶಿಷ್ಟ, ಇಷ್ಟ ಹಾಗೂ ಅಧಿಕೃತ ಎಂಬುದಾಗಿ ವಂದನೆಗೆ ಅರ್ಹನಾದ ದೇವತೆ ಮೂರುವಿಧ. ಶ್ರೀವಾಸುದೇವನು ವಿಶಿಷ್ಟ ಎಂದರೆ ಸರ್ವೋತ್ತಮ. ಶ್ರೀಮದಾಚಾರ್ಯರಿಗೆ [೨]ಇಷ್ಟ ಹಾಗೂ ಈ ಸ್ತೋತ್ರಕ್ಕೆ ಅಧಿಕೃತದೇವತೆಯೂ ಆಗಿರುವನು. ಆದ್ದರಿಂದ ಅವನು ಸಕಲವಿಧದಲ್ಲೂ ವಂದ್ಯನಾಗಿರುವನು[೩] ಎಂದು ಭಾವ.

೩. **ಸದಾನಂದಂ** ಎಂಬುದಕ್ಕೆ ಸದಾ ಆನಂದಾದಿಸಕಲಗುಣಪರಿಪೂರ್ಣನಾದವನು ಎಂದರ್ಥ. ಅದನ್ನು ಸದಾ ಆನಂದಂ ಎಂದು ವಿಭಾಗ ಮಾಡಿದರೆ, ಆನಂದಂ ಎಂಬುದಕ್ಕೆ **ಆನಂದೋ ನಂದನೋ ನಂದಃ** ಎಂಬ ವಿಷ್ಣುಸಹಸ್ರನಾಮದ ಮಾತಿನಿಂದ ಆನಂದಪೂರ್ಣ ಎಂದು ಅರ್ಥವಾಗುವುದು. **ಸದಾ** ಎಂಬುದನ್ನು **ಸದಾ ವಂದೇ**[೪] ಎಂಬುದಾಗಿಯೂ, **ಸದಾ ಇಂದಿರಾಪತಿ, ಸದಾ ವರದೇಶವರಪ್ರದ, ಸದಾ ನಿರಂಜನ** ಎಂದೂ ಅನ್ವಯಮಾಡಿಕೊಳ್ಳಬಹುದು.

೪. **ವಾಸುದೇವ** ಎಂದರೆ ಸರ್ವತ್ರ ನೆಲೆಸಿರುವವನು ಹಾಗೂ ಸಕಲಗುಣಗಳಿಂದ ಪೂರ್ಣನಾದವನು ಎಂದರ್ಥ. ವಾಸು ಎಂಬುದಕ್ಕೆ ಸರ್ವರ ಸ್ವಾಮಿ ಎಂದರ್ಥ; ವಾಸು

---

೧. ಅಶೇಷವಿಶೇಷತೋಽಪಿ ವಂದ್ಯಮ್ । – ಅನುವ್ಯಾಖ್ಯಾನ(೧/೧/೧)

– ಯಾವಂತೋ ವಂದ್ಯತ್ವನಿಮಿತ್ತಭೂತಾ ಧರ್ಮಾಃ ತೇಭ್ಯೋ ವಿಶೇಷೇಭ್ಯೋಽಪಿ ವಂದ್ಯಮ್ । – ನ್ಯಾಯಸುಧಾ

೨. .... ಇಷ್ಟೋ ನೋ ರಮಾಪತಿ । – ತತ್ತ್ವೋದ್ಯೋತ

೩. ತ್ರಿವಿಧಾ ಹಿ ದೇವತಾ ವಂದ್ಯಾ ಭವತಿ । ವಿಶಿಷ್ಟಾಧಿಕೃತೇಷ್ಟಾ ಚೇತಿ ... – ನ್ಯಾಯಸುಧಾ

೪. 'ಸದಾ ವಂದೇ' ಇತ್ಯನೇನ ಮಮ ನಾರಾಯಣವಂದನಂ ನ ಪ್ರತ್ಯೂಹವಿರಹಾದಿಪ್ರಯೋಜನೋದ್ದೇಶೇನೇತಿ ಸೂಚಯತಿ । – ವಿಷ್ಣುತತ್ತ್ವನಿರ್ಣಯಟೀಕಾ

(ಬಾಸು) ಎಂಬ ಸಂಸ್ಕೃತಪದವೇ **ವಬಯೋರಭೇದಃ** ಎಂಬ ಕಾರಣದಿಂದ ಬಾಸು ಎಂದಾಗಿದೆ. ಅದಕ್ಕೆ ವಿಶ್ವದ ಅಧಿಪತಿ ಎಂದೂ ಅರ್ಥ. ವಾಸು ಹಾಗೂ ದೇವ ಎಂಬುದಾಗಿ ಎರಡೂ ಆಗಿರುವುದರಿಂದ ಶ್ರೀಹರಿಯು [೧]ವಾಸುದೇವ ಎನ್ನಿಸಿರುವನು. ದೇವ ಎಂಬುದಕ್ಕೆ ಕ್ರೀಡಾದಿಗುಣವಿಶಿಷ್ಟ ಮೊದಲಾದ ಅನೇಕ ಅರ್ಥಗಳಿವೆ[೨]. ಎಲ್ಲೆಡೆಗಳಲ್ಲೂ ಗುಣಪೂರ್ಣನಾಗಿಯೇ ನೆಲೆಸಿರುವ ಅವನು ಸಕಲರಿಗೂ, ಎಲ್ಲೆಡೆಗಳಲ್ಲೂ ರಕ್ಷಣೆ ನೀಡುವ ಸ್ವಾಮಿ ಎಂದರ್ಥ.

೫. ಶ್ರೀಹರಿಯ ರೂಪಗಳಲ್ಲಿ ವಾಸುದೇವ ರೂಪವು ಮೋಕ್ಷ ನೀಡುವ ರೂಪ. ಸಕಲ ಸುಜೀವಿಗಳು ಮೋಕ್ಷವನ್ನೇ ಬಯಸುವರು; ಆದ್ದರಿಂದ ಆ ರೂಪದ ಕೃತಿಯನ್ನೇ ಇಲ್ಲಿ ಮಾಡಿರುವರು.

೬. **ಇಂದಿರಾಪತಿ** ಎಂಬ ಪದದಿಂದ ಶ್ರೀಹರಿಯು [೩]ಅಕ್ಷರಪುರುಷೋತ್ತಮ ಎಂದು, **ವರದೇಶವರಪ್ರದಂ** ಎಂಬುದರಿಂದ ಕ್ಷರಪುರುಷರಾದ ಬ್ರಹ್ಮಾದಿಗಳಿಗಿಂತ ಉತ್ತಮ ಎಂದೂ ಅರ್ಥ. ಒಟ್ಟಾಗಿ ಶ್ರೀಹರಿಯು ಪುರುಷೋತ್ತಮ ಎಂದು ಭಾವ. ಇಂದಿರೆ ಎಂದರೆ ಮಹಾಲಕ್ಷ್ಮೀ; ಈಶಕೋಟಿಪ್ರವಿಷ್ಟೆಯಾಗಿ ಶ್ರೀಹರಿಯ ಅನಂತರದ ಸರ್ವೋತ್ಕೃಷ್ಟಸ್ಥಾನವನ್ನು ಹೊಂದಿರುವ ಜಗದಂಬೆ.

೭. **ವರಪ್ರದಂ** ಎಂಬುದಕ್ಕೆ **ವರಾನ್ ಪ್ರಕರ್ಷೇಣ ದದಾತಿ** ಎಂದೂ **ವರಾನ್ ಪ್ರಕರ್ಷೇಣ ದ್ಯತಿ** ಎಂದೂ ಅರ್ಥ. ಎಂದರೆ ವರವನ್ನು ಸ್ವಾತಂತ್ರ್ಯೇಣ ಕೊಡಬಲ್ಲ ಮಹಾದೇವತೆ ಎಂಬುದು ಒಂದು ಬಗೆಯ ಅರ್ಥವಾದರೆ, ಇತರರು ನೀಡಿದ ವರಗಳನ್ನು ಬದಲಾಯಿಸಬಲ್ಲ ಅಥವಾ ಸಂಪೂರ್ಣವಾಗಿ ನಾಶಮಾಡಬಲ್ಲ ಎಂಬುದು ಇನ್ನೊಂದು ಬಗೆಯ ಅರ್ಥ. ಬ್ರಹ್ಮಾದಿಗಳು ರಾವಣಾದಿಗಳಿಗೆ ನೀಡಿದ ವರಗಳನ್ನು ನಾಶ ಮಾಡಿ ಅವರನ್ನು ಸಂಹರಿಸಿದ ಸಂಗತಿ ಸರ್ವವೇದ್ಯ. ಹೀಗೆ ವರ ನೀಡುವ ದೇವತೆಯಾಗಿರುವಂತೆ ಇತರರು ನೀಡಿದ ವರಗಳನ್ನು ನಾಶಮಾಡಬಲ್ಲ ಸಮರ್ಥ ದೇವತೆಯಾಗಿರುವುದರಿಂದ ಶ್ರೀಹರಿಯನ್ನು ಸಕಲರು ಸಹ ಆಶ್ರಯಿಸಲೇಬೇಕು ಎಂದು ಭಾವ[೪].

---

೧. ವಾಸನಾದ್ವಾಸುದೇವೋಽಸಿ ವಾಸಿತಂ ತೇ ಜಗತ್ತ್ರಯಮ್ ।
ಸರ್ವಭೂತನಿವಾಸೋಽಸಿ ವಾಸುದೇವ ನಮೋಽಸ್ತು ತೇ ॥ – ಪುರಾಣವಾಕ್ಯ

೨. 'ದಿವು ಕ್ರೀಡಾವಿಜಿಗೀಷಾವ್ಯವಹಾರದ್ಯುತಿಸ್ತುತಿಮೋದಮದಸ್ವಪ್ನಕಾಂತಿಗತಿಷು' – ಗೀತಾಭಾಷ್ಯ(೭/೧೪)

೩. ಕೂಟಸ್ಥೋಽಕ್ಷರ ಉಚ್ಯತೇ । – ಗೀತಾ (೧೫/೧೬)

೪. ಹಗೆಯರಿಗೆ ವರವೀವರಿಬ್ಬರು ತೆಗೆಯಲರಿಯರು ಕೊಟ್ಟ ವರಗಳ. – ಹರಿಭಕ್ತಿಸಾರ

೮. ಮಹಾಲಕ್ಷ್ಮೀ ಎಲ್ಲರೂ ತಿಳಿದಿರುವಂತೆ ಸರ್ವಶ್ರೇಷ್ಠಳಾದ ದೇವತೆ. ಇಂದ್ರಾದಿ ದೇವತೆಗಳೂ ಸಹ ಲಕ್ಷ್ಮೀಕಟಾಕ್ಷಕ್ಕಾಗಿ ಸದಾ ಹಾತೊರೆಯುವರು. ಲೌಕಿಕವಾಗಿ ಸಹ ಹಣಕ್ಕಿರುವ ಮಹತ್ವ ಅಪಾರವಾದುದು. ಎಲ್ಲಾ ಅಪೇಕ್ಷೆಗಳನ್ನೂ ಸಹ ಪೂರೈಸುವ ಸರ್ವ ಶ್ರೇಷ್ಠವಾದ ಸಾಧನವೆಂದರೆ ಸಂಪತ್ತು. ಅಂತಹ ಸಂಪತ್ತಿನ ಒಡತಿ ಮಹಾಲಕ್ಷ್ಮಿಯಾದರೆ ಮಹಾಲಕ್ಷ್ಮಿಗೆ ಪತಿಯಾದವನು ಶ್ರೀಹರಿ; ಆದ್ದರಿಂದ ಅವನು ಸರ್ವಶ್ರೇಷ್ಠವಾದ ದೇವತೆ ಎಂದರ್ಥ.

೯. ಬ್ರಹ್ಮಾದಿ ದೇವತೆಗಳು ವರನೀಡುವ ದೇವತೆಗಳು ಎಂಬುದು ಪುರಾಣಾದಿಗಳಲ್ಲಿ ಪ್ರಸಿದ್ಧವಾದ ಸಂಗತಿ. ಹಿರಣ್ಯಕಶಿಪು, ರಾವಣ ಮೊದಲಾದ ವಿಶ್ವ ಕಂಡಂತಹ ಮಹಾಪರಾಕ್ರಮಿಗಳು ಅಂತಹ ಸಾಮರ್ಥ್ಯವನ್ನು ಪಡೆಯಲು ಬ್ರಹ್ಮದೇವರು ನೀಡಿದ ವರ ಕಾರಣವಾಗಿತ್ತು. ಅಂತಹ ಬ್ರಹ್ಮದೇವರಿಗೂ ಹಾಗೂ ಸಕಲ ದೇವತೆಗಳಿಗೂ ವರ ನೀಡುವ ಸಾಮರ್ಥ್ಯ ನೀಡಿದವನು ಶ್ರೀಹರಿ. ಇದರಿಂದ ಶ್ರೀಹರಿಯೇ ಸರ್ವರಿಗೂ ವರ ನೀಡುವ ಪರದೇವತೆ ಎಂಬುದು ಸ್ಫುಟಪಡುವುದು.

೧೦. ಶ್ರೀಹರಿಯ ಗುಣಪೂರ್ಣತ್ವಪ್ರತಿಪಾದಕವಾದ '**ಸದಾನಂದಂ**' ಎಂಬ ಪದದಿಂದ ಬ್ರಹ್ಮಸೂತ್ರಗಳ ಸಮನ್ವಯಾಧ್ಯಯದ ಸಾರವೂ, ದೋಷಾಭಾವ-ಪ್ರತಿಪಾದಕವಾದ '**ನಿರಂಜನಂ**' ಎಂಬ ಶಬ್ದದಿಂದ ದ್ವಿತೀಯಾಧ್ಯಾಯದ ಸಾರವೂ, ಉಪಾಸನಾಪ್ರತಿಪಾದಕವಾದ '**ವಂದ್ಯಂ**' ಎಂಬ ಪದದಿಂದ ಸಾಧನಾಧ್ಯಾಯದ ಸಾರವೂ, ಫಲಪ್ರತಿಪಾದಕವಾದ '**ವರಪ್ರದಂ**' ಎಂಬ ಪದದಿಂದ ಫಲಾಧ್ಯಾಯದ ಸಾರವೂ ಸೂಚಿತವಾಗಿದ್ದು, ಈ ಶ್ಲೋಕವು ಬ್ರಹ್ಮಸೂತ್ರದ ಒಟ್ಟು ಸಾರವಾಗಿದೆ ಎಂದು ತಿಳಿಯಬೇಕು.

೧೧. **ಪಾಂತ್ವಸ್ಮಾನ್** ಎಂಬಲ್ಲಿ ಹೇಗೋ ಹಾಗೆ, ಈ ಕೃತಿಯು ಸಹ **ವಂದೇ** ಎಂಬ ಕ್ರಿಯಾಪದದಿಂದ ಪ್ರಾರಂಭವಾಗಿರುವುದು ಗಮನಾರ್ಹ. ಶ್ರೀಹರಿಯ ಸ್ತುತಿಯ ಸಂಭ್ರಮದಲ್ಲಿ ಮೊದಲಿಗೆ ವಂದನೆಯಿಂದಲೇ ಇದು ಪ್ರಾರಂಭವಾಗಿದೆ. **ವಂದೇ** ಎಂಬುದಕ್ಕೆ ನಮಸ್ಕಾರ ಹಾಗೂ ಸ್ತೋತ್ರ ಎಂಬ ಎರಡು ಅರ್ಥಗಳೂ ಇವೆ. ಶ್ರೀಹರಿಯನ್ನು ನಮಸ್ಕರಿಸುವೆ ಹಾಗೂ ಸ್ತುತಿ ಮಾಡುವೆ ಎಂದು ಒಟ್ಟು ಭಾವ.

**ನಮಾಮಿ ನಿಖಿಲಾಧೀಶಕಿರೀಟಾಘೃಷ್ಟಪೀಠವತ್ ।**
**ಹೃತ್ತಮಃಶಮನೇಽರ್ಕಾಭಂ ಶ್ರೀಪತೇಃ ಪಾದಪಂಕಜಮ್ ॥ ೨ ॥**

**ಪ** : ನಮಾಮಿ, ನಿಖಿಲಾಧೀಶಕಿರೀಟಾಘೃಷ್ಟಪೀಠವತ್, ಹೃತ್ತಮಃಶಮನೇ, ಅರ್ಕಾಭಮ್, ಶ್ರೀಪತೇಃ, ಪಾದಪಂಕಜಮ್ ।

**ಅ :** ನಿಖಿಲಾಧೀಶಕಿರೀಟಾಘೃಷ್ಟಪೀಠವತ್, ಹೃತ್ತಮಃಶಮನೇ, ಅರ್ಕಾಭಮ್, ಶ್ರೀಪತೇಃ, ಪಾದಪಂಕಜಮ್, ನಮಾಮಿ।

**ಪ್ರ.ಪ : ನಿಖಿಲಾಧೀಶಕಿರೀಟಾಘೃಷ್ಟಪೀಠವತ್**[1] – ಸಕಲ ಶ್ರೇಷ್ಠದೇವತೆಗಳ ಕಿರೀಟಗಳಿಂದ ಘಟ್ಟಿಸಲ್ಪಡುವ ಪೀಠವುಳ್ಳ; **ಹೃತ್ತಮಃಶಮನೇ** – ಮನಸ್ಸಿನ ಕತ್ತಲೆಯನ್ನು ಕಳೆಯುವಲ್ಲಿ; [2]**ಅರ್ಕಾಭಮ್** – ಸೂರ್ಯನಂತಿರುವ; [3]**ಶ್ರೀಪತೇಃ** – ಲಕ್ಷ್ಮೀಪತಿಯಾದ ಶ್ರೀಹರಿಯ; **ಪಾದಪಂಕಜಮ್** – ಪಾದಕಮಲವನ್ನು; **ನಮಾಮಿ** – ನಮಸ್ಕರಿಸುವೆನು.

**ನಮಿಸುವೆನು ಸುರರು ಮಕುಟಗಳ ತೀಡಿ ಮಣಿವಂಥ ಪೀಠವಿರುವ।**
**ಮನವನ್ನು ಕವಿದ ತಮವನ್ನು ಕಳೆವ ರವಿಯಂಥ ಪಾದಕಮಲ ॥ ೨ ॥**

**ಅನು : ಸಕಲ ಶ್ರೇಷ್ಠದೇವತೆಗಳ ಕಿರೀಟಗಳಿಂದ ಘಟ್ಟಿಸಲ್ಪಡುವ ಪೀಠವುಳ್ಳ, ಮನಸ್ಸಿನ ಕತ್ತಲೆಯನ್ನು ಕಳೆಯುವಲ್ಲಿ ಸೂರ್ಯನಂತಿರುವ, ಲಕ್ಷ್ಮೀಪತಿಯಾದ ಶ್ರೀಹರಿಯ ಪಾದಕಮಲವನ್ನು ನಮಸ್ಕರಿಸುವೆನು.**

ವಿ : ೧. ಶ್ರೀಹರಿಯ ಪಾದಪೀಠವನ್ನು ಸಕಲ ದೇವತೆಗಳೂ ಸಹ ತಮ್ಮ ಕಿರೀಟಗಳನ್ನು ಘಟ್ಟಿಸಿ ನಮಸ್ಕರಿಸುವರು. ಅತ್ಯಂತ ಭಕ್ತಿಯಿಂದ ಆರಾಧಿಸುವರು ಎಂದರ್ಥ. ಶ್ರೀಹರಿಯ ಪಾದಕಮಲವನ್ನು ನಮಿಸಿದರೆ ಮನಸ್ಸಿನ ನೋವು ಕೂಡಲೇ ಪರಿಹಾರ-ವಾಗುವುದು ಎಂದರ್ಥ. ಅದಕ್ಕಾಗಿ ಸೂರ್ಯನ ದೃಷ್ಟಾಂತವನ್ನು ನೀಡಿರುವರು. ಸೂರ್ಯನಿಂದ ಕತ್ತಲೆ ನಾಶವಾಗುವಂತೆ ಶ್ರೀಹರಿಯ ಪಾದಸ್ಮರಣೆಯಿಂದ ನಮ್ಮ ಮನಸ್ಸಿಗೆ ಕವಿದ ಅಜ್ಞಾನ ಮೊದಲಾದ ಸಮಸ್ತ ದೋಷಗಳು ಕೂಡಲೇ ಪರಿಹಾರವಾಗುವವು ಎಂದರ್ಥ.

೨. ಶ್ರೀಹರಿಯ ಪಾದವನ್ನು **ಕಮಲ** ಎಂದು ಕರೆಯುವ ಮೂಲಕ ಅದು ತುಂಬಾ ಆಕರ್ಷಕ, ಮನೋಹರ ಎಂದು ಸೂಚಿತ. ಸಾಮಾನ್ಯವಾಗಿ ಕಮಲ ಎಂದ ಕೂಡಲೇ ಕೆಂಪು ಕಮಲ ಎಂದೇ ಅರ್ಥವಾಗುವುದು. ಶ್ರೀಹರಿಯ ಪಾದಗಳು ಅದರಲ್ಲೂ

---

೧. ಸಬ್ರಹ್ಮರುದ್ರಮರುದಶ್ವಿದಿವಾಕರಾದಿಮೂರ್ಧನ್ಯರತ್ನಪರಿಘಟ್ಟಿತಪಾದಪೀಠಃ।
ನಿತ್ಯಂ ಸುರೈಃ ಸಹ ನರೈರಥ ವಾನರೈಶ್ಚ ಸಂಪೂಜ್ಯಮಾನಚರಣೋ ರಮತೇ ರಮೇಶಃ॥
– ಮ.ಭಾ.ತಾ.ನಿ. (೯/೧೨)

೨. ಸಂಚಿಂತಯೇದ್ ಭಗವತಶ್ಚರಣಾರವಿಂದಂ ವಜ್ರಾಂಕುಶಧ್ವಸರೋರುಹಲಾಂಛನಾಢ್ಯಮ್।
ಉತ್ತುಂಗರಕ್ತವಿಲಸನ್ನಖಚಕ್ರವಾಲಜ್ಯೋತ್ಸ್ನಾಭಿರಾಹತಮಹದ್ಹೃದಯಾಂಧಕಾರಮ್॥
– ಭಾಗವತ (೩/೮/೨೧)

೩. ಶ್ರೀವತ್ಸವಕ್ಷಾಃ ಶ್ರೀವಾಸಃ ಶ್ರೀಪತಿಃ ಶ್ರೀಮತಾಂವರಃ। – ವಿಷ್ಣುಸಹಸ್ರನಾಮ

ಅಂಗಾಲುಗಳು ಕಮಲದಂತೆ ಕೋಮಲವಾಗಿದ್ದು ಕೆಂಬಣ್ಣದಿಂದ ಕೂಡಿದೆ ಅಂದರ್ಥ. ಅಂಗಾಲುಗಳು ಕೆಂಪಾಗಿರುವುದು ಶ್ರೇಷ್ಠತೆಗೆ ದ್ಯೋತಕ. ಇಂತಹ ಶ್ರೀಹರಿ ಸರ್ವೋತ್ತಮ ಎಂದು ಭಾವ.

೩. ದೇವತೆಗಳನ್ನು ಪಾದದಿಂದಲೂ, ಮನುಷ್ಯರನ್ನು ಶಿರಸ್ಸಿನಿಂದಲೂ ಪ್ರಾರಂಭಿಸಿ ವಂದಿಸಬೇಕು ಎಂಬುದು [೧]ವಿಧಿ. ಶ್ರೀಹರಿಯು ಸರ್ವೋತ್ತಮನಾದ್ದರಿಂದ ಪಾದದಿಂದಲೇ ಅವನ ವರ್ಣನೆಯು ಪ್ರಾರಂಭವಾಗಿದೆ.

೪. ಇಲ್ಲಿ **ಪಾದ** ಎಂಬುದಕ್ಕೆ ಪದ ಎಂದೂ ಅರ್ಥ. ಅದಕ್ಕೆ ಇದು ವೇದವ್ಯಾಸರಿಂದ ರಚಿತವಾದ ಶ್ರೀಮದ್ಭಾಗವತಾದಿ ಶಾಸ್ತ್ರಗಳು ಎಂದು ಭಾವ. ಶ್ರೀಹರಿಯ ಮಹಿಮೆಗಳನ್ನು ತಿಳಿಸಿಕೊಡುವ ಶಾಸ್ತ್ರಗಳ ಶ್ರವಣಾದಿಗಳು ಮನಸ್ಸಿನ ಕ್ಲೇಶವನ್ನು ಪರಿಹರಿಸುವವು ಎಂದು ಭಾವ:

**ಶ್ರವಣ ಮನಕಾನಂದವೀವುದು ಭವಜನಿತದುಃಖಗಳ ಕಳೆವುದು**
**(ಹರಿಕಥಾಮೃತಸಾರ).**

**ಜಾಂಬೂನದಾಂಬರಾಧಾರಂ ನಿತಂಬಂ ಚಿಂತ್ಯಮೀಶಿತುಃ।**
**ಸ್ವರ್ಣಮಂಜೀರಸಂವೀತಮಾರೂಢಂ ಜಗದಂಬಯಾ ॥ ೩ ॥**

ಪದಚ್ಛೇದ : ಜಾಂಬೂನದಾಂಬರಾಧಾರಮ್, ನಿತಂಬಮ್, ಚಿಂತ್ಯಮ್, ಈಶಿತುಃ, ಸ್ವರ್ಣಮಂಜೀರಸಂವೀತಮ್, ಆರೂಢಮ್, ಜಗದಂಬಯಾ।

ಅ : ಜಗದಂಬಯಾ, ಆರೂಢಮ್, ಜಾಂಬೂನದಾಂಬರಾಧಾರಮ್, ಸ್ವರ್ಣಮಂಜೀರಸಂವೀತಮ್, ಈಶಿತುಃ, ನಿತಂಬಮ್, ಚಿಂತ್ಯಮ್।

ಪ್ರತಿಪದಾರ್ಥ : **ಜಗದಂಬಯಾ** – ಜಗನ್ಮಾತೆಯಾದ ಮಹಾಲಕ್ಷ್ಮಿಯು, **ಆರೂಢಮ್** – ಏರಿ ಕುಳಿತಿರುವ, **ಜಾಂಬೂನದಾಂಬರಾಧಾರಮ್** – ಪೀತಾಂಬರವನ್ನು ತೊಟ್ಟಿರುವ; **ಸ್ವರ್ಣಮಂಜೀರಸಂವೀತಮ್** – ಸುವರ್ಣದ ನಡುಗೆಜ್ಜೆ ಬಿಗಿದಿರುವ; **ಈಶಿತುಃ** – ಸರ್ವೇಶನಾದ ಶ್ರೀಹರಿಯ; **ನಿತಂಬಮ್** – ಕಟಿಯು; **ಚಿಂತ್ಯಮ್** – ಚಿಂತಿಸಲ್ಪಡಬೇಕು.

**ಚೆಲು ಹೊನ್ನ ವಸ್ತ್ರನಲಿವಿಂದ ಧರಿಸಿ ವರಸ್ವರ್ಣಕಾಂಚಿ ಬಿಗಿದ।**
**ಜಗದಂಬೆ ರಮೆಯು ಮುದದಿಂದ ಕುಳಿತ ಶ್ರೀಹರಿಯ ಕಟಿಯ ನೆನೆವೆ ॥ ೩ ॥**

ಅನು : ಜಗನ್ಮಾತೆಯಾದ ಮಹಾಲಕ್ಷ್ಮಿಯು ಏರಿ ಕುಳಿತಿರುವ, ಪೀತಾಂಬರವನ್ನು ತೊಟ್ಟಿರುವ, ಸುವರ್ಣದ ನಡುಗೆಜ್ಜೆ ಬಿಗಿದಿರುವ, ಸರ್ವೇಶನಾದ ಶ್ರೀಹರಿಯ ಕಟಿಯನ್ನು ಚಿಂತಿಸಬೇಕು.

---

೧. ಮನುಷ್ಯಾ ಮೌಲಿತೋ ವರ್ಣ್ಯಾ ದೇವಾಶ್ಚರಣತಸ್ತಥಾ। – ಸ್ಮೃತಿ

ವಿ : ೧. ಹಿಂದಿನ ಶ್ಲೋಕದಲ್ಲಿ ಶ್ರೀಹರಿಯ ಪಾದದ ವರ್ಣನೆ ಮಾಡಿ ಈ ಶ್ಲೋಕದಲ್ಲಿ ಅವನ ನಿತಂಬವನ್ನು ವರ್ಣಿಸುತ್ತಿರುವರು. ನಿತಂಬ ಎಂದರೆ ಕಟಿ ಎಂಬುದು ಮುಖ್ಯಾರ್ಥ. ಇಲ್ಲಿ ಅದಕ್ಕೆ ಸನಿಹವಾದ ತೊಡೆ ಎಂದು ತಿಳಿಯುವುದು ವಿಹಿತ. ಶ್ರೀಹರಿಯು ಉಟ್ಟಿರುವ ವಸ್ತ್ರವು ಚಿನ್ನದ್ದು ಎಂದರೆ ಪೀತಾಂಬರವೆಂದರ್ಥ.

೨. ದೇವಲೋಕದ ಚಿನ್ನಕ್ಕೆ **ಜಾಂಬೂನದ** ಎಂಬುದು ವಿಶೇಷ ಹೆಸರು[೧]. ಉಟ್ಟಿರುವ ಪೀತಾಂಬರದ ಮೇಲೆ ಸುವರ್ಣದ ನಡುಗೆಜ್ಜೆ ಬಿಗಿಯಲ್ಪಟ್ಟಿದೆ ಹಾಗೂ ಅಲ್ಲಿ ಮಹಾಲಕ್ಷ್ಮೀ ಏರಿ ಕುಳಿತಿರುವಳು.

೩. ಇಲ್ಲಿ **ಚಿಂತ್ಯಂ** ಎಂಬುದಕ್ಕೆ ಚಿಂತನೆಗೆ ಅರ್ಹ ಎಂದು ಅರ್ಥ. ಇದನ್ನು ಚಿಂತ್ಯಂ ನಮಾಮಿ, ನಿತಂಬಂ ನಮಾಮಿ ಎಂದೂ, ಹಿಂದಿನ ಶ್ಲೋಕದಲ್ಲಿನ ಕ್ರಿಯಾಪದದೊಂದಿಗೆ ಅನ್ವಯಮಾಡಿಕೊಂಡು ಓದಬಹುದು. ಆಗ ಚಿಂತನೆಗೆ ಅರ್ಹವಾದ ಶ್ರೀಹರಿಯ ಕಟಿಯನ್ನು ನಮಸ್ಕರಿಸುವೆನು ಎಂದು ಅರ್ಥವಾಗುವುದು. ಮುಂದೆಯು ಸಹ ಸ್ಮರಣೀಯ ಮೊದಲಾದವುಗಳಲ್ಲಿ ಇದೇ ರೀತಿಯಾಗಿ ಕ್ರಿಯಾಪದವನ್ನು ಅನ್ವಯಿಸಿ ಅರ್ಥಮಾಡಿಕೊಳ್ಳಬಹುದು.

**ಉದರಂ ಚಿಂತ್ಯಮೀಶಸ್ಯ ತನುತ್ವೇಽಪ್ಯಖಿಲಂಭರಮ್ ।**
**ವಲಿತ್ರಯಾಂಕಿತಂ ನಿತ್ಯಮುಪಗೂಢಂ ಶ್ರಿಯೈಕಯಾ ॥ ೪ ॥**

**ಪ** : ಉದರಮ್, ಚಿಂತ್ಯಮ್, ಈಶಸ್ಯ, ತನುತ್ವೇ, ಅಪಿ, ಅಖಿಲಂಭರಮ್, ವಲಿತ್ರಯಾಂಕಿತಮ್, ನಿತ್ಯಮ್, ಉಪಗೂಢಮ್, ಶ್ರಿಯಾ, ಏಕಯಾ ।

**ಅ** : ವಲಿತ್ರಯಾಂಕಿತಮ್, ನಿತ್ಯಮ್, ತನುತ್ವೇ, ಅಪಿ, ಅಖಿಲಂಭರಮ್, ಶ್ರಿಯಾ, ಏಕಯಾ, ಉಪಗೂಢಮ್, ಈಶಸ್ಯ, ಉದರಮ್, ನಿತ್ಯಮ್, ಚಿಂತ್ಯಮ್ ।

ಪ್ರ.ಪ. : **ವಲಿತ್ರಯಾಂಕಿತಮ್** – ತ್ರಿವಳಿಯಿಂದ ಕೂಡಿದ; **ನಿತ್ಯಮ್**– ಸದಾ; **ತನುತ್ವೇ**– ತೆಳುವಾಗಿದ್ದರೂ, **ಅಪಿ** – ಸಹ; **ಅಖಿಲಂಭರಮ್** – ಸಕಲವನ್ನೂ ಧರಿಸಿರುವ; **ಶ್ರಿಯಾ** – ಮಹಾಲಕ್ಷ್ಮಿ, **ಏಕಯಾ** – ಒಬ್ಬಳಿಂದಲೇ; **ಉಪಗೂಢಮ್** – ಆಲಿಂಗಿತವಾದ; **ಈಶಸ್ಯ** – ಸರ್ವೇಶನಾದ ಶ್ರೀಹರಿಯ, **ಉದರಮ್** – ಉದರವು; (ನಿತ್ಯಮ್ – ನಿತ್ಯವೂ); **ಚಿಂತ್ಯಮ್** – ಚಿಂತಿಸಲ್ಪಡಬೇಕು.

---

೧. 'ಮಯಂ ತು ಮಾನುಷಂ ಸ್ವರ್ಣಂ ಪೀತಂ ಗಾಂಧರ್ವಮೇವ ಚ ।
ಇಂದ್ರಗೋಪನಿಭಂ ನಾಮ್ನಾ **ಜಾಂಬೂನದ**ಮಿತಿ ಸ್ಮೃತಮ್ ।
**ದೈ**ವಂ ಚಾಮೀಕರಂ ನಾಮ ಪ್ರೋದ್ಯದಾದಿತ್ಯಸನ್ನಿಭಮ್ ।
ನೈಜೋ ವಿಶೇಷಃ ಸ್ವರ್ಣಾನಾಮೇತೇಷಾಂ ಸರ್ವದೈವ ಚ ॥' – ಬೃಹದ್ಭಾಷ್ಯ (೬/೪)

**ಅತ್ಯಂತ ತೆಳುವು ತಾನಾಗಿ ಇದ್ದು ಈ ಎಲ್ಲ ಜಗವ ಹೊತ್ತ।**
**ವಲಿತ್ರಯದಿ ಕೂಡಿ ಸಿರಿ ರಮೆಯ ಜೋಡಿ ಶ್ರೀಹರಿಯ ಉದರ ನೆನೆವೆ ॥ ೪ ॥**

**ಅನು : ತ್ರಿವಳಿಯಿಂದ ಕೂಡಿದ, ಸದಾ ತೆಳುವಾಗಿದ್ದರೂ ಸಹ ಸಕಲವನ್ನೂ ಧರಿಸಿರುವ, ಮಹಾಲಕ್ಷ್ಮಿ ಒಬ್ಬಳಿಂದಲೇ ಸದಾ ಆಲಿಂಗಿತವಾದ, ಸರ್ವೇಶನಾದ ಶ್ರೀಹರಿಯ ಉದರವನ್ನು( ನಿತ್ಯವೂ) ಸದಾ ಚಿಂತಿಸಬೇಕು.**

ವಿ: ೧. ಶ್ರೀಹರಿಯ ಉದರದ ವರ್ಣನೆ ಈ ಶ್ಲೋಕದಲ್ಲಿದೆ. ಉದರವು ತೆಳುವಾಗಿದ್ದಷ್ಟು ಶ್ರೇಷ್ಠ ಎನ್ನಿಸುವುದು. ಶ್ರೀಹರಿಯ ಉದರ ಅತ್ಯಂತ ತೆಳುವಾದುದು; ಆದ್ದರಿಂದಲೇ ಅದು ಸರ್ವಶ್ರೇಷ್ಠವಾಗಿದ್ದು, ಅವನ ಸರ್ವೋತ್ತಮತ್ವಕ್ಕೆ ಸೂಚಕವಾಗಿದೆ. ಅದರಲ್ಲಿ ಇಡೀ ವಿಶ್ವವೇ ಅಡಗಿದೆ; ತೆಳು ಉದರದಲ್ಲಿ ಹಾಗೆ ವಿಶ್ವವನ್ನೇ ಧರಿಸಿರುವುದು ಶ್ರೀಹರಿಯ ವಿಶೇಷವಾಗಿದ್ದು, ಅವನ ಉದರವು ಸಹ ಅನಂತ ಎಂಬ ಭಾವವನ್ನು ಸೂಚಿಸುವುದು.

೨. ಉದರದ ಮೇಲೆ ಮೂರು ನಿರಿಗಳು ಇರುವುದು ತುಂಬಾ ಶ್ರೇಷ್ಠವಾದುದು ಎಂಬುದಾಗಿ ಸಾಮುದ್ರಿಕ ಶಾಸ್ತ್ರತಿಳಿಸಿದೆ. ಹೀಗೆ ಶ್ರೀಹರಿಯ ಉದರದಲ್ಲಿ ಮೂರು ನಿರಿಗಳು ಇರುವುದು ಅವನ ಹಿರಿಮೆಗೆ ದ್ಯೋತಕ.

೩. ಆ ಮೂರು ನಿರಿಗಳು ಮೂರು ಲೋಕಗಳಿಗೆ ಸಂಕೇತ. ಅದರಂತೆ ಶ್ವೇತದ್ವೀಪ, ಅನಂತಾಸನ ಹಾಗೂ ವೈಕುಂಠ ಎಂಬ ಅವನ ತ್ರಿಧಾಮಗಳಿಗೂ ಸಂಕೇತ. ಅಲ್ಲಿಯೂ ಸಹ ಮಹಾಲಕ್ಷ್ಮೀಯು ನೆಲೆಸಿರುವಳು ಎಂಬುದು ವಿಶೇಷ.

೪. ವಿಶೇಷವಾಗಿ ಪ್ರಳಯಕಾಲದಲ್ಲಿ ಶ್ರೀಹರಿಯು ಇಡೀ ವಿಶ್ವವನ್ನು ತನ್ನ ಉದರ-ದಲ್ಲಿರಿಸಿಕೊಂಡು ಸಂರಕ್ಷಿಸುವನು[೧] ಎಂದು ಭಾವ. ಅವನು ಸರ್ವತ್ರವ್ಯಾಪ್ತನಾದ್ದರಿಂದ, ಅವನ ಉದರವನ್ನಾಶ್ರಯಿಸಿಯೇ ಇಡೀ ಜಗತ್ತು ಇದೆ ಎಂಬುದು ಮುಖ್ಯಭಾವ.

**ಸ್ಮರಣೀಯಮುರೋ [೨]ವಿಷ್ಣೋರಿಂದಿರಾವಾಸಮೀಶಿತುಃ।**
**ಅನಂತಮಂತವದಿವ ಭುಜಯೋರಂತರಂಗತಮ್ ॥ ೫ ॥**

**ಪ :** ಸ್ಮರಣೀಯಮ್, ಉರಃ, ವಿಷ್ಣೋಃ, ಇಂದಿರಾವಾಸಮ್, ಈಶಿತುಃ, ಅನಂತಮ್, ಅಂತವತ್, ಇವ, ಭುಜಯೋಃ, ಅಂತರಮ್, ಗತಮ್ ।

---

೧. ..... ಅಖಿಲಂ ಜಠರೇ ನಿಧಾಯ ಲಕ್ಷ್ಮೀಭುಜಾಂತರಗತಃ ಸ್ವರತೋಽಪಿ ಚಾಗ್ರೇ।
– ಮ.ಭಾ.ತಾ.ನಿ. (೧/೨)

೨. ವಿಶ್ವಂ ವಿಷ್ಣುರ್ವಷಟ್ಕಾರಃ, ವೃಷಾಹೀ ವೃಷಭೋ ವಿಷ್ಣುಃ, ಅನಿರ್ದೇಶ್ಯವಪುರ್ವಿಷ್ಣುರ್ವೀರೋಽ-ನಂತೋ ಧನಂಜಯಃ. – ವಿಷ್ಣುಸಹಸ್ರನಾಮ

**ಅ :** ಅನಂತಮ್, (ಅಪಿ), ಅಂತವತ್, ಇವ, ಭುಜಯೋಃ, ಅಂತರಮ್, ಗತಮ್, ಇಂದಿರಾವಾಸಮ್, ಈಶಿತುಃ, ವಿಷ್ಣೋಃ, ಉರಃ, (ನಿತ್ಯಮ್), ಸ್ಮರಣೀಯಮ್ ।

**ಪ್ರ.ಪ. : ಅನಂತಮ್, (ಅಪಿ)** – ಕೊನೆಯಿಲ್ಲದ್ದಾದರೂ; **ಅಂತವತ್ ಇವ** – ಕೊನೆಯನ್ನು ಹೊಂದಿರುವಂತೆ ಇರುವ; **ಭುಜಯೋಃ** – ಎರಡು ತೋಳುಗಳ; **ಅಂತರಮ್** – ಮಧ್ಯೆ; **ಗತಮ್** – ಇರುವ; **ಇಂದಿರಾವಾಸಮ್** – ಮಹಾಲಕ್ಷ್ಮಿಗೆ ನೆಲೆಯಾದ; **ಈಶಿತುಃ** – ಸರ್ವೇಶನಾದ; **ವಿಷ್ಣೋಃ** – ಶ್ರೀಹರಿಯ, **ಉರಃ** – ವಕ್ಷಃಸ್ಥಳವು; (**ನಿತ್ಯಮ್** – ಸದಾ); **ಸ್ಮರಣೀಯಮ್** – ಸ್ಮರಣೀಯವಾಗಿದೆ.

**ಕೊನೆ ಎಂದು ಇರದೆ ಕೊನೆ ಇರುವ ತೆರದಿ ತೋಳೆರಡ ಮಧ್ಯೆ ಎಸೆವ ।**
**ಸಿರಿದೇವಿನಿಲಯ ಅತ್ಯಂತ ಹಿರಿಯ ಶ್ರೀಹರಿಯ ವಕ್ಷ ನೆನೆವೆ ॥ ೫ ॥**

**ಅನು : ಕೊನೆಯಿಲ್ಲದ್ದಾದರೂ ಕೊನೆ ಇರುವಂತೆ ಇರುವ, ಎರಡು ತೋಳುಗಳ ಮಧ್ಯೆ ಇರುವ, ಮಹಾಲಕ್ಷ್ಮಿಗೆ ನೆಲೆಯಾದ, ಸರ್ವೇಶನಾದ ಶ್ರೀಹರಿಯ ವಕ್ಷಃಸ್ಥಳವು (ಸದಾ) ಸ್ಮರಣೀಯವಾಗಿದೆ.**

ವಿ : ೧. ಶ್ರೀಹರಿಯ ವಕ್ಷಸ್ಥಳದ ವರ್ಣನೆ ಈ ಶ್ಲೋಕದಲ್ಲಿದೆ. ಜಗದಂಬೆಯಾದ ಮಹಾಲಕ್ಷ್ಮಿಯು ನೆಲೆಸಿರುವುದು ಅದರ ಹಿರಿಮೆ. ಶ್ರೀಹರಿಯು ಶ್ರೀವತ್ಸ ಲಾಂಛನ ಎಂಬುದರ ವರ್ಣನೆ ಇದಾಗಿದೆ.

೨. ಇಂದಿರೆಗೆ ನೆಲೆ ಎನ್ನುವ ಮೂಲಕ ಅದು ಮಹಾಲಕ್ಷ್ಮಿಗೆ ಆಶ್ರಯವಾಗಿದೆ ಎಂಬ ವಿಶೇಷಾಂಶ ಸೂಚಿತ. ಎಂದರೆ ಅವ್ಯಕ್ತ ತತ್ತ್ವಕ್ಕೆ ಸದಾ ಅಭಿಮಾನಿದೇವತೆಯಾಗಿರುವ ಮಹಾಲಕ್ಷ್ಮಿಗೆ ಆಶ್ರಯವಾಗುವ ಮೂಲಕ ಶ್ರೀಹರಿಯು ಅವ್ಯಕ್ತ ಮೊದಲಾದ ಸಕಲತತ್ತ್ವಗಳಿಗೂ ಆಶ್ರಯನಾದವನು ಎಂದು ಭಾವ.

೩. ಅಷ್ಟು ವ್ಯಾಪ್ತವಾಗಿದ್ದರೂ ಸಹ ಅವನ ವಕ್ಷಸ್ಥಳವು ಅವನ ಎರಡು ತೋಳುಗಳ ಮಧ್ಯ ಇರುವುದರಿಂದ ಕೊನೆಯನ್ನು ಹೊಂದಿರುವಂತೆ ತೋರುವುದು ಎಂಬುದು ವಿಶೇಷ. ಆದರಂತೆ ಅವನ ತೋಳುಗಳು ಸಹ ಸರ್ವತ್ರವ್ಯಾಪ್ತವಾಗಿದ್ದು, ವಕ್ಷಸ್ಥಳದ ಹೊರಗೆ ಇರುವುದರಿಂದ ಕೊನೆ ಇರುವಂತೆ ತೋರುವವು ಎಂಬ ವಿಶೇಷಾಂಶವೂ ಇದರಿಂದ ಸೂಚಿತ. ಹೀಗೆ ಅವನ ಪಾದ, ತೋಳು, ಉದರ, ನೋಟ, ಮುಖ, ಹುಬ್ಬುಗಳು ಮೊದಲಾಗಿ ಸಕಲವೂ ಅನಂತವಾಗಿವೆ ಹಾಗೂ ಕೊನೆ ಇರುವ ರೀತಿಯಲ್ಲಿ ಕಾಣುವವು ಸಹ ಎಂದು ತಿಳಿಯಬೇಕು.

೪. ಶ್ರೀಹರಿಯು ಅನಂತ ಎಂದರೆ ಸರ್ವತ್ರವ್ಯಾಪ್ತ ಎಂದರ್ಥ. ಭಗವದ್ಗೀತೆಯ ವಿಶ್ವರೂಪಾಧ್ಯಾಯದಲ್ಲಿ ಬಂದಿರುವಂತೆ ವಿಶ್ವವನ್ನೇ ವ್ಯಾಪಿಸಿರುವ ಹಿರಿಮೆ ಅವನದು.

ಜ್ಞಾನಾನಂದಮಯವಾದ ಅವನ ಕರ, ಪಾದ, ಉದರ ಮೊದಲಾದ ಸಕಲ ಅವಯವಗಳೂ, ಸಹ ಪ್ರತ್ಯೇಕವಾಗಿ ಸರ್ವತ್ರ ವ್ಯಾಪ್ತ ಎಂಬುದು ವಿಶೇಷ ಪ್ರಮೇಯ.

**[೨]ಶಂಖಚಕ್ರಗದಾಪದ್ಮಧರಾಶ್ಚಿಂತ್ಯಾ ಹರೇರ್ಭುಜಾಃ ।**
**ಪೀನವೃತ್ತಾ ಜಗದ್ರಕ್ಷಾಕೇವಲೋದ್ಯೋಗಿನೋಽನಿಶಮ್ ॥ ೬ ॥**

**ಪ** : ಶಂಖಚಕ್ರಗದಾಪದ್ಮಧರಾಃ, ಚಿಂತ್ಯಾಃ, ಹರೇಃ, ಭುಜಾಃ, ಪೀನವೃತ್ತಾಃ, ಜಗದ್ರಕ್ಷಾಕೇವಲೋದ್ಯೋಗಿನಃ, ಅನಿಶಮ್ ।

**ಅ** : ಶಂಖಚಕ್ರಗದಾಪದ್ಮಧರಾಃ, ಪೀನವೃತ್ತಾಃ, ಜಗದ್ರಕ್ಷಾಕೇವಲೋದ್ಯೋಗಿನಃ, ಹರೇಃ, ಭುಜಾಃ, ಅನಿಶಮ್, ಚಿಂತ್ಯಾಃ ।

**ಪ್ರ.ಪ.** : **ಶಂಖಚಕ್ರಗದಾಪದ್ಮಧರಾಃ** – ಶಂಖ, ಚಕ್ರ, ಗದೆ, ಪದ್ಮಗಳನ್ನು ಧರಿಸಿದ; **ಪೀನವೃತ್ತಾಃ** – ಉಬ್ಬಿದ ಹಾಗೂ ದುಂಡಗಿರುವ; **ಜಗದ್ರಕ್ಷಾಕೇವಲೋದ್ಯೋಗಿನಃ** – ಜಗದ್ರಕ್ಷಣೆಯೊಂದನ್ನೇ ಮುಖ್ಯಕಾರ್ಯವನ್ನಾಗಿ ಉಳ್ಳ; **ಹರೇಃ** – ಶ್ರೀಹರಿಯ, **ಭುಜಾಃ** – ತೋಳುಗಳು; **ಅನಿಶಮ್** – ಸದಾ, **ಚಿಂತ್ಯಾಃ** – ಚಿಂತಿಸಲ್ಪಡಬೇಕು.

**ವರಶಂಖಚಕ್ರಗದೆಪದ್ಮ ಧರಿಸಿ ಎಂದೆಂದು ಎಲ್ಲ ಜಗದ ।**
**ಪಾಲನೆಯು ಒಂದೆ ಉದ್ಯೋಗವಾದ ಶ್ರೀಹರಿಯ ತೋಳ ಸ್ಮರಿಪೆ ॥ ೬ ॥**

**ಅನು : ಶಂಖ, ಚಕ್ರ, ಗದೆ, ಪದ್ಮಗಳನ್ನು ಧರಿಸಿದ, ಉಬ್ಬಿದ ಹಾಗೂ ದುಂಡಗಿರುವ, ಜಗದ್ರಕ್ಷಣೆಯೊಂದನ್ನೇ ಮುಖ್ಯಕಾರ್ಯವನ್ನಾಗಿ ಉಳ್ಳ ಶ್ರೀಹರಿಯ ತೋಳುಗಳನ್ನು ಸದಾ ಚಿಂತಿಸಬೇಕು.**

ವಿ : ೧. ಶ್ರೀಹರಿಯ ತೋಳುಗಳಲ್ಲಿ ಶಂಖ, ಚಕ್ರ, ಗದೆ ಹಾಗೂ ಪದ್ಮ ಎಂಬ ಆಯುಧಗಳು ಇರುವವು. ಶ್ರೀಹರಿಯು ಅವುಗಳನ್ನು ಹಾಗೆ ಸದಾಕಾಲದಲ್ಲೂ ಧರಿಸಿರುವನು. ಅವುಗಳನ್ನು ಹಾಗೆ ಧರಿಸಿರುವುದು ತನ್ನ ರಕ್ಷಣೆಗಾಗಿ ಅಲ್ಲ, ಭಕ್ತರ ರಕ್ಷಣೆಗಾಗಿ ಮಾತ್ರ ಎಂದು ಭಾವ.

೨. ಶ್ರೀಹರಿಯ ಶಂಖ, ಚಕ್ರಾದಿಗಳು ಅವನಿಂದ ಮಾತ್ರವೇ ಧರಿಸಲು ಸಾಧ್ಯ. ಅದೂ ಸಹ ಅವನು ಅವುಗಳನ್ನು ಅನಾದಿಕಾಲದಿಂದ ಅಂತ್ಯಕಾಲದವರೆಗೂ ಯಾವುದೇ ಆಯಾಸವಿಲ್ಲದೆ, ಲೀಲೆಯಿಂದ ಧರಿಸಿರುವನು ಎಂಬುದು ವಿಶೇಷ. ಒಮ್ಮೆ ಅಶ್ವತ್ಥಾಮಾಚಾರ್ಯರು ದ್ವಾರಕೆಯಲ್ಲಿ ಶ್ರೀಕೃಷ್ಣನ ಬಳಿಗೆ ತೆರಳಿ, ಅವನ ಚಕ್ರವನ್ನು ನೀಡಲು ಕೇಳಿಕೊಂಡಾಗ, ಶ್ರೀಕೃಷ್ಣನು ಅದಕ್ಕೆ ಸಮ್ಮತಿಸಿ, ಅದನ್ನು ತೆಗೆದುಕೊಳ್ಳಲು ತಿಳಿಸುವನು.

---

೧. ದ್ಯಾವಾಪೃಥಿವ್ಯೋರಿದಮಂತರಂ ಹಿ ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ ॥
– ಗೀತಾ (೧೧/೨೦)

೨. ಗುಪ್ತಶ್ಚಕ್ರಗದಾಧರಃ, ಶಂಖಭೃನ್ನಂದಕೀ ಚಕ್ರೀ ಶಾರ್ಙ್ಗಧನ್ವಾ ಗದಾಧರಃ. – ವಿಷ್ಣುಸಹಸ್ರನಾಮ

ಆಗ ಅಶ್ವತ್ಥಾಮರು ಸಕಲರೀತಿಯಲ್ಲಿ ಪ್ರಯತ್ನಿಸಿದರೂ ಸಹ ಅದನ್ನು ಅಲುಗಾಡಿಸಲು ಸಮರ್ಥರಾಗದೆ ಆಯಾಸಕ್ಕೊಳಗಾದರು ಎಂಬ ವಿವರ ಮಹಾಭಾರತದಲ್ಲಿದೆ. ರುದ್ರದೇವರ ಅವತಾರರೆಂದು ಪ್ರಸಿದ್ಧರಾದ ಅಂತಹ ಮಹನೀಯರಿಗೇ ಅದನ್ನು ಒಮ್ಮೆಯೂ ಸಹ ಎತ್ತಲು ಸಾಧ್ಯವಾಗಲಿಲ್ಲ[೧]. ಆದರೆ, ಅವುಗಳನ್ನು ಸದಾಕಾಲ ಅನಾಯಾಸವಾಗಿ ಧರಿಸಿರುವ ಶ್ರೀಹರಿಯು ಸರ್ವೋತ್ತಮ ಎಂದು ಭಾವ. ಚಕ್ರವು ಹೇಗೋ ಹಾಗೆ ಶಂಖ ಮೊದಲಾದವುಗಳು ಸಹ ಅವನಿಂದ ಮಾತ್ರವೇ ಹಾಗೆ ಧರಿಸಲು ಸಾಧ್ಯ ಎಂಬ ವಿಶೇಷಾಂಶವನ್ನು ತಿಳಿಯಬೇಕು.

೩. ರುದ್ರದೇವರ ಧನುಸ್ಸನ್ನು ಶ್ರೀರಾಮ ಹಾಗೂ ಶ್ರೀಕೃಷ್ಣರೂಪಗಳಿಂದ ಎಡಗೈಯಿಂದ ಲೀಲಾಜಾಲವಾಗಿ ಮೇಲೆತ್ತಿ ಭಂಗಗೊಳಿಸಿದ ವಿವರ ರಾಮಾಯಣ ಹಾಗೂ ಮಹಾಭಾರತ-ಗಳಲ್ಲಿ ಬಂದಿದೆ. ಇದರಿಂದ ಬ್ರಹ್ಮರುದ್ರಾದಿ ಇತರ ಸಕಲ ದೇವತೆಗಳ ಸಕಲ ಆಯುಧಗಳನ್ನು ಶ್ರೀಹರಿಯು ಏಕಕಾಲದಲ್ಲಿ ಅನಾಯಾಸವಾಗಿ ಧರಿಸಬಲ್ಲ ಎಂಬ ವಿಶೇಷಾಂಶವು ಸೂಚಿತ.

೪. ವಾಸ್ತವವಾಗಿ ಶ್ರೀಹರಿಯ ಕೈಗಳು ಸಹ ಅನಂತ. ಅದರಂತೆ ಅವನು ಹಿಡಿದಿರುವ ಆಯುಧಗಳೂ ಅನಂತಬಗೆ ಎಂಬ ವಿಶೇಷಾಂಶ [೨]ತಂತ್ರಸಾರಸಂಗ್ರಹದಲ್ಲಿದೆ. ಆದರೆ ಅಂತಹ ಚಿಂತನೆ ಎಲ್ಲರಿಗೂ ಎಟಕುವಂತಹ ಸಂಗತಿಯಲ್ಲ. ಆದ್ದರಿಂದಾಗಿ ಇಲ್ಲಿ ನಾಲ್ಕು ಕೈಗಳು ಹಾಗೂ ಆಯುಧಗಳು ಮಾತ್ರ ಉಲ್ಲೇಖಿಸಲ್ಪಟ್ಟಿವೆ. ಅರ್ಹತೆ ಇದ್ದವರು ಇದಕ್ಕಿಂತ ಹೆಚ್ಚು ಕೈಗಳು ಹಾಗೂ ಆಯುಧಗಳನ್ನು ಸಹ ಅಗತ್ಯವಾಗಿ ಚಿಂತಿಸಬೇಕು ಎಂಬ ವಿವರವು ಇಲ್ಲಿ ಬಂದಿದೆ.

---

೧. ಊಚೇ ಚ ಪಾರ್ಥಯೋಃ ಕೃಷ್ಣೋ ಯತ್ಕೃತಂ ದ್ರೌಣಿನಾ ಪುರಾ ।
ಸ್ವಾಯುಧಾನಾಂ ಯಾಚನಂ ಚಾಪ್ಯಶಕ್ತೇನ ತದುದ್ಧೃತೌ ॥
ಪೃಷ್ಟೇನೋಕ್ತಂ ತ್ವಯಾ ಹೀನಾಂ ಕೃತ್ವಾ ದುರ್ಯೋಧನಾಯ ಗಾಮ್ ।
ದಾತುಂ ತ್ವದಾಯುಧಂ ಮೇಽದ್ಯೇತ್ಯೇವಮುಕ್ತೇ ತ್ವನೋದಿತಮ್ ।
ಮೈವಂ ಕಾರ್ಷೀಃ ಪುನರಿತಿ ಧ್ಯಾಯತಾಽಬ್ಧೇಸ್ತಟೇ ಸ್ವಮು ॥ – ಮ.ಭಾ.ತಾ.ನಿ.(೨೮/೧೫೬,೧೫೭)

೨. ಸರ್ವೇಷ್ವಪಿ ಹಿ ಮಂತ್ರೇಷು ದ್ವ್ಯಾದ್ಯನಂತಾಂತಬಾಹುಕಃ ।
ಚೇತನಾಂತಸ್ಥಮಾರಭ್ಯ ಸರ್ವಗಾಂತಸ್ಥರೂಪವಾನ್ ॥
ಅನಂತರೂಪೋ ಧ್ಯೇಯೋಽತ್ರ ಸ್ವಗುರೂಕ್ತಾನುಸಾರತಃ ।
ಯಥಾಯೋಗ್ಯಂ ಯಥಾಶಕ್ತಿ ತತ್ತದಾಯುಧಭೂಷಣಃ ॥
ಶಂಖಚಕ್ರಗದಾಪದ್ಮಖಡ್ಗಖೇಟಾಃ ಸಶಾರ್ಙ್ಗಕಾಃ ।
ಶರೋ ಮುಸಲವಜ್ರೌ ಚ ಹಲಃ ಪಾಶಾಂಕುಶೌ ತಥಾ ॥
ಶೂಲಂ ಚ ಭಿಂಡಿಪಾಲಶ್ಚ ಪಟ್ಟಿಶೋಽಗ್ನಿರ್ವರಾಭಯೇ ।
ತರ್ಕಮುದ್ರಾಽಕ್ಷಮಾಲಾ ಚ ಪುಸ್ತಕಂ ಚ ವಿದಾರಣಮ್ ।
ಇತ್ಯಾದೀನ್ಯಖಿಲಾನ್ಯೇವ ವಿಷ್ಣೋಶ್ಚಿಂತ್ಯಾನಿ ಬಾಹುಷು ॥ – ತಂತ್ರಸಾರಸಂಗ್ರಹ(೪/೧೬-೧೯)

೫. ಹಾಗೆ ಭಕ್ತರನ್ನು ರಕ್ಷಿಸಲು ಶ್ರೀಹರಿಗೆ ಯಾವ ಆಯುಧದ ಅಗತ್ಯವು ಇಲ್ಲವೇ ಇಲ್ಲ. ಕೇವಲ ಇಚ್ಛಾಮಾತ್ರದಿಂದ ಸಕಲಜಗತ್ತನ್ನು ಸರ್ವಕಾಲದಲ್ಲೂ, ಸಂರಕ್ಷಿಸುವ ಹಿರಿಮೆ ಅವನದು. ಆದರೂ ಹಾಗೆ ಚಕ್ರಾದಿ ಆಯುಧಗಳನ್ನು ಧರಿಸಿರುವುದು ಭಕ್ತರಿಗೆ ಭರವಸೆ ನೀಡಲೆಂದು ಮಾತ್ರ ಎಂದೂ ಸಹ ತಿಳಿಯಬೇಕು.

೬. ಇಲ್ಲಿ ಶಂಖ, ಚಕ್ರ ಮೊದಲಾದವುಗಳಿಗೆ ಮಹಾಭಾರತತಾತ್ಪರ್ಯನಿರ್ಣಯ ಮೊದಲಾದ ಗ್ರಂಥಗಳಲ್ಲಿ ತಿಳಿಸಿರುವಂತೆ ಶ್ರೀ ಹಾಗೂ ದುರ್ಗಾರೂಪದ ಮಹಾಲಕ್ಷ್ಮೀ ಅಭಿಮಾನಿದೇವತೆಗಳು[1]. ಗದೆಗೆ ಶ್ರೀವಾಯುದೇವರು, ಪದ್ಮಕ್ಕೆ ಭೂ ರೂಪದ ಮಹಾಲಕ್ಷ್ಮೀ. ಅದರಂತೆ ಇತರ ಆಯುಧಗಳಿಗೂ ಸಹ ಅಭಿಮಾನಿದೇವತೆಗಳಿರುವರು. ಕಾಮ ಮೊದಲಾದ ಅವಾಂತರಾಭಿಮಾನಿದೇವತೆಗಳೂ ಸಹ. ಶ್ರೀಹರಿಯು ಆಯುಧಾದಿಗಳನ್ನು ಮಾತ್ರವಲ್ಲದೆ, ಅವುಗಳ ಅಭಿಮಾನಿದೇವತೆಗಳನ್ನು ಸಹ ಸದಾಕಾಲ ಧರಿಸಿರುವನು ಎಂದರ್ಥ.

**ಸಂತತಂ ಚಿಂತಯೇತ್ ಕಂಠಂ ಭಾಸ್ವತ್ಕೌಸ್ತುಭಭಾಸಕಮ್ ।**
**[2]ವೈಕುಂಠಸ್ಯಾಖಿಲಾ ವೇದಾ ಉದ್ಗೀರ್ಯಂತೇಽನಿಶಂ ಯತಃ ॥ ೭ ॥**

**ಪ :** ಸಂತತಮ್, ಚಿಂತಯೇತ್, ಕಂಠಮ್, ಭಾಸ್ವತ್ಕೌಸ್ತುಭಭಾಸಕಮ್, ವೈಕುಂಠಸ್ಯ, ಅಖಿಲಾಃ, ವೇದಾಃ, ಉದ್ಗೀರ್ಯಂತೇ, ಅನಿಶಮ್, ಯತಃ ।

**ಅ :** ಯತಃ, ಅಖಿಲಾಃ, ವೇದಾಃ, ಅನಿಶಮ್, ಉದ್ಗೀರ್ಯಂತೇ, ವೈಕುಂಠಸ್ಯ, ಹರೇಃ, ಭಾಸ್ವತ್ಕೌಸ್ತುಭಭಾಸಕಮ್, ಕಂಠಮ್, ಸಂತತಮ್, ಚಿಂತಯೇತ್ ।

ಪ್ರ.ಪ. : **ಯತಃ** – ಯಾವುದರಿಂದ; **ಅಖಿಲಾಃ** – ಸಕಲ; **ವೇದಾಃ** – ವೇದಗಳು; **ಅನಿಶಮ್** – ಸದಾ; **ಉದ್ಗೀರ್ಯಂತೇ** – ಉಚ್ಚರಿಸಲ್ಪಡುವವೋ ಅಂತಹ, **ವೈಕುಂಠಸ್ಯ** – ವೈಕುಂಠನಾಮಕನಾದ, **ಹರೇಃ** – ಶ್ರೀಹರಿಯ, **ಭಾಸ್ವತ್ಕೌಸ್ತುಭಭಾಸಕಮ್** – ಹೊಳೆಯುವ ಕೌಸ್ತುಭಮಣಿಗೂ ಶೋಭೆ ನೀಡುವ; **ಕಂಠಮ್** – ಕಂಠವನ್ನು; **ಸಂತತಮ್** – ಸದಾ; **ಚಿಂತಯೇತ್** – ಚಿಂತಿಸಬೇಕು.

---

೧. ಪೂರ್ವಂ ಹರೇಶ್ಚಕ್ರಮಭೂದ್ಧಿ ದುರ್ಗಾ ತಮಃಸ್ಥಿತಾ ಶ್ರೀರಿತಿ ಯಾಂ ವದಂತಿ ।
ಸತ್ತ್ವಾತ್ಮಿಕಾ ಶಂಖಮಥೋ ರಜಸ್ಥಾ ಭೂರ್ನಾಮಿಕಾ ಪದ್ಮಮಭೂದ್ಧರೇರ್ಹಿ ॥
ಗದಾ ತು ವಾಯುರ್ಬಲಸಂವಿದಾತ್ಮಾ ಶಾರ್ಙ್ಗಂ ಚ ವಿದ್ಯೇತಿ ರಮೈವ ಖಡ್ಗಃ ।
ದುರ್ಗಾತ್ಮಿಕಾ ಸೈವ ಚ ಚರ್ಮನಾಮ್ನೀ ಪಂಚಾತ್ಮಕೋ ಮಾರುತ ಏವ ಬಾಣಾಃ ॥
ಏವಂ ಸ್ಥಿತೇಷ್ವೇವ ಪುರಾತನೇಷು ವರಾದ್ರಥಾಂಗತ್ವಮವಾಪ ಕಾಮಃ ।
ತತ್ಪೂನುತಾಮಾಪ ಚ ಸೋಽನಿರುದ್ಧೋ ಬ್ರಹ್ಮೋದ್ಭವಃ ಶಂಖತನುಃ ಪುಮಾತ್ಮಾ
– ಮ.ಭಾ.ತಾ.ನಿ.(೩/೭೩-೭೫)

೨. **ವೈಕುಂಠಃ ಪುರುಷಃ ಪ್ರಾಣಃ ।** – ವಿಷ್ಣುಸಹಸ್ರನಾಮ.

**ರವಿಯಂತೆ ಹೊಳೆವ ಕೌಸ್ತುಭಕು ಕೂಡ ಹೊಸ ಕಾಂತಿ ನೀಡುವಂಥ।**
**ಶ್ರುತಿ ಎಲ್ಲವನ್ನು ಅನವರತ ಉಲಿವ ಶ್ರೀಹರಿಯ ಕಂಠ ನೆನೆವೆ ॥ ೭ ॥**

**ಅನು : ಸಕಲ ವೇದಗಳುನ್ನು ಸದಾ ಉಚ್ಚರಿಸುವ, ರವಿಯಂತೆ ಹೊಳೆಯುವ ಕೌಸ್ತುಭಮಣಿಗೂ ಶೋಭೆ ನೀಡುವ, ವೈಕುಂಠನಾಮಕನಾದ ಶ್ರೀಹರಿಯ ಕಂಠವನ್ನು ಸದಾ ಚಿಂತಿಸಬೇಕು.**

ವಿ: ೧. ತೋಳುಗಳ ವರ್ಣನೆಯ ನಂತರ ಶ್ರೀಹರಿಯ ಕಂಠದ ವರ್ಣನೆ ಈ ಶ್ಲೋಕದಲ್ಲಿ ಬಂದಿದೆ. ಶ್ರೀಹರಿಯ ಕಂಠವು ಕೌಸ್ತುಭ ಮಣಿಯನ್ನು ಧರಿಸಿದೆ. ಸಾಮಾನ್ಯವಾಗಿ ಅಲಂಕಾರಗಳಿಂದ ಅವುಗಳನ್ನು ಧರಿಸಿದ ವ್ಯಕ್ತಿಗಳಿಗೆ ಹೆಚ್ಚಿನ ಶೋಭೆಯುಂಟಾಗುವುದು. ಆಭರಣಗಳನ್ನು ಧರಿಸುವುದು ಅಲಂಕಾರಕ್ಕಾಗಿಯೇ; ಆದರೆ ಶ್ರೀಹರಿಯ ವಿಷಯದಲ್ಲಿ ಹಾಗಲ್ಲ.ಅವನು ಕೌಸ್ತುಭ ಮಣಿಯನ್ನು ಧರಿಸುವುದರಿಂದ ಅದರ ಶೋಭೆ ಹೆಚ್ಚುವುದೇ ಹೊರತು ಅವನ ಶೋಭೆಯಲ್ಲ. ಅವನದು ಸಹಜವಾದ ಕಾಂತಿ ಎಂದು ಭಾವ. ಕೌಸ್ತುಭವು ಲೋಕೋತ್ತರವಾದ ಮಣಿ. ಜಗತ್ತಿನ ಬೇರೆ ಯಾವ ಮಣಿಯು ಅದಕ್ಕೆ ಸಾಟಿ ಎನ್ನಿಸದು. ಬ್ರಹ್ಮದೇವರು ಅದಕ್ಕೆ ಅಭಿಮಾನಿದೇವತೆ[1]. ಇದರಿಂದಾಗಿಯೇ ಅದಕ್ಕೂ ಅದ್ಭುತವಾದ ಶೋಭೆ ನೀಡುವ ಹಿರಿಮೆ ಶ್ರೀಹರಿಯ ಕಂಠದ್ದು ಎಂದು ಭಾವ.

೨. ಶ್ರೀಹರಿಯ ಕಂಠದ ಶೋಭೆ ಅಷ್ಟು ಅಪಾರವಾದರೆ ಆ ಕಂಠದಿಂದ ನಡೆಯುವ ಕಾರ್ಯವೂ ಸಹ ಅಷ್ಟೇ ಅದ್ಭುತ. ಅದರಿಂದ ಪ್ರತಿಕ್ಷಣದಲ್ಲೂ ಅನಂತಸಂಖ್ಯೆಯ ವೇದಗಳು ಉಚ್ಚರಿಸಲ್ಪಡುತ್ತಿರುವುದು. ಇಲ್ಲಿ ವೇದ ಎಂದರೆ ಪಂಚಮವೇದವಾದ ಮಹಾಭಾರತವನ್ನೊಳಗೊಂಡಂತೆ ಸಕಲ ಸಚ್ಛಾಸ್ತ್ರಗಳೆಂದು ತಿಳಿಯಬೇಕು. ಹಾಗೆ ಅನಂತ ಶಾಸ್ತ್ರಗಳನ್ನು ಪ್ರತಿಕ್ಷಣದಲ್ಲಿ ಉಚ್ಚರಿಸುವ ಆ ಕಂಠದ ಹಿರಿಮೆ ಶ್ರೀಹರಿಯ ಅಚಿಂತ್ಯಾದ್ಭುತ ಶಕ್ತಿಯನ್ನು ಸೂಚಿಸುವುದು ಎಂದರ್ಥ. ಹೀಗೆ ಶ್ರೀಹರಿಯು ತನ್ನ[2] ಹಯಗ್ರೀವ ರೂಪದಿಂದ ವೇದಾದಿಶಾಸ್ತ್ರಗಳನ್ನು ಉಚ್ಚರಿಸುವ ವಿವರಣೆ ಬೃಹದಾರಣ್ಯಕೋಪನಿಷತ್ತಿನಲ್ಲಿ ಬಂದಿದೆ. ಆ ಅರ್ಥದಲ್ಲಿ ಇದು ಹಯಗ್ರೀವರೂಪಿ ಶ್ರೀಹರಿಯ ಸ್ತೋತ್ರವೂ ಆಗಿದೆ ಎಂದು ತಿಳಿಯಬೇಕು.

೩. **ಕೌಸ್ತುಭ ಮಣಿ**ಯನ್ನು ಹೇಗೋ ಹಾಗೆ ಅವನು ಧರಿಸಿರುವ ಕಾಂಚಿ, ಪೀತಾಂಬರ, ಚೂಡಾಮಣಿ, ವನಮಾಲೆ, ಕಿರೀಟ, ಆಯುಧಗಳು ಮೊದಲಾದವುಗಳಿಗೆ ಶ್ರೀಹರಿಯು ವಿಶೇಷ ಶೋಭೆಯನ್ನು ನೀಡುವನು. ತಾನು ಮಾತ್ರ ಅವುಗಳಿಂದ ಯಾವ ಶೋಭೆಯನ್ನು ಪಡೆಯನು ಎಂದು ತಿಳಿಯಬೇಕು.

---

೧. ಕೌಸ್ತುಭೋ ಬ್ರಹ್ಮಣೋ ರೂಪಮ್ । - ಭಾಗ.ತಾ.ನಿ.(೩/೧೪/೩೯)

೨. ನಸ್ತೋ ಮುಖಾದಪಿ ನಿರಂತರಮುದ್ಗಿರಂತಂ ವಿದ್ಯಾ ಅಶೇಷತ ಉತಾಬ್ಜಭವೇಶಮುಖ್ಯೈಃ ।
ಸಂಸೇವ್ಯಮಾನಮತಿಭಕ್ತಿಭರಾವನಮ್ರೈರ್ಲಕ್ಷ್ಮ್ಯಾಽಮೃತೇನ ಸತತಂ ಪರಿಷಿಚ್ಯಮಾನಮ್ ॥
- ತಂತ್ರಸಾರಸಂಗ್ರಹ (೪/೫೧)

೪. ಶ್ರೀಹರಿಯು ಪ್ರತಿಕ್ಷಣದಲ್ಲೂ ಹಾಗೆ ಸಕಲವೇದಾದಿಶಾಸ್ತ್ರಗಳನ್ನು ತಿಳಿಸುವನು ಎಂಬುದು ವಿಶೇಷ. ವೇದಗಳು ಅನಂತ; ಮೂಲರಾಮಾಯಣ ಶತಕೋಟಿ ಶ್ಲೋಕಗಳು. ಅದರಂತೆ ಪಂಚರಾತ್ರವೂ ಸಹ. ಮಹಾಭಾರತ ಒಂದುಲಕ್ಷಶ್ಲೋಕದ ಕೃತಿ. ಪುರಾಣಗಳ ಶ್ಲೋಕಸಂಖ್ಯೆ ನಾಲ್ಕು ಲಕ್ಷ. ಇತಿಹಾಸಪುರಾಣಗಳು ಪ್ರತಿಕಲ್ಪದಲ್ಲೂ ಸಹ ಶಬ್ದತಃ ಸ್ವಲ್ಪ ವ್ಯತ್ಯಾಸವಾಗುವುದುಂಟು. ಎಂದರೆ ಅವುಗಳು ಸಹ ಅನಂತ ಎಂದಾಗುವುದು. ಇಂತಹ ಶಾಸ್ತ್ರರಾಶಿಯನ್ನು ಶ್ರೀಹರಿ ಎಡಬಿಡದೆ ಸಂಪೂರ್ಣವಾಗಿ ಉಚ್ಚರಿಸುವನು ಎಂಬ ಮಾತಿನಲ್ಲಿ ಅವನ ಅಪಾರವಾದ ಪರಿಪೂರ್ಣತೆಯು ವ್ಯಕ್ತವಾಗುವುದು.

೫. **ಅಖಿಲಾಃ ವೇದಾ** ಎಂಬ ಮಾತಿನಲ್ಲಿ ಸಕಲವೇದಾದಿಶಾಸ್ತ್ರಗಳು ಸಹ ಯಾವುದೇ ರೀತಿಯಲ್ಲೂ ಸ್ವರ, ವರ್ಣ, ಪದ ಮೊದಲಾದವುಗಳಲ್ಲಿ ಯಾವುದೇ ವ್ಯತ್ಯಾಸವೂ ಇಲ್ಲದೆ, ಅತ್ಯಂತ ಸ್ಫುಟವಾಗಿ, ಪರಿಪೂರ್ಣವಾಗಿ ಉಚ್ಚರಿಸಲ್ಪಡುವವು[೧] ಎಂಬ ವಿಶೇಷಾಂಶವು ಸೂಚಿತ.

೬. **ಉದ್ಗೀರ್ಯಂತೇ** ಎಂಬ ಮಾತಿನಲ್ಲಿ ಶ್ರೀಹರಿಯ ಇಂತಹ ಉಚ್ಚಾರಣೆ ಅತ್ಯಂತ ಅನಾಯಾಸವಾದ ಕಾರ್ಯವಾಗಿದೆ ಎಂಬ ಭಾವವು ಸೂಚಿತ.

೭. **ಅನಿಶಂ** ಎಂದರೆ ಸದಾ, ಸದಾ ಎಂದರೆ ಅನಾದಿಕಾಲದಿಂದ ಅನಂತಕಾಲದವರೆಗೆ ಪ್ರತಿಕ್ಷಣದಲ್ಲೂ ಎಂದರ್ಥ.

**ಸ್ಮರೇತ ಯಾಮಿನೀನಾಥಸಹಸ್ರಾಮಿತಕಾಂತಿಮತ್ ।**
**ಭವತಾಪಾಪನೋದೀಡ್ಯಂ ಶ್ರೀಪತೇರ್ಮುಖಪಂಕಜಮ್ ॥ ೮ ॥**

**ಪ** : ಸ್ಮರೇತ, ಯಾಮಿನೀನಾಥಸಹಸ್ರಾಮಿತಕಾಂತಿಮತ್, ಭವತಾಪಾಪನೋದಿ, ಈಡ್ಯಮ್, ಶ್ರೀಪತೇಃ, ಮುಖಪಂಕಜಮ್ ।

**ಅ** : ಯಾಮಿನೀನಾಥಸಹಸ್ರಾಮಿತಕಾಂತಿಮತ್, ಭವತಾಪಾಪನೋದಿ, ಈಡ್ಯಮ್, ಶ್ರೀಪತೇಃ, ಮುಖಪಂಕಜಮ್, ಸ್ಮರೇತ ।

ಪ್ರ.ಪ. : [೨]**ಯಾಮಿನೀನಾಥಸಹಸ್ರಾಮಿತಕಾಂತಿಮತ್** – ಅನಂತಾನಂತ ಚಂದ್ರರಿಗಿಂತ ಮಿಗಿಲಾದ ಕಾಂತಿಯುಳ್ಳ; [೩]**ಭವತಾಪಾಪನೋದಿ** – ಸಂಸಾರತಾಪವನ್ನು ಪರಿಹರಿಸುವ;

---

೧. ನಿತ್ಯಾ ವೇದಾಃ ಸಮಸ್ತಾಶ್ಚ ಶಾಶ್ವತಾ ವಿಷ್ಣುಬುದ್ಧಿಗಾಃ ।
ಸರ್ಗೇ ಸರ್ಗೇಽಮುನೈವೈತ ಉದ್ಗೀರ್ಯಂತೇ ತಥೈವ ಚ ।
ತತ್ಕ್ರಮೇಣೈವ ತೈರ್ವರ್ಣೈಸ್ತೈಃ ಸ್ವರೈರೇವ ನಾನ್ಯಥಾ ॥ – ವಿಷ್ಣುತತ್ತ್ವವಿನಿರ್ಣಯ

೨. ಅನಂತಚಂದ್ರಾಧಿಕಕಾಂತಿಸನ್ಮುಖಃ – ಮ.ಭಾ.ತಾ.ನಿ. (೧೦/೫೪)

೩. **ಸ್ವಭಕ್ತಸಂತಾಪದುರಿಷ್ಟಹಂತಾ** ವ್ಯಾಸಾವತಾರೋ ಹರಿರೀಶಚಂದ್ರಮಾಃ । –ಮ.ಭಾ.ತಾ.ನಿ. (೩/೧)

**ಈಡ್ಯಮ್** – ಸ್ತುತ್ಯವಾದ; **ಶ್ರೀಪತೇಃ** – ಲಕ್ಷ್ಮೀಪತಿಯಾದ ಶ್ರೀಹರಿಯ; **ಮುಖಪಂಕಜಮ್** – ಮುಖಕಮಲವನ್ನು; **ಸ್ಮರೇತ** – ಸ್ಮರಿಸಬೇಕು.

**ನೂರಾರುಕೋಟಿ ಚಂದ್ರಮರ ಮೀರ್ವ ಚೆಲುಕಾಂತಿ ಮೂರ್ತಿವೆತ್ತ।**
**ಭವಬೇಗೆ ಕಳೆವ ಸುರರೆಲ್ಲ ಮಣಿವ ಹರಿವದನಕಮಲ ನೆನೆವೆ ॥ ೮ ॥**

**ಅನು : ಅನಂತಾನಂತ ಚಂದ್ರರಿಗಿಂತ ಮಿಗಿಲಾದ ಕಾಂತಿಯಿಂದ ಕೂಡಿದ, ಸಂಸಾರತಾಪವನ್ನು ಪರಿಹರಿಸುವ, ಸ್ತುತ್ಯವಾದ, ಲಕ್ಷ್ಮೀಪತಿಯಾದ ಶ್ರೀಹರಿಯ ಮುಖಕಮಲವನ್ನು ಸದಾ ಸ್ಮರಿಸಬೇಕು.**

ವಿ: ೧. ಕಂಠದ ಬಳಿಕ ಮುಖದ ವರ್ಣನೆ ಇಲ್ಲಿದೆ. ಶ್ರೀಹರಿಯ ಮುಖದ ಕಾಂತಿ ಒಬ್ಬ ಚಂದ್ರನ ಕಾಂತಿಯಂತಲ್ಲ. ಸಾಮಾನ್ಯವಾಗಿ ಚಂದ್ರನಂತಹ ಮುಖ ಎಂದು ಹೇಳುವುದು ಕಾವ್ಯದ ರೀತಿ. ಅದೂ ಸಹ ಹೆಚ್ಚು ಸಂದರ್ಭದಲ್ಲಿ ಅತಿಶಯೋಕ್ತಿ ಎನ್ನಿಸುವುದುಂಟು. ಆದರೆ ಶ್ರೀಹರಿಯ ಮುಖ ಹಾಗಲ್ಲ. ಒಂದು ಚಂದ್ರನಿಗೆ ಹೋಲಿಸಿದಾಗಲೂ ಅದರಲ್ಲಿ ಕಪ್ಪು ಕಲೆ ಇರುವುದರಿಂದ ಪೂರ್ಣ ಸುಂದರ ಎನ್ನಲಾಗದು. ಶ್ರೀಹರಿಯ ಮುಖದ ಕಾಂತಿ ಯಾವುದೇ ಕಳಂಕವಿಲ್ಲದ ಅನಂತಚಂದ್ರನಂತಹದು. ಚಂದ್ರನು ಆಹ್ಲಾದಕರ; ಆದ್ದರಿಂದ ಶ್ರೀಹರಿಯ ಮುಖಚಂದ್ರನ ಚಿಂತನೆ ಅಪಾರವಾದ ನಲಿವಿಗೆ ಕಾರಣವಾಗುವುದು ಎಂದರ್ಥ.

೨. ಕಾಂತಿಯಲ್ಲಿ ಇಷ್ಟು ಅದ್ಭುತವಾದ ಶ್ರೀಹರಿಯ ಮುಖವು ಪರಿಣಾಮದಲ್ಲೂ ಅದ್ಭುತ. ಚಂದ್ರನ ಕಾಂತಿ ಎಂದರೆ ಬೆಳದಿಂಗಳು. ಅದು ಶರೀರದ ಬೇಗೆಯನ್ನು ಪರಿಹರಿಸುತ್ತದೆ ಹೊರತು, ಮನಸ್ಸಿನ ಬೇಗೆಯನ್ನಲ್ಲ. ತಾಪತ್ರಯಗಳನ್ನಂತೂ ಅದು ಸರ್ವಥಾ ಪರಿಹರಿಸದು. ಶ್ರೀಹರಿಯ ಮುಖ ಚಂದ್ರನ ಕಾಂತಿಯು ಹಾಗಲ್ಲ; ಅದು ಸಂಸಾರದ ನೋವನ್ನೇ ಪರಿಹರಿಸುವಷ್ಟು ಅದ್ಭುತ.

೩. ಇಲ್ಲಿ **ತಾಪ** ಎಂದರೆ ತಾಪತ್ರಯಗಳು ಎಂದರ್ಥ. ಆಧಿಭೌತಿಕ, ಆಧ್ಯಾತ್ಮಿಕ ಹಾಗೂ ಆಧಿದೈವಿಕ ಎಂಬುದಾಗಿ ತಾಪಗಳು ಮೂರು ಬಗೆ. ಆ ಮೂರೂ ತಾಪಗಳನ್ನು ಪೂರ್ಣವಾಗಿ ಶ್ರೀಹರಿಯ ಮುಖದ ಸಂದರ್ಶನ ಪರಿಹರಿಸುವುದು ಎಂದರ್ಥ. ಆದರೆ ಚಂದ್ರನ ಬೆಳದಿಂಗಳು ಹೊರಗಿನ ತಾಪವನ್ನು ಮಾತ್ರ ಪರಿಹರಿಸುವುದು; ಶ್ರೀಹರಿಯ ಹಿರಿಮೆ ಚಂದ್ರನ ಬೆಳದಿಂಗಳಿಗೆ ಇಲ್ಲ ಎಂದು ಭಾವ.

೪. ಶ್ರೀಹರಿಯ ಮುಖದ ಸಂದರ್ಶನ ಎಂದರೆ ಅಪರೋಕ್ಷಜ್ಞಾನ ಎಂದೇ ಅರ್ಥ. ಅಪರೋಕ್ಷಜ್ಞಾನವಾಗುತ್ತಲೇ ಕರ್ಮಕ್ಷಯವಾಗಿ ಸಂಸಾರವು ಪರಿಹಾರವಾಗಿ ಮುಕ್ತಿ ಲಭಿಸುವುದು ಎಂದರ್ಥ[೧].

---

೧. ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ ।
ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ ॥ – ಆಥರ್ವಣೋಪನಿಷತ್

**ಪೂರ್ಣಾನನ್ಯಸುಖೋದ್ಭಾಸಿ ಮಂದಸ್ಮಿತಮಧೀಶಿತುಃ ।**
**[೧]ಗೋವಿಂದಸ್ಯ ಸದಾ ಚಿಂತ್ಯಂ ನಿತ್ಯಾನಂದಪದಪ್ರದಮ್ ॥ ೯ ॥**

**ಪ :** ಪೂರ್ಣಾನನ್ಯಸುಖೋದ್ಭಾಸಿ, ಮಂದಸ್ಮಿತಮ್, ಅಧೀಶಿತುಃ, ಗೋವಿಂದಸ್ಯ, ಸದಾ, ಚಿಂತ್ಯಮ್, ನಿತ್ಯಾನಂದಪದಪ್ರದಮ್ ।

**ಅ :** ಪೂರ್ಣಾನನ್ಯಸುಖೋದ್ಭಾಸಿ, ನಿತ್ಯಾನಂದಪದಪ್ರದಮ್, ಅಧೀಶಿತುಃ, ಗೋವಿಂದಸ್ಯ, ಮಂದಸ್ಮಿತಮ್, ಸದಾ, ಚಿಂತ್ಯಮ್ ।

ಪ್ರ.ಪ. : **ಪೂರ್ಣಾನನ್ಯಸುಖೋದ್ಭಾಸಿ** – ಪರಿಪೂರ್ಣವೂ, ಅನನ್ಯವೂ ಆದ ಸುಖದಿಂದ ಕಂಗೊಳಿಸುವ; **ನಿತ್ಯಾನಂದಪದಪ್ರದಮ್** – ನಿತ್ಯಾನಂದರೂಪವಾದ ಮೋಕ್ಷಪದವಿಯನ್ನು ನೀಡುವಂತಹ, **ಅಧೀಶಿತುಃ** – ಸರ್ವೇಶ್ವರನಾದ; **ಗೋವಿಂದಸ್ಯ** – ಗೋವಿಂದನಾದ ಶ್ರೀ- ಹರಿಯ; **ಮಂದಸ್ಮಿತಮ್** – ಮಂದಹಾಸವು; ಸದಾ – ಸತತ; **ಚಿಂತ್ಯಮ್**– ಚಿಂತಿಸಲ್ಪಡಬೇಕು.

**ಇನ್ನೆಲ್ಲು ಇರದ ಪರಿಪೂರ್ಣಸುಖದಿ ಮುಖದಿಂದ ಚಿಮ್ಮಿ ಬರುವ ।**
**ಆನಂದವೀವ ಗೋವಿಂದ ಹರಿಯ ವರಮಂದಹಾಸ ನೆನೆವೆ ॥ ೯ ॥**

**ಅನು : ಪರಿಪೂರ್ಣವೂ, ಅನನ್ಯವೂ ಆದ ಸುಖದಿಂದ ಕಂಗೊಳಿಸುವ, ನಿತ್ಯಾನಂದರೂಪವಾದ ಮೋಕ್ಷಪದವಿಯನ್ನು ನೀಡುವ, ಸರ್ವೇಶ್ವರನಾದ, ಗೋವಿಂದ ಶ್ರೀಹರಿಯ ಮಂದಹಾಸವನ್ನು ಸತತ ಚಿಂತಿಸಬೇಕು.**

ವಿ : ೧. ಶ್ರೀಹರಿಯ ಮುಖದಲ್ಲಿ ಶೋಭಿಸುವ ಮಂದಹಾಸದ ವರ್ಣನೆಯು ಇಲ್ಲಿದೆ. ಆದರೆ ಶ್ರೀಹರಿಯ ಮಂದಹಾಸವು ಅವನ ಆನಂದಪೂರ್ಣತೆಗೆ ದ್ಯೋತಕವಾಗಿದ್ದು, ಸದಾ ಚಿಂತನೆಗೆ ಅರ್ಹವಾಗಿದೆ. ಅವನ ಆನಂದ ಅನನ್ಯ, ಅನುಪಮ ಎಂಬುದು ಆ ಕಿರುನಗೆಯಿಂದ ತಿಳಿಯುವುದು ಎಂದರ್ಥ. ಅಂತಹ ಕಿರುನಗೆ ಅವನ ಮುಖದಲ್ಲಿ ಸದಾ ಇರುವುದು ಎಂದರೆ ದುಃಖಾದಿಗಳ ಪ್ರಸಕ್ತಿ ಅವನಿಗೆ ಸರ್ವಥಾ ಇಲ್ಲವೇ ಇಲ್ಲ ಎಂದರ್ಥ.

೨. ಅವನ ಅಂತಹ ಮಂದಹಾಸದ(ಕಿರುನಗೆ) ಚಿಂತನೆ ಎಂದರೆ ಅವನ ಪೂರ್ಣಾನಂದದ ಚಿಂತನೆಯೇ ಅರ್ಥ. ಇಂತಹ ಆನಂದದ ಚಿಂತನೆ ನಿತ್ಯಾನಂದದ ನೆಲೆಯಾದ ಮೋಕ್ಷಕ್ಕೆ ಸಾಧನ ಎಂದರ್ಥ. ಶ್ರೀಹರಿಯಲ್ಲಿ ದೋಷ ಚಿಂತನೆಯು ನಿತ್ಯ ಅನಂದ ಎಂದರೆ ದುಃಖ ನೆಲೆಯಾದ ಅಂಧತಮಸ್ಸಿನ ಪ್ರಾಪ್ತಿಗೆ ಕಾರಣ ಎಂಬ ಅರ್ಥವೂ ಇದರಿಂದ ಸೂಚಿತ.

೩. ಶ್ರೀರಾಮನ ಮುಖವು ಹೀಗೆ ಸದಾ ಮಂದಸ್ಮಿತವಾಗಿದ್ದ ವಿವರ ವಾಲ್ಮೀಕಿ ರಾಮಾಯಣದಲ್ಲಿ ಅನೇಕ ಬಾರಿ ಉಲ್ಲೇಖಿಸಲ್ಪಟ್ಟಿದೆ: **ಸ್ಮಿತಪೂರ್ವಾಭಿಭಾಷೀ, ಸ್ಮಿತಭಾಷೀ;** ಇದು ಅವನು ಶ್ರೀಹರಿಯ ಸಾಕ್ಷಾತ್ ಅವತಾರ ಎಂಬುದಕ್ಕೆ ಅಧಿಸೂಚಕ.

---

೧. ಅನಿರುದ್ಧಃ ಸದಾನಂದೋ **ಗೋವಿಂದಃ**, ಮಹಾವರಾಹೋ **ಗೋವಿಂದಃ**. – ವಿಷ್ಣುಸಹಸ್ರನಾಮ

೪. **ಸದಾ ಮಂದಹಾಸ** ಎಂದರೆ ಅನಾದ್ಯನಂತಕಾಲದಲ್ಲೂ ಶ್ರೀಹರಿಯ ಮುಖ ಮೊದಲಾದ ಸಕಲ ಅವಯವಗಳು ಪೂರ್ಣಾನಂದಭರಿತ. ಅವನು ಸ್ವಾತಂತ್ರ್ಯೇಣ ನಿತ್ಯಮುಕ್ತ ಎಂದು ಭಾವ.

**ಸ್ಮರಾಮಿ ಭವಸಂತಾಪಹಾನಿದಾಮೃತಸಾಗರಮ್ ।**
**[೧]ಪೂರ್ಣಾನಂದಸ್ಯ [೨]ರಾಮಸ್ಯ ಸಾನುರಾಗಾವಲೋಕನಮ್ ॥೧೦॥**

**ಪ:** ಸ್ಮರಾಮಿ, ಭವಸಂತಾಪಹಾನಿದಾಮೃತಸಾಗರಮ್, ಪೂರ್ಣಾನಂದಸ್ಯ, ರಾಮಸ್ಯ, ಸಾನುರಾಗಾವಲೋಕನಮ್ ।

**ಅ :** ಪೂರ್ಣಾನಂದಸ್ಯ, ರಾಮಸ್ಯ, ಭವಸಂತಾಪಹಾನಿದಾಮೃತಸಾಗರಮ್, ಸಾನುರಾಗಾವಲೋಕನಮ್, ಸ್ಮರಾಮಿ ।

**ಪ್ರ.ಪ. : ಪೂರ್ಣಾನಂದಸ್ಯ** – ಪೂರ್ಣಾನಂದನಾದ, **ರಾಮಸ್ಯ** – ಶ್ರೀರಾಮನ, **ಭವಸಂತಾಪಹಾನಿದಾಮೃತಸಾಗರಮ್** – ಸಂಸಾರದ ಅಪಾರವಾದ ನೋವನ್ನು ಪರಿಹರಿಸುವ ಅಮೃತದ ಸಾಗರವಾದ; **ಸಾನುರಾಗಾವಲೋಕನಮ್** – ಅನುರಾಗದಿಂದ ಕೂಡಿದ ನೋಟವನ್ನು; **(ಸದಾ)ಸ್ಮರಾಮಿ** – ಸದಾ ಸ್ಮರಿಸುವೆನು.

**ಈ ಭವದ ಬೇಗೆ ಕಳೆವಲ್ಲಿ ನಿರುತ ಸಿರಿಸುಧೆಯ ಕಡಲೆ ಆದ ।**
**ಚೆಲು ನಲಿವ ಸುರಿವ ಶ್ರೀರಾಮ ಹರಿಯ ನಲ್ನೋಟ ನಿರುತ ನೆನೆವೆ ॥ ೧೦ ॥**

**ಅನು : ಪೂರ್ಣಾನಂದನಾದ ಶ್ರೀರಾಮನ ಸಂಸಾರದ ಅಪಾರವಾದ ನೋವನ್ನು ಪರಿಹರಿಸುವ ಅಮೃತವಾರಿಧಿಯಾದ, ಅನುರಾಗದಿಂದ ಕೂಡಿದ ನೋಟವನ್ನು ಸದಾ ಸ್ಮರಿಸುವೆನು.**

ವಿ : ೧. ಇಲ್ಲಿ ಶ್ರೀರಾಮನ ನೋಟದ ಹಿರಿಮೆ ವರ್ಣಿತವಾಗಿದೆ. ಅವನ ನೋಟವು ಸಹ ಅವನು ಆನಂದಪೂರ್ಣನೆಂಬುದನ್ನು ಸೂಚಿಸುವುದು ಹಾಗೂ ಸಂಸಾರದ ಸಕಲ ವಿಧವಾದ ನೋವನ್ನು ಸಹ ಸ್ಮರಣೆ ಮಾತ್ರದಿಂದಲೇ ಪರಿಹರಿಸಿಬಿಡುವುದು.

೨. ಶ್ರೀರಾಮನ ನೋಟ ಅಮೃತ ಸಾಗರ ಎನ್ನುವ ಮೂಲಕ ಅದರಿಂದ ಪರಿಹರಿಸಲ್ಪಡುವ ಸಂಸಾರವು ವಿಷದ ಸಾಗರ ಎಂಬ ಅರ್ಥ ಸೂಚಿತವಾಗುವುದು[೩]. ಅಂತಹ ಅದ್ಭುತ

---

೧. **ಆನಂದೋ** ನಂದನೋ ನಂದಃ. – ವಿಷ್ಣುಸಹಸ್ರನಾಮ

೨. **ರಾಮೋ** ವಿರಾಮೋ ವಿರಜಃ ... – ವಿಷ್ಣುಸಹಸ್ರನಾಮ

ಆನಂದರೂಪತ್ವಾತ್ ಪೂರ್ಣತ್ವಾತ್ ಲೋಕರಮಣಾಚ್ಚ ರಾಮಃ । – ಗೀತಾಭಾಷ್ಯ (೧೦/೩೧)

೩. ಸಂಸಾರವಿಷಪಾನೇನ ಯೇ ಮೃತಾಃ ಪ್ರಾಣಿನೋ ದಿವಿ ।
ಅಮೃತಾಯ ಸ್ಮೃತಸ್ತೇಷಾಂ ಕೃಷ್ಣಾಮೃತಮಹಾರ್ಣವಃ ॥ – ಕೃಷ್ಣಾಮೃತಮಹಾರ್ಣವ(೨)

ನೋಟದ ಶ್ರೀರಾಮನು ಅಮೃತದ ಮಹಾರ್ಣವನಾಗಿರುವನು ಎಂಬ ಮಾತು ಅವರ ಕೃಷ್ಣಾಮೃತಮಹಾರ್ಣ ಕೃತಿಯನ್ನು ಜ್ಞಾಪಿಸುವುದು. ಸಾಗರದ ಪ್ರತಿ ಹನಿಯೂ ಸಹ ಇಡೀ ಸಾಗರದ ಗುಣವನ್ನು ಹೊಂದಿರುವಂತೆ ಶ್ರೀರಾಮನ ಸಂಪೂರ್ಣ ಆಕೃತಿಯ ಪ್ರತಿಯೊಂದು ಅಂಶವೂ ಸಹ ಆನಂದಪೂರ್ಣ ಎಂಬುದನ್ನು ತಿಳಿಸುವುದು.

೩. ಶ್ರೀರಾಮನ ನೋಟವನ್ನು ನಾನು ಸದಾ ನೆನೆಸಿಕೊಳ್ಳುವೆ ಎನ್ನುವ ಮೂಲಕ ಶ್ರೀಮದಾಚಾರ್ಯರು ತಾವು ಹನುಮದ್ರೂಪದಿಂದ ಶ್ರೀರಾಮನನ್ನು ಸಂದರ್ಶಿಸಿದ ವಿಷಯವನ್ನು ಶಿಷ್ಯ ವರ್ಗಕ್ಕೆ ಸೂಚಿಸಿರುವರು ಎಂದು ತಿಳಿಯಬಹುದು. ಅದರಂತೆ ಭೀಮರೂಪದಿಂದ ಶ್ರೀಕೃಷ್ಣನ ನೋಟವನ್ನು ಕಂಡ ವಿವರವನ್ನೂ ಸಹ.

೪. ಇದರ ಪ್ರಾರಂಭಶ್ಲೋಕದಲ್ಲಿ **ವಾಸುದೇವಂ** ಎಂಬುದಾಗಿ ಶ್ರೀಕೃಷ್ಣನ ಸ್ಮರಣೆ ಬಂದಿದೆ. **ಶ್ರೀರಾಮಸ್ಯ** ಎಂಬುದಾಗಿ ರಾಮರೂಪದ ಉಲ್ಲೇಖವಿದೆ. ಇದರಿಂದ ಶ್ರೀಕೃಷ್ಣನಂತೆ ಶ್ರೀಹರಿಯ ಶ್ರೀರಾಮರೂಪವೂ ಸಹ ವಾಸುದೇವರೂಪವೇ ಆಗಿದೆ ಎಂಬ ವಿಶೇಷಾಂಶ ಸೂಚಿತ[೧].

೫. ಅಥವಾ **ರಾಮಸ್ಯ** ಎಂಬುದನ್ನು ಶ್ರೀಕೃಷ್ಣನಿಗೆ ವಿಶೇಷಣವನ್ನಾಗಿ ಮಾಡಿಕೊಂಡಾಗ, ಸದಾ ಕ್ರೀಡಾದಿಗುಣವಿಶಿಷ್ಟನಾದ ಎಂದು ಅರ್ಥವಾಗುವುದು. ಈ ವಿವರ ಶ್ರೀಹರಿಯ ಶ್ರೀರಾಮ ಹಾಗೂ ಶ್ರೀಕೃಷ್ಣರೂಪಗಳಿಗೆ ಮಾತ್ರವಲ್ಲದೆ, ಅವನ ಸಕಲ ಅವತಾರಗಳಿಗೂ ಸಹ ಅನ್ವಯಿಸುವುದು ಎಂಬ ವಿಶೇಷಾಂಶವನ್ನು ತಿಳಿಯಬೇಕು. ಶ್ರೀಹರಿಯ ಸಕಲರೂಪಗಳನ್ನು ಹಾಗೆ ನೋಡುವ ವಿಶೇಷವಾದ ಹಿರಿಮೆ ಶ್ರೀಮದಾಚಾರ್ಯರದು ಎಂಬುದು ಮತ್ತೊಂದು ವಿಶೇಷಾಂಶ: ಏವಂ **ಪ್ರಲಯಕಾಲೇಽಪಿ ಪ್ರತಿಭಾತಪರಾವರಃ**.

**ಧ್ಯಾಯೇದಜಸ್ರಮೀಶಸ್ಯ ಪದ್ಮಜಾದಿಪ್ರತೀಕ್ಷಿತಮ್ ।**
**ಭ್ರೂಭಂಗಂ ಪಾರಮೇಷ್ಠ್ಯಾದಿಪದದಾಯಿ ವಿಮುಕ್ತಿದಮ್ ॥೧೧॥**

**ಪ :** ಧ್ಯಾಯೇತ್, ಅಜಸ್ರಮ್, ಈಶಸ್ಯ, ಪದ್ಮಜಾದಿಪ್ರತೀಕ್ಷಿತಮ್, ಭ್ರೂಭಂಗಮ್, ಪಾರಮೇಷ್ಠ್ಯಾದಿಪದದಾಯಿ, ವಿಮುಕ್ತಿದಮ್ ।

**ಅ :** ಪದ್ಮಜಾದಿಪ್ರತೀಕ್ಷಿತಮ್, ಪಾರಮೇಷ್ಠ್ಯಾದಿಪದದಾಯಿ, ವಿಮುಕ್ತಿದಮ್, ಈಶಸ್ಯ, ಭ್ರೂಭಂಗಮ್, ಅಜಸ್ರಮ್, ಧ್ಯಾಯೇತ್ ।

ಪ್ರ.ಪ.: **ಪದ್ಮಜಾದಿಪ್ರತೀಕ್ಷಿತಮ್** – ಬ್ರಹ್ಮಾದಿದೇವತೆಗಳಿಂದ ಸದಾ ಪ್ರತೀಕ್ಷಿಸಲ್ಪಡುವ; **ಪಾರಮೇಷ್ಠ್ಯಾದಿಪದದಾಯಿ** – ಬ್ರಹ್ಮಾದಿ ಪದವಿಗಳನ್ನು ನೀಡುವಂತಹ; **ವಿಮುಕ್ತಿದಮ್** – ವಿಶೇಷ ಮುಕ್ತಿಯನ್ನು ಕೊಡುವ; **ಈಶಸ್ಯ** – ಸರ್ವೇಶನಾದ ಶ್ರೀಹರಿಯ; **ಭ್ರೂಭಂಗಮ್** – ಭ್ರೂವಿಲಾಸವನ್ನು **ಅಜಸ್ರಮ್** – ಯಾವಾಗಲೂ; **ಧ್ಯಾಯೇತ್** – ಧ್ಯಾನಿಸಬೇಕು.

---

೧. ಅಂಶೇನ **ವಾಸುದೇವಸ್ಯ** ಜಾತೋ ರಾಮೋ ಮಹಾಯಶಾಃ । – ವಿಷ್ಣುಧರ್ಮೋತ್ತರಪುರಾಣ

**ಬ್ರಹ್ಮಾದಿಸುರರು ನಿರುತದಲಿ ಭಜಿಪ ನಿಜಮುಕ್ತಿ ಈವ ಹರಿಯ ।**
**ಬ್ರಹ್ಮಾದಿಪದವಿ ತಡೆ ಇರದೆ ಕೊಡುವ ಸಿರಿಹುಬ್ಬುಕುಣಿತ ನೆನೆವೆ ॥ ೧೧ ॥**

**ಅನು : ಬ್ರಹ್ಮಾದಿದೇವತೆಗಳು ಸದಾ ಪ್ರತೀಕ್ಷಿಸುವ, ಬ್ರಹ್ಮಾದಿ ಪದವಿಗಳನ್ನು ನೀಡುವ, ವಿಶೇಷ ಮುಕ್ತಿಯನ್ನು ಕೊಡುವ, ಸರ್ವೇಶನಾದ ಶ್ರೀಹರಿಯ ಭ್ರೂವಿಲಾಸವನ್ನು ಯಾವಾಗಲೂ ಧ್ಯಾನಿಸಬೇಕು.**

ವಿ : ೧. ಶ್ರೀಹರಿಯ ಭ್ರೂವಿಲಾಸದ ವರ್ಣನೆ ಇದರಲ್ಲಿದೆ. ಭ್ರೂವಿಲಾಸ ಎಂದರೆ ಹುಬ್ಬಿನ ಕುಣಿತ ಎಂದರ್ಥ. ಶ್ರೀಹರಿಯ ಭ್ರೂವಿಲಾಸ ಸಾಮರ್ಥ್ಯ ಅಪಾರವಾದುದು. ಅಷ್ಟು ಮಾತ್ರದಿಂದ ಅವನು ಬ್ರಹ್ಮಾದಿ ಪದವಿಗಳನ್ನು ನೀಡುವ ಮಹಾ ಸಮರ್ಥ. ತೆರತೆರನಾದ ಮುಕ್ತಿ ಯೋಗ್ಯರಿಗೆ ಅವರವರ ಅರ್ಹತೆಗೆ ಅನುಗುಣವಾಗಿ ಬಗೆಬಗೆಯ ಮುಕ್ತಿಯನ್ನು ಲೀಲಾಜಾಲವಾಗಿ ಕರುಣಿಸುವನು ಎಂದರ್ಥ.

೨. **ಅಜಸ್ರಂ** ಎಂದರೆ ಯಾವಾಗಲೂ ಎಂದರ್ಥ. ಶ್ರೀಹರಿಯು ಇಂತಹ ಅಪೂರ್ವ ಪದವಿಯನ್ನು ಕರುಣಿಸುವುದು ಸಂತತ ಚಿಂತನೆಯಿಂದ ಎಂದರ್ಥ. **ಸಂತತ ಚಿಂತನೆ** ಎಂಬುದಕ್ಕೆ ನಿರಂತರ ಪಾಠ ಪ್ರವಚನ ಹಾಗೂ ಧ್ಯಾನರೂಪವಾದ ಉಪಾಸನೆ ಎಂದರ್ಥ.

೩. ಇಲ್ಲಿ [೧]**ಪದ್ಮಜಾ** ಎಂಬುದಕ್ಕೆ ಮಹಾಲಕ್ಷ್ಮೀ ಎಂದು ಅರ್ಥವಾಗುವುದು. ಆದರಿಂದ ರಮಾಬ್ರಹ್ಮಾದಿಗಳು ಸದಾ ಪ್ರತೀಕ್ಷಿಸುವ ಹಿರಿಮೆ ಶ್ರೀಹರಿಯ ಭ್ರೂವಿಲಾಸದ್ದು ಎಂದು ಭಾವ. ಮಹಾಲಕ್ಷ್ಮೀ ನಿತ್ಯಮುಕ್ತಳಾದ್ದರಿಂದ, ಅವರಿಗೆ ನಿತ್ಯಾನಂದಪ್ರದ ಎಂದಷ್ಟೇ ತಿಳಿಯಬೇಕು.

೪. ಇಲ್ಲಿ **ಮುಕ್ತಿ** ಎಂದರೆ ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಹಾಗೂ ಸಾಯುಜ್ಯ ಎಂದು ನಾಲ್ಕು ಬಗೆಯ ಮುಕ್ತಿ ಎಂದರ್ಥ. ಬ್ರಹ್ಮ ಪದವಿಯ ಉಲ್ಲೇಖದಿಂದ ಸಾರ್ಷ್ಟಿ ಎಂಬ ಮುಕ್ತಿಯನ್ನು ತಿಳಿಯಬಹುದು. ಸಾರ್ಷ್ಟಿ ಎಂದರೆ ಸರ್ವಾಂಗ ಸಾಯುಜ್ಯ ಎಂದರ್ಥ.

೫. **'ಪದ್ಮಜಾದಿಪ್ರತೀಕ್ಷಿತಮ್'** ಎಂಬುದಕ್ಕೆ ರಮಾಬ್ರಹ್ಮಾದಿಗಳಿಂದ [೨]ಪೂಜಿತವಾದ ಎಂದೂ ಅರ್ಥವಾಗುವುದು.

**ಸಂತತಂ ಚಿಂತಯೇಽನಂತಮಂತಕಾಲೇ ವಿಶೇಷತಃ ।**
**ನೈವೋದಾಪುರ್ಗೃಣಂತೋಽಂತಂ ಯದ್ಗುಣಾನಾಮಜಾದಯಃ ॥೧೨॥**

॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ದ್ವಾದಶಸ್ತೋತ್ರೇ ಪ್ರಥಮೋಽಧ್ಯಾಯಃ ॥

ಪ : ಸಂತತಮ್, ಚಿಂತಯೇ, ಅನಂತಮ್, ಅಂತಕಾಲೇ, ವಿಶೇಷತಃ, ನ, ಏವ, ಉದಾಪುಃ, ಗೃಣಂತಃ, ಅಂತಮ್, ಯದ್ಗುಣಾನಾಮ್, ಅಜಾದಯಃ ।

---

೧. ಶ್ರೀಃ ಪದ್ಮಾ ಪ್ರಕೃತಿರ್ಮಾಯಾ ಶಾಂತಿಶ್ಚಿಚ್ಛಕ್ತಿರವ್ಯಯಾ । – ಲಕ್ಷ್ಮೀಸಹಸ್ರನಾಮಸ್ತೋತ್ರ

೨. 'ಪೂಜ್ಯಃ ಪ್ರತೀಕ್ಷ್ಯಃ' – ಅಮರಕೋಶ

'ಪ್ರತೀಕ್ಷ್ಯಃ ಪರಿಪಾಲ್ಯೇ ಸ್ಯಾತ್ ಪೂಜ್ಯೇ ಚ' – ಹೈಮಕೋಶ

**ಅ :** ಯದ್ಗುಣಾನಾಮ್, ಅಂತಮ್, ಸಂತತಮ್, ಗೃಣಂತಃ, ಅಪಿ, ಅಜಾದಯಃ, ನ, ಏವ, ಉದಾಪುಃ, ತಮ್, ಅನಂತಮ್, ಸಂತತಮ್, ಅಂತಕಾಲೇ, ವಿಶೇಷತಃ, ಚಿಂತಯೇ।

**ಪ್ರ.ಪ. : ಯದ್ಗುಣಾನಾಮ್** – ಯಾರ ಗುಣಗಳ; **ಅಂತಮ್** – ಕೊನೆಯನ್ನು; (**ಸಂತತಮ್** – ಸದಾ;) **ಗೃಣಂತಃ** – ಸ್ತುತಿಸುತ್ತಿದ್ದರೂ; **ಅಪಿ** – ಸಹ; **ಅಜಾದಯಃ** – ರಮಾಬ್ರಹ್ಮಾದಿಗಳು, ನ, ಏವ, **ಉದಾಪುಃ** – ಸರ್ವಥಾ ಕಂಡಿಲ್ಲವೋ; **ತಮ್** – ಆ, **ಅನಂತಮ್** – ಅನಂತನನ್ನು **ಸಂತತಮ್** – ಸದಾ; **ಚಿಂತಯೇ** – ಚಿಂತಿಸುವೆನು; **ಅಂತಕಾಲೇ** – ಅಂತ್ಯಕಾಲದಲ್ಲಿ; **ವಿಶೇಷತಃ** – ಇನ್ನೂ ವಿಶೇಷವಾಗಿ; **ಚಿಂತಯೇ** – ಚಿಂತಿಸುವೆನು.

**ಅನವರತ ನೆನೆವೆ ಕೊನೆಯಿರದ ಹರಿಯ ಮಿತಿಯಿರದೆ ಬಾಳ ಕೊನೆಗೆ।**
**ಅನುಗಾಲ ನುತಿಸಿ ಬ್ರಹ್ಮಾದಿಸುರರು ಕಂಡಿರದ ಗುಣದ ಕೊನೆಯ ॥ ೧೨ ॥**

**॥ ದ್ವಾದಶಸ್ತೋತ್ರದ ಕನ್ನಡಪದ್ಯಾನುವಾದದಲ್ಲಿ ಮೊದಲನೆಯ ಅಧ್ಯಾಯ ಮುಕ್ತಾಯವಾಯಿತು ॥**

**ಅನು : ಸತತ ಕೊಂಡಾಡುತ್ತಿದ್ದರೂ, ಯಾರ ಗುಣಗಳ ಕೊನೆಯನ್ನು ರಮಾಬ್ರಹ್ಮಾದಿಗಳು ಸಹ ಸರ್ವಥಾ ಕಂಡಿಲ್ಲವೋ, ಆ ಅನಂತನಾದ ಶ್ರೀಹರಿಯನ್ನು ಸದಾ ಚಿಂತಿಸುವೆನು; ಅಂತ್ಯಕಾಲದಲ್ಲಿ ಇನ್ನೂ ವಿಶೇಷವಾಗಿ ಚಿಂತಿಸುವೆನು.**

ವಿ : ೧. ಶ್ರೀಹರಿಯನ್ನು ಸತತ ಚಿಂತಿಸಬೇಕು; ಅನಂತ ಎಂಬುದಾಗಿ ಚಿಂತಿಸಬೇಕು; [೧]**ಅನಂತ** ಎಂದರೆ ದೇಶತಃ ಕಾಲತಃ ಹಾಗೂ ಗುಣತಃ ಪರಿಮಿತಿ ಇಲ್ಲದವನು ಎಂದರ್ಥ. ಅಂತಹ ಶ್ರೀಹರಿಯ ಚಿಂತನೆ ಅಂತ್ಯಕಾಲದಲ್ಲಿ ವಿಶೇಷವಾಗಿ ನೆನೆಯಬೇಕು. ಸಂತತ ಚಿಂತನೆಯಿಂದ ಅಂತ್ಯಕಾಲದ ಚಿಂತನೆ ಸಾಧ್ಯವಾಗುವುದು ಎಂದು ಭಾವ.

೨. ಶ್ರೀಹರಿಯ ಗುಣ ಪರಿಮಿತವಾಗಿದ್ದಲ್ಲಿ ಪರಿಮಿತ ಚಿಂತನೆ ಸಾಕೆನ್ನಿಸುತ್ತಿತ್ತು. ಅವನು ಅನಂತನಾಗಿದ್ದರಿಂದ ಸಂತತ ಚಿಂತನೆಯನ್ನು ಮಾಡಬೇಕು ಎಂದರ್ಥ; ಅದರಂತೆ ಶ್ರೀಹರಿಯು ಮಾಡುವ ಉಪಕಾರವು ಸಹ ಪರಿಮಿತವಾಗಿರದೆ, ಅನಂತವಾಗಿದೆ. ಆದ್ದರಿಂದ ಅವನ ಸಂತತ ಚಿಂತನೆ ಅತ್ಯಂತ ವಿಹಿತ ಎಂಬ ಸೂಚನೆಯೂ ಇದರಲ್ಲಿದೆ.

೩. ಅವನ ಚಿಂತನೆ ಮಾನವರಿಗೆ ಮಾತ್ರವಲ್ಲದೆ, ರಮಾಬ್ರಹ್ಮಾದಿ ಸಮಸ್ತದೇವತೆಗಳಿಗೂ ಮುಖ್ಯಕರ್ತವ್ಯ. ಅವನು ಸರ್ವಥಾ ಅನಂತನಾಗಿರುವುದೇ ಅದಕ್ಕೆ ಕಾರಣ. ಆದರೆ, [೨]ರಮಾಬ್ರಹ್ಮಾದಿ ಸಮಸ್ತ ದೇವತೆಗಳು ಒಟ್ಟಾಗಿ ಸದಾಕಾಲ ಚಿಂತಿಸುತ್ತಿದ್ದರೂ ಸಹ ಶ್ರೀಹರಿಯ ಒಂದು ಗುಣದ ಚಿಂತನೆಯನ್ನು ಸಹ ಅವರು ಪೂರೈಸಲಾರರು.

---

೧. 'ಮಹದ್ಗುಣತ್ವಾದ್ ಯಮನಂತಮಾಹುಃ' – ಭಾಗವತ (೧/೧೮/೧೯)

೨. ಏತೈಃ ಸುರಾದಿಭಿರತಿಪ್ರತಿಭಾದಿಯುಕ್ತೈರ್ಯುಕ್ತೈಃ ಸಹೈವ ಸತತಂ ಪ್ರವಿಚಿಂತಯದ್ಭಿಃ।
ಪೂರ್ತೇರಚಿಂತ್ಯಮಹಿಮಃ ಪರಮಃ ಪರಾತ್ಮಾ ನಾರಾಯಣೋಽಸ್ಯ ಗುಣವಿಸ್ಮೃತಿರನ್ಯಗಾ ಕ್ವ ॥
– ಮ.ಭಾ.ತಾ.ನಿ. (೧/೨೦)

೪. ಅನಂತನಾದ ಹಾಗೂ ಸ್ವಾಮಿಯಾದ ಶ್ರೀಹರಿಯನ್ನು ಸಂತತ ಚಿಂತಿಸು ಎಂಬುದಾಗಿ ಇದು ಶ್ರೀಮದಾಚಾರ್ಯರು ತಮ್ಮ ಶಿಷ್ಯವರ್ಗಕ್ಕೆ ನೀಡಿದ ಸಂದೇಶವೂ ಆಗಿದೆ ಎಂಬುದು ವಿಶೇಷ. ಅದರಂತೆ ಅಂತ್ಯಕಾಲದಲ್ಲಿ ವಿಶೇಷಚಿಂತನೆ ಸರ್ವರ ಕರ್ತವ್ಯ ಎಂಬ ಭಾವವೂ ಸಹ.

೫. ಶ್ರೀಹರಿಯನ್ನು **ಸಂತತ** ಎಂಬುದಾಗಿಯೂ, ಅನಂತ ಎಂಬುದಾಗಿಯೂ ಚಿಂತಿಸಬೇಕು ಎಂದು ಇದನ್ನು ಅರ್ಥಮಾಡಿಕೊಳ್ಳಬಹುದು. **ಅಂತ್ಯಕಾಲ** ಎಂದರೆ ಪ್ರಾಣೋತ್ಕ್ರಮಣಕಾಲ ಎಂಬ ವಿವರ ಭಗವದ್ಗೀತೆಯಲ್ಲಿದೆ: **ಸ್ಥಿತ್ವಾಽಸ್ಯಾಮಂತಕಾಲೇಽಪಿ** (ಗೀತಾ. ೨/೭೨); **ಅಂತಕಾಲೇಽಪಿ ಮಾಮೇವ** (ಗೀತಾ. ೮/೫).

೬. ಶ್ರೀಹರಿಯು ಅನಂತ ಎಂದರೆ, **ಅನಂ ತನೋತಿ**; ಮುಖ್ಯಪ್ರಾಣನನ್ನು ಸಹ ಸೃಷ್ಟಿಸುವವನು ಎಂದೂ ಅರ್ಥ: **ಪ್ರಾಣಾದ್ವಾಯುರಜಾಯತ** (ಪುರುಷಸೂಕ್ತ).

೭. ವಿದ್ಯಾರ್ಥಿಯು ಸದಾ ಅಧ್ಯಯನಶೀಲನಾಗಿರಬೇಕು ಹಾಗೂ ಪರೀಕ್ಷಾಸಮಯದಲ್ಲಿ ಪೂರ್ಣವಾಗಿ ಗಮನವನ್ನು ಕೇಂದ್ರೀಕರಿಸಬೇಕು ಎಂಬುದು ಎಲ್ಲರಿಗೂ ತಿಳಿದಿರುವ ಸಂಗತಿ. ಅದರಂತೆ ಮುಕ್ತಿಯನ್ನು ಬಯಸುವ ಸುಜೀವಿಗಳು ಸದಾಕಾಲ ಶ್ರೀಹರಿಯನ್ನು ಚಿಂತಿಸುತ್ತಿರಬೇಕು. ಅಂತ್ಯಕಾಲದಲ್ಲಿ ಇನ್ನೂ ಹೆಚ್ಚಾಗಿ ಚಿಂತಿಸಬೇಕು. ದೇಹಬಿಡುವ ಸಮಯದಲ್ಲಂತೂ ಅತ್ಯಂತ ಹೆಚ್ಚಾಗಿ ಚಿಂತಿಸಬೇಕು ಎಂದು ಭಾವ.

೮. ಶ್ರೀಹರಿಯ ಗುಣಗಳು ಅನಂತವಾದ್ದರಿಂದಲೇ ಅನಂತಕಾಲದ ಚಿಂತನೆ ಕರ್ತವ್ಯ ಎಂಬ ವಿಶೇಷಾಂಶವೂ ಇದರಲ್ಲಿದೆ. ಅಂತ್ಯಕಾಲದಲ್ಲಿ ಅನಂತನಾದವನ ಚಿಂತನೆಯಿಂದ, ಅನಂತಸುಖದ ನೆಲೆಯಾದ ಮುಕ್ತಿಯು ಲಭಿಸುವುದು ಎಂದು ಭಾವ. ಇಲ್ಲಿ ಸಂತತಂ ಎಂಬುದಕ್ಕೆ ಗೀತಾ, ಹರಿಕಥಾಮೃತಸಾರ ಮೊದಲಾದ ಕೃತಿಗಳಲ್ಲಿ ನಿರೂಪಿತವಾಗಿರುವಂತೆ, [೧]ಮಕ್ಕಳಾಡಿಸುವಾಗ ಮೊದಲಾಗಿ ಪ್ರತಿಕೆಲಸದ ಸಂದರ್ಭದಲ್ಲೂ, ಪ್ರತೀ ಅವಸ್ಥೆಯ ಸಂದರ್ಭದಲ್ಲೂ, ಏಳುವಾಗ, ಮಲಗುವಾಗಲೂ ಸಹ ಶ್ರೀಹರಿಯ ಚಿಂತನೆ ಭಕ್ತರ ಮುಖ್ಯಕರ್ತವ್ಯ ಎಂದು ಭಾವ:

**ನೈವ ಕಿಂಚಿತ್ ಕರೋಮೀತಿ ಯುಕ್ತೋ ಮನ್ಯೇತ ತತ್ತ್ವವಿತ್ ।**
**ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್ನಶ್ನನ್ ಗಚ್ಛನ್ ಸ್ವಪನ್ ಶ್ವಸನ್ ॥**

---

೧. ಮಕ್ಕಳಾಡಿಸುವಾಗ ಮಡದಿಯೊಳಕ್ಕರದಿ ನಲಿವಾಗ ಹಯಪ-
ಲ್ಲಕ್ಕಿ ಗಜ ಮೊದಲಾದ ವಾಹನವೇರಿ ಮೆರೆವಾಗ ।
ಬಿಕ್ಕುವಾಗಾಕಳಿಸುತಲಿ ದೇವಕ್ಕಿ ತನಯನ ಸ್ಮರಿಸುತಿಹ ನರ
ಸಿಕ್ಕ ಯಮದೂತರಿಗೆ ಆವಾವಲ್ಲಿ ನೋಡಿದರು ॥
ಮಲಗುವಾಗಲಿ ಏಳುವಾಗಲಿ ಕುಳಿತು ಮಾತಾಡುತಲಿ ಮನೆಯೊಳು
ಕೆಲಸಗಳ ಮಾಡುತಲಿ ಮೈದೊಳೆವಾಗ ಮೆಲುವಾಗ ।
ಕಲುಷದೂರನ ಸಕಲಠಾವಿಲಿ ತಿಳಿಯೆ ತತ್ತನ್ನಾಮರೂಪವ
ಒಳಿಯಲಿಪ್ಪನು ಒಂದರಕ್ಷಣ ಬಿಟ್ಟಗಲನವರ ॥ – ಹರಿಕಥಾಮೃತಸಾರ(೧೩/೧,೩)

**ಪ್ರಲಪನ್ ವಿಸೃಜನ್ ಗೃಹ್ಣನ್ನುನ್ಮಿಷನ್ ನಿಮಿಷನ್ನಪಿ।**
**ಇಂದ್ರಿಯಾಣೀಂದ್ರಿಯಾರ್ಥೇಷು ವರ್ತಂತ ಇತಿ ಧಾರಯನ್ ॥**

**- ಗೀತಾ (೫/೮,೯)**

೯. **ವಿಶೇಷತಃ** ಎಂಬುದಕ್ಕೆ ವಿ ಎಂದರೆ ಗರುಡ, **ಶೇಷ** ಎಂದರೆ ಆದಿಶೇಷ, **ವಿಶೇಷತಃ** ಎಂಬುದಕ್ಕೆ ಗರುಡ ಮಾರ್ಗ ಹಾಗೂ ಶೇಷಮಾರ್ಗದಿಂದ ಶ್ರೀಹರಿಯು ಗಮ್ಯ ಎಂಬ ಅರ್ಥವೂ ವಿಹಿತ.

೧೦. **ಅವಿಶೇಷತಃ** ಎಂಬುದಾಗಿಯೂ ಇದನ್ನು ವಿಭಾಗ ಮಾಡಿ ಅರ್ಥಮಾಡಿಕೊಳ್ಳಬಹುದು. ಆದರಿಂದ ಶ್ರೀಮದಾಚಾರ್ಯರು ತಾವು ಸದಾಕಾಲವು ಹೇಗೋ ಹಾಗೆ, ಅಂತ್ಯಕಾಲದಲ್ಲೂ ಸಹ ಯಾವುದೇ ವ್ಯತ್ಯಾಸವಿಲ್ಲದೆ, ಕೇವಲ ನಿಷ್ಕಾಮನೆಯಿಂದಲೇ ಶ್ರೀಹರಿಯನ್ನೇ ವಿಶೇಷವಾಗಿ ಸ್ಮರಿಸುವ ಮಹನೀಯರು ಎಂಬ ವಿಶೇಷಾರ್ಥ ತಿಳಿಯುವುದು: ತಸ್ಮೌ ಭೀಮೋ ಹರಿಂ ಧ್ಯಾಯನ್ '**ಸ್ವಭಾವಾನ್ನತದಿಚ್ಛಯಾ**' (ಮ.ಭಾ.ತಾ.ನಿ. ೨೨/೩೭೮).

೧೧. **ಅವಿಶೇಷತಃ** ಎಂಬುದಕ್ಕೆ ಯಾವುದೇ ಫಲಾಪೇಕ್ಷೆಯಿಲ್ಲದೆ, ಸದಾ **ಸುವಿಶೇಷತಃ** ಎಂಬ ಹೆಚ್ಚಿನ ವಿಶೇಷದಿಂದಲೇ ಋಜುಗಳು ಶ್ರೀಹರಿಯ ಧ್ಯಾನವನ್ನು ಮಾಡುವರು ಎಂಬ ಅರ್ಥವನ್ನೂ ಇದಕ್ಕೆ ತಿಳಿಯಬಹುದು: **ವಿಕೃಷ್ಯಮಾಣೇ ವಸನೇ ತು ಕೃಷ್ಣಾ ಸಸ್ಮಾರ ಕೃಷ್ಣಂ ಸುವಿಶೇಷತೋಽಪಿ** (ಮ.ಭಾ.ತಾ.ನಿ. ೨೧/೩೬೪).

೧೧. ಶ್ರೀಮದಾಚಾರ್ಯರು **ಅಂತಕಾಲೇ ಅನಂತಂ ವಿಶೇಷತಃ ಚಿಂತಯೇ** ಎನ್ನುವ ಮೂಲಕ ಮತ್ತೊಂದು ವಿಶೇಷಾಂಶವನ್ನು ಸೂಚಿಸಿರುವರು. ಇಲ್ಲಿ ಅನಂತಂ ಎಂಬುದಕ್ಕೆ ಅನಂತಾಸನ ಎಂದು ಅರ್ಥವಾಗುವುದು. ಆದರಂತೆ ತಾವು ಅದೃಶ್ಯರಾಗುವುದು ಅನಂತಾಸನದಲ್ಲಿ ಶ್ರೀಹರಿಯನ್ನು ಚಿಂತಿಸುತ್ತಲೇ ಎಂಬ ವಿಶೇಷಾರ್ಥ ಸೂಚಿತ. ಇಂದಿಗೂ ಅನಂತಾಸನದೇವಸ್ಥಾನದಲ್ಲಿ ಶ್ರೀಮದಾಚಾರ್ಯರು ಅದೃಶ್ಯವಾದ ಸ್ಥಳವನ್ನು ಕಾಣಬಹುದು.

೧೨. ಶಿಷ್ಯರಿಗೆ ಉಪದೇಶ ಮಾಡುವಾಗ ಇನಂ **ಅನಂತಂ ಸಂತತಂ ಚಿಂತಯ ಅಂತಕಾಲೇ ವಿಶೇಷತಃ** ಎಂದು ಅನ್ವಯ; ತಮ್ಮ ಉಪಾಸನೆಯ ಬಗ್ಗೆ ತಿಳಿಸುವಾಗ ಇನಂ **ಅನಂತಂ ಸಂತತಂ ಚಿಂತಯೇ ಅಂತಕಾಲೇ ವಿಶೇಷತಃ ಚಿಂತಯೇ**. ಇಲ್ಲಿ ವಿಶೇಷತಃ ಎಂಬುದಕ್ಕೆ ಪರಮೋತ್ಸಾಹದಿಂದ ಎಂದು ಭಾವ. ಋಜುಗಳಿಗೆ ಸಾಧನೆಯ ಅಗತ್ಯವಿರುವುದು ಅಷ್ಟಕ್ಕೆ ಮಾತ್ರ ಎಂಬ ವಿಶೇಷಾಂಶ ಅನುವ್ಯಾಖ್ಯಾನದಲ್ಲಿದೆ: **ಋಜೂನಾಮೇಕಮೇವಾಸ್ತಿ ಪರಮೋತ್ಸಾಹವರ್ಜನಮ್**. ಆದರಂತೆ ಅದಕ್ಕನುಗುಣವಾಗಿ ಮಧ್ವವಿಜಯದಲ್ಲಿ **ವಿಶಿಶೇಷ ಶೇಷಶಯನಃ** (೮/೫) ಎಂದು ಬಂದಿರುವುದು ಗಮನಾರ್ಹ.

*****

**ವಿ.ಸೂ.:** ೧. ಇದರಲ್ಲಿ ಶ್ರೀಹರಿಯ ಆಪಾದಮೌಲಿಪರ್ಯಂತ ವರ್ಣನೆ ಬಂದಿದ್ದು, ಶ್ರೀಮದ್ಭಾಗವತ ಹತ್ತನೆಯ ಸ್ಕಂಧದಲ್ಲಿ ಬಂದಿರುವ ಭಗವದ್ಧ್ಯಾನದ ಸಾರಸರ್ವಸ್ವವಾಗಿದೆ.

೨. ಇಲ್ಲಿಯ ವರ್ಣನೆ ಶ್ರೀಹರಿಯ ಸಕಲರೂಪಗಳಿಗೂ ಸಹ ಅನ್ವಯಿಸುವಂತಹ ವಿಶೇಷವರ್ಣನೆಯಾಗಿದೆ.

೩. ಇದು ವಿಶೇಷವಾಗಿ ಶ್ರೀಕೃಷ್ಣರೂಪದ ಸ್ತೋತ್ರವಾಗಿದ್ದರೂ, ಶ್ರೀರಾಮ, ಶ್ರೀಹಯಗ್ರೀವ ಮೊದಲಾದ ರೂಪವಿಶೇಷಗಳ ಕೃತಿಯೂ ಆಗಿರುವುದು ಗಮನಾರ್ಹ.

೪. ಇಲ್ಲಿಯ ಪ್ರಥಮಶ್ಲೋಕದಲ್ಲಿನ **ವಂದೇ** ಎಂಬುದನ್ನು ಮುಂದಿನ ಶ್ಲೋಕಗಳಲ್ಲಿ ಆಗತ್ಯವಿರುವು ಸ್ಥಳಗಳಲ್ಲೆಲ್ಲ ಅನ್ವಯಿಸಿಕೊಂಡು ಅರ್ಥಮಾಡಿಕೊಳ್ಳಬೇಕು; ಅದರಂತೆ ಸದಾ ಎಂಬುದನ್ನು ಸಹ ಯಥಾಯೋಗ್ಯವಾಗಿ ಶ್ರೀಹರಿಯ ಕಾರ್ಯಗಳೊಂದಿಗೂ ಹಾಗೂ ಅವನಿಗೆ ಮಾಡುವ ವಂದನೆ, ಸ್ಮರಣೆ ಮೊದಲಾದವುಗಳಿಗೂ ಸಹ ಅನ್ವಯಿಸಿಕೊಳ್ಳಬೇಕು.

೫. ತಾವು ಶ್ರೀಹರಿಯನ್ನು ಸಂತತ ಚಿಂತಿಸುವವರು ಎಂದು ತಿಳಿಸುವ ಮೂಲಕ, ತಾವು ವಾಯುದೇವರ ಅವತಾರ ಎಂಬ ವಿಶೇಷಾಂಶವನ್ನು ಶ್ರೀಮದಾಚಾರ್ಯರು ಸೂಚಿಸಿರುವರು.

೬. ಇಲ್ಲಿಯ **ಅಜಾದಯಃ** ಎಂಬ ಪದಕ್ಕೆ **ಅಜಾ-ಆದಯಃ, ಅಜ-ಆದಯಃ** ಎಂದು ಅರ್ಥ. ಅಜಾ ಎಂದರೆ ಮಹಾಲಕ್ಷ್ಮೀ, ಅಜ ಎಂದರೆ ಬ್ರಹ್ಮದೇವರು. ಇದರಿಂದಾಗಿ **ಅಜಾದಿಭಿಃ** ಎಂಬುದಕ್ಕೆ ರಮಾಬ್ರಹ್ಮಾದಿಗಳಿಂದ ಎಂಬ ವಿಶೇಷಾಂಶ ಲಭಿಸುವುದು.

೭. ಇಲ್ಲಿಯ ಪ್ರತಿಶ್ಲೋಕದಲ್ಲೂ ಸಹ ಶ್ರೀಹರಿಯೊಂದಿಗೆ ಮಹಾಲಕ್ಷ್ಮಿಯ ಪ್ರಸ್ತಾಪವೂ ಬಂದಿರುವುದು ಅತ್ಯಂತ ಗಮನಾರ್ಹ. ಇದು ಶ್ರೀಹರಿಯೊಂದಿಗೆ ಮಹಾಲಕ್ಷ್ಮಿಗೆ ಇರುವ ವಿಶೇಷವ್ಯಾಪ್ತಿಯನ್ನು ಸೂಚಿಸುತ್ತಾ, ಅವರ **ಸಮನಾ** ಎಂಬ ಹಿರಿಮೆಯನ್ನು ಸೂಚಿಸುವುದು.

೮. ಇಲ್ಲಿನ ಹೆಚ್ಚಿನ ಶ್ಲೋಕಗಳಲ್ಲಿ ಶ್ರೀಹರಿಯನ್ನು ವಿಶೇಷವಾಗಿ ನೆನೆಯುವ, ಸ್ತುತಿಸುವ ಪ್ರಸ್ತಾಪ ಬಂದಿದೆ. ಅದರ ಮಹತ್ತ್ವವು ಈ ಕೆಳಗಿನ ಶ್ರೀಮದ್ಭಾಗವತಶ್ಲೋಕದಲ್ಲಿ ನಿರೂಪಿತವಾಗಿದೆ:

**ಶೃಣ್ವನ್ ಗೃಣನ್ ಸಂಸ್ಮರಯಂಶ್ಚ ಚಿಂತಯನ್ ನಾಮಾನಿ ರೂಪಾನಿ ಚ ಮಂಗಲಾನಿ ತೇ ।**
**ಕ್ರಿಯಾಸು ಯಸ್ತ್ವಚ್ಚರಣಾವಿಂದಯೋರಾವಿಷ್ಟಚಿತ್ತೋ ನ ಭವಾಯ ಕಲ್ಪತೇ ॥**

-೧೦/೩/೩೮

*****

# ೨. ದ್ವಿತೀಯಾಧ್ಯಾಯ (ಮಹಿಮಾವರ್ಣನಸ್ತೋತ್ರ)

**ಸುಜನೋದಧಿಸಂವೃದ್ಧಿಪೂರ್ಣಚಂದ್ರೋ ಗುಣಾರ್ಣವಃ।**
**ಅಮಂದಾನಂದಸಾಂದ್ರೋ ನಃ ಪ್ರೀಯತಾಮಿಂದಿರಾಪತಿಃ ॥೧॥**

**ಪ:** ಸುಜನೋದಧಿಸಂವೃದ್ಧಿಪೂರ್ಣಚಂದ್ರಃ, ಗುಣಾರ್ಣವಃ, ಅಮಂದಾನಂದಸಾಂದ್ರಃ, ನಃ, ಪ್ರೀಯತಾಮ್, ಇಂದಿರಾಪತಿಃ।

**ಅ :** ಸುಜನೋದಧಿಸಂವೃದ್ಧಿಪೂರ್ಣಚಂದ್ರಃ, ಗುಣಾರ್ಣವಃ, ಅಮಂದಾನಂದ-ಸಾಂದ್ರಃ, ಇಂದಿರಾಪತಿಃ, ನಃ, ಪ್ರೀಯತಾಮ್।

**ಪ್ರ.ಪ. : ಸುಜನೋದಧಿಸಂವೃದ್ಧಿಪೂರ್ಣಚಂದ್ರಃ** – ಸಜ್ಜನರೆಂಬ ಸಮುದ್ರವನ್ನು ಉಕ್ಕೇರಿಸುವ ಪೂರ್ಣಚಂದ್ರನಾದ; **ಗುಣಾರ್ಣವಃ** – ಗುಣಸಾಗರನಾದ; **ಅಮಂದಾನಂದಸಾಂದ್ರಃ** – ಪೂರ್ಣಾನಂದದಿಂದ ತುಂಬಿರುವ; **ಇಂದಿರಾಪತಿಃ** – ಲಕ್ಷ್ಮೀಪತಿಯಾದ ಶ್ರೀಹರಿಯು; **ನಃ** – ನಮಗೆ; **ಪ್ರೀಯತಾಮ್** – ಪ್ರಸನ್ನನಾಗಲಿ.

**ಸುಜನಸಾಗರವನ್ನು ಉಕ್ಕಿಸುವ ಚಂದ್ರಮನು ಪರಿಪೂರ್ಣಗುಣದ ಕಡಲು।**
**ಪರಿಪೂರ್ಣಸುಖದಿಂದ ತುಂಬಿರುವ ಶ್ರೀನಲ್ಲ ಎಂದೆಂದು ಒಲಿಯಲೆಮಗೆ ॥೧॥**

**ಅನು : ಸಜ್ಜನರೆಂಬ ಸಮುದ್ರವನ್ನು ಉಕ್ಕೇರಿಸುವ ಪೂರ್ಣಚಂದ್ರನಾದ, ಗುಣಸಾಗರನಾದ, ಪೂರ್ಣಾನಂದದಿಂದ ತುಂಬಿರುವ, ಲಕ್ಷ್ಮೀಪತಿಯಾದ ಶ್ರೀಹರಿಯು ನಮಗೆ ಪ್ರಸನ್ನನಾಗಲಿ.**

ವಿ : ೧. ಅಸಂಖ್ಯ ನದಿಗಳು ತುಂಬು ಪ್ರವಾಹದಿಂದ ಬಂದು ಸೇರಿದರೂ ಸಮುದ್ರವೂ ಉಕ್ಕೇರಲಾರದು. ಅದೇನಿದ್ದರೂ ಸ್ವಲ್ಪ ತೀರದ ಬಳಿ ಅಷ್ಟೇ. ಆದರೆ ಕಡು ಬೇಸಿಗೆ ಹುಣ್ಣಿಮೆಯಂದು ಸಮುದ್ರವು ಭೋರ್ಗರೆಯುತ್ತಿರುತ್ತದೆ. ಆಗ ಮಳೆಯಿರದೆ, ಬಿಸಿಲಿನ ಬೇಗೆಗೆ ನದಿಗಳು ಒಣಗಿರುವವು, ಇಲ್ಲವೇ ಕ್ಷೀಣಿಸಿರುವವು; ಆದರೂ ಸಮುದ್ರ ಉಕ್ಕೇರಲು ಕಾರಣ ಹುಣ್ಣಿಮೆಯ ಚಂದ್ರ. ಮಳೆಗಾಲದಲ್ಲಿ ಅನೇಕ ನದಿಗಳ ಪ್ರವಾಹಗಳು ತನ್ನ ಒಡಲಿಗೆ ಬಂದು ಸೇರಿದರೂ ಉಕ್ಕೇರದ ಸಮುದ್ರವು, ಲಕ್ಷಗಟ್ಟಲೆ ಕಿಲೋಮೀಟರ್ ದೂರದಲ್ಲಿದ್ದರೂ ಚಂದ್ರನ ದರ್ಶನದಿಂದ ಹಾಗೆ ಉಕ್ಕೇರುವುದು. ಅದರಂತೆ ಸಜ್ಜನರು ಸಹ ಸಮುದ್ರವಿದ್ದಂತೆ. ಬಳಿಯಲ್ಲಿಯೇ ಅಸಂಖ್ಯ ಭೌತಿಕಸುಖಗಳ ಸಮೃದ್ಧಿಯಿದ್ದರೂ ಅವರಿಗೆ ಖುಷಿಯೆನ್ನಿಸುವುದಿಲ್ಲ. ಆದರೆ ಪರೋಕ್ಷವೆನಿಸುವ ಶಾಸ್ತ್ರಗಳಲ್ಲಿ ಪ್ರತಿಪಾದಿತವಾದ ಭಗವಂತನ ಮಾಹಾತ್ಮ್ಯವನ್ನು ಶ್ರವಣ ಮಾಡುತ್ತಲೇ ಅವರ ಮನಸ್ಸು ನಲಿಯತೊಡಗುವುದು. ಆದಕ್ಕೆ ಕಾರಣ ಭಗವಂತನು ಗುಣಪೂರ್ಣವಾಗಿರುವುದೇ ಆಗಿದೆ ಎಂದು ಭಾವ.

೨. ಚಂದ್ರನ ದರ್ಶನದಿಂದ ಸಮುದ್ರವು ಉಕ್ಕೇರುವಂತೆ, ಸಮುದ್ರದ ದರ್ಶನದಿಂದ ಚಂದ್ರನೇನೂ ಬೀಗುವುದಿಲ್ಲ. ಅದರಂತೆ ಭಗವಂತನು ಸ್ವಯಂಪರಿಪೂರ್ಣನಾದ್ದರಿಂದ

ಅವನಿಗೆ ಭಕ್ತರು ಮೊದಲಾದವರಿಂದ ಯಾವ ಪ್ರಯೋಜನವೂ ಇಲ್ಲ. ಆದರೆ ಭಕ್ತರ ಆನಂದಕ್ಕೆ ಅವನು ಅತ್ಯಗತ್ಯ ಎಂದು ಭಾವ.

೩. ಲಕ್ಷ್ಮೀಪತಿಯಾದ ಶ್ರೀಹರಿಯು ಗುಣಸಮುದ್ರ. ಅವನ ಅಪಾರ ಸಂಖ್ಯೆಯ ಭಕ್ತರೂ ಸಹ ಸಮುದ್ರವಿದ್ದಂತೆ. ಅಂತಹ ಭಕ್ತರ ಮನಸ್ಸಿಗೆ ಸಮೃದ್ಧವಾದ ಆನಂದವನ್ನು ನೀಡುವ ವಿಷಯದಲ್ಲಿ ಗುಣಸಾಗರನಾದ ಅವನು ಪೂರ್ಣಚಂದ್ರನಂತಹವನು[೧] ಎಂದು ಭಾವ. ಒಬ್ಬನೇ ಚಂದ್ರ ಸಮಸ್ತ ಸಾಗರವನ್ನು ಉಕ್ಕೇರಿಸುವಂತೆ, ಒಬ್ಬನೇ ಶ್ರೀಹರಿ ಸಕಲಭಕ್ತರಿಗೂ ನಲಿವು ನೀಡುವ ಮಹಾಮಹಿಮೆ ಉಳ್ಳವನು ಎಂದು ಅರ್ಥವಾಗುವುದು.

೪. ಇಲ್ಲಿ ಶ್ರೀಹರಿಯನ್ನು ಏಕಕಾಲಕ್ಕೆ ಚಂದ್ರ ಮತ್ತು ಸಮುದ್ರ ಎಂದು ಕರೆದಿರುವುದು ಅಪೂರ್ವ. ಶ್ರೀಹರಿಯು ಭಕ್ತರಿಗೆ ನಲಿವು ನೀಡುವ ಕಾರ್ಯದಲ್ಲಿ ಚಂದ್ರನಾದರೆ, ಗುಣಪೂರ್ಣನಾಗಿರುವುದರಲ್ಲಿ ಸಮುದ್ರದಂತಹವನು ಎಂದರ್ಥ.

**ರಮಾಚಕೋರೀವಿಧವೇ ದುಷ್ಟದರ್ಪೋದವಹ್ನಯೇ ।**
**ಸತ್ಪಾಂಥಜನಗೇಹಾಯ ನಮೋ ನಾರಾಯಣಾಯ ತೇ ॥ ೨ ॥**

**ಪ :** ರಮಾಚಕೋರೀವಿಧವೇ, ದುಷ್ಟದರ್ಪೋದವಹ್ನಯೇ, ಸತ್ಪಾಂಥಜನಗೇಹಾಯ, ನಮಃ, ನಾರಾಯಣಾಯ ತೇ ।

**ಅ :** ರಮಾಚಕೋರೀವಿಧವೇ, ದುಷ್ಟದರ್ಪೋದವಹ್ನಯೇ, ಸತ್ಪಾಂಥಜನಗೇಹಾಯ, ನಾರಾಯಣಾಯ, ತೇ, ನಮಃ ।

**ಪ್ರ.ಪ. : ರಮಾಚಕೋರೀವಿಧವೇ** – ಮಹಾಲಕ್ಷ್ಮೀ ಎಂಬ ಚಕೋರಿಗೆ ಚಂದ್ರನಂತಹ; **ದುಷ್ಟದರ್ಪೋದವಹ್ನಯೇ** – ದುಷ್ಟರ ದರ್ಪವೆಂಬ ನೀರಿಗೆ ಬಡಬಾನಲದಂತಹ; **ಸತ್ಪಾಂಥಜನಗೇಹಾಯ** – ಸಜ್ಜನರೆಂಬ ಪಯಣಿಗರಿಗೆ ವಿಶ್ರಾಂತಿಧಾಮನಂತಹ; **ನಾರಾಯಣಾಯ** – ನಾರಾಯಣನಾದ; **ತೇ** – ನಿನಗೆ; **ನಮಃ** – ನಮಸ್ಕಾರವು.

**ರಮೆಚಕೋರಿಗೆ ಚಂದ್ರ ಕುಜನ ದರ್ಪವ ಕಳೆವ ಸುಡುಸುಡುವ ಕಡಲ ಬೆಂಕಿ ।**
**ಸದ್ಭಕ್ತ ಪಾಂಥರಿಗೆ ವಿಶ್ರಾಂತಿಧಾಮನಹ ಗುಣದ ಗಣಿ ನಿನಗೆ ನಮನಂ ॥ ೨ ॥**

**ಅನು : ನಾರಾಯಣನೇ! ನೀನು ಮಹಾಲಕ್ಷ್ಮೀ ಎಂಬ ಚಕೋರಿಗೆ ಹುಣ್ಣಿಮೆಯ ಚಂದ್ರಮ, ದುಷ್ಟರ ದರ್ಪವೆಂಬ ಜಲಕ್ಕೆ ಬಡಬಾನಲ, ಸಜ್ಜನರೆಂಬ ಪಯಣಿಗರಿಗೆ ವಿಶ್ರಾಂತಿಧಾಮ, ಅಂತಹ ನಿನಗೆ ನಮಸ್ಕಾರ.**

---

೧. ಜಯತ್ಯಜೋಽಕ್ಷೀಣಸುಖಾತ್ಮಬಿಂಬಃ ಸ್ವೈಶ್ವರ್ಯಕಾಂತಿಪ್ರತತಃ ಸದೋದಿತಃ ।
ಸ್ವಭಕ್ತಸಂತಾಪದುರಿಷ್ಟಹಂತಾ **ರಾಮಾವತಾರೋ ಹರಿರೀಶಚಂದ್ರಮಾಃ** ॥
– ಮ.ಭಾ.ತಾ.ನಿ. (೩/೨)

ವಿ: ೧. **ರಮಾಚಕೋರಿವಿಧವೇ** – ಚಕೋರ ಪಕ್ಷಿಗೆ ನಲಿವು ಉಂಟಾಗುವುದು ಚಂದ್ರನಿಂದ ಮಾತ್ರ. ಅದರಂತೆ ಮಹಾಲಕ್ಷ್ಮಿಗೆ ಪರಮಾನಂದ ಕಾರಣ ಶ್ರೀಹರಿ ಎಂದರ್ಥ. ಚಕೋರಿಗೆ ಚಂದ್ರನಿಂದ ಮಾತ್ರ ನಲಿವು ಹೇಗೋ ಹಾಗೆ, ಮಹಾಲಕ್ಷ್ಮಿಗೆ ಶ್ರೀಹರಿಯಿಂದ ಮಾತ್ರವೇ ನಲಿವು ಎಂದು ಭಾವ. ಸಮುದ್ರಮಥನಕಾಲದಲ್ಲಿ ಪ್ರಾದುರ್ಭವಿಸಿದ ಮಹಾಲಕ್ಷ್ಮಿಯು ಇತರ ದೇವತೆಗಳನ್ನು ಒಂದಲ್ಲ ಒಂದು ಬಗೆಯ ಕುಂದನ್ನು ಸೂಚಿಸಿದ ವಿವರ ಸುಪ್ರಸಿದ್ಧ. ಇದರಿಂದ ಸರ್ವೋತ್ತಮನಾದ ಶ್ರೀಹರಿಯೇ ಮಹಾಲಕ್ಷ್ಮಿಗೆ ಆನಂದ ನೀಡುವ ಸರ್ವತಂತ್ರಸ್ವತಂತ್ರ ಎಂದು ಭಾವ. ಹಿಂದಿನ ಶ್ಲೋಕದಲ್ಲಿ ಸಜ್ಜನಸಾಗರಕ್ಕೆ ಚಂದ್ರ ಎಂಬ ಉಲ್ಲೇಖ ಬಂದಿದ್ದರೆ, ಈ ಶ್ಲೋಕದಲ್ಲಿ ಮಹಾಲಕ್ಷ್ಮಿಗೆ ಚಕೋರ ಎಂಬ ಮಾತು ಬಂದಿದೆ. ಎರಡರಲ್ಲೂ ಸಹ ಅಪಾರ ನಲಿವಿಗೆ ಕಾರಣವಾಗುವುದು ಚಂದ್ರನೇ ಎಂಬುದು ವಿಶೇಷ. ಸಮುದ್ರ ಒಟ್ಟಾಗಿ ಉಕ್ಕೇರಿದರೆ, ಚಕೋರಿಗಳು ಮಾತ್ರ ಪ್ರತ್ಯೇಕವಾಗಿ ನಲಿಯುವವು ಎಂಬ ಹಿನ್ನೆಲೆಯಲ್ಲಿ ಇಲ್ಲಿಯ ಸ್ವಾರಸ್ಯ ಅತ್ಯಂತ ರೋಚಕವಾದುದು: **ವಿಧು** – ಚಂದ್ರ

೨. **ದುಷ್ಟದರ್ಪೋದವಹ್ನಯೇ** – ಬ್ರಹ್ಮ ರುದ್ರಾದಿಗಳ ವರದ ಬೆಂಬಲದಿಂದಾಗಿ ದುಷ್ಟರ ದರ್ಪಕ್ಕೆ[೧] ಮಿತಿಯಿರದು; ಆದರೆ ಅವರಿಗೆ ಚಿತ್ರ ವಿಚಿತ್ರವಾದ ರೀತಿ ಸೋಲು ಹಾಗೂ ಸಾವನ್ನುಂಟು ಮಾಡುವ ಸಾಮರ್ಥ್ಯವಿರುವುದು ಶ್ರೀಹರಿಗೆ ಮಾತ್ರ. ಲೋಕ ನಾಶಕರಾದ ಹಿರಣ್ಯಕಶಿಪು, ರಾವಣಾದಿಗಳನ್ನು ನರಸಿಂಹ, ರಾಮ ಮೊದಲಾದ ರೂಪಗಳಿಂದ ಸಂಹರಿಸಿದವನು ಶ್ರೀಹರಿಯೇ ಅಲ್ಲವೇ? ಸಮುದ್ರೋದಕವನ್ನು ಹಿಂಗಿಸಲು ಶಕ್ತಿ ಬಡಬಾನಲಕ್ಕೆ ಮಾತ್ರ ಸಾಧ್ಯವಿರುವಂತೆ ಅಂತಹ ದುಷ್ಟರ ದರ್ಪವನ್ನು ಅಡಗಿಸಲು ಶ್ರೀಹರಿಗೆ ಮಾತ್ರ ಸಾಧ್ಯ ಎಂದರ್ಥ. ಬ್ರಹ್ಮಾದಿದೇವತೆಗಳು ದುಷ್ಟರಿಂದ ಉಂಟಾದ ಹಾವಳಿಯ ನಿವಾರಣೆಗಾಗಿ ಶ್ರೀಹರಿಯನ್ನು ವಿಶೇಷವಾಗಿ ಪ್ರಾರ್ಥಿಸುವ ಪೌರಾಣಿಕ ಪ್ರಸಂಗಗಳು ಇದಕ್ಕೆ ನಿದರ್ಶನ. ಉದವಹ್ನಿ ಎಂಬುದನ್ನು ಉದಕಕ್ಕೆ ವಹ್ನಿ ಎಂಬುದಾಗಿಯೂ, ಅದರಂತೆ ಬಡಬಾನಲ ಎಂಬುದಾಗಿಯೂ ಅರ್ಥಮಾಡಿಕೊಳ್ಳಬಹುದು.

೩.. ಇಲ್ಲಿ **ಅದುಷ್ಟದರ್ಪೋದವಹ್ನಯೇ** ಎಂದೂ ವಿಭಾಗ ಮಾಡಬಹುದು. ಆಗ ಅದುಷ್ಟ ಎಂದರೆ ಶಿಷ್ಟ ಎಂದರ್ಥವಾಗುವುದು. ಅರ್ಜುನಾದಿ ಶಿಷ್ಟರಿಗೂ ಸಹ ಅಸುರಾವೇಶ ಮೊದಲಾದ ಕಾರಣಗಳಿಂದಾಗಿ ಒದಗುವ ದರ್ಪವನ್ನು ಶ್ರೀಹರಿಯು ಪರಿಹರಿಸಿ ಉದ್ಧರಿಸುವವನು ಎಂದರ್ಥ[೨]. ಅರ್ಜುನ ಮೊದಲಾದವರಿಗೆ ಒದಗಿದ ದರ್ಪವನ್ನು ಶ್ರೀಕೃಷ್ಣ ಪರಿಹರಿಸಿದ ಉಲ್ಲೇಖ ಇದಕ್ಕೆ ನಿದರ್ಶನ.

---

೧. ದರ್ಪಾನ್ನಾಹಂ ರಾಜರಾಜ ಉಪಾಸ್ಯೇ ಪಾದಯೋರಿತಿ । – ಮ.ಭಾ.ತಾ.ನಿ. (೨೪/೧೫)

೨. ದರ್ಪಂ ನಿಹಂತುಂ ಹರಿರರ್ಜುನಸ್ಯ ಸಮಾನಯದ್ವಿಪ್ರಸುತಾನ್ ಪರೇಶಃ ।
– ಮ.ಭಾ.ತಾ.ನಿ.(೨೧/೩೪)

ಯಾಸ್ತಾಃ ಷೋಡಶಸಾಹಸ್ರವನಿತಾಃ ಶತಸಂಯುತಾಃ ।
ಕೃಷ್ಣಶಾಪಾನ್ಮ್ಲೇಚ್ಛವಶಂ ಯಯುರ್ದರ್ಪನಿಮಿತ್ತತಃ ॥ – ಮ.ಭಾ.ತಾ.ನಿ.(೩೨/೪೪)

೪. **ಸತ್ಪಾಂಥಜನಗೇಹಾಯ** – ಸಜ್ಜನರು ಎಂಬ ಪಯಣಿಗರಿಗೆ ವಿಶ್ರಾಂತಿಧಾಮನು ಶ್ರೀಹರಿ ಎಂದು ಭಾವ. ಸಜ್ಜನರು ಎಂಬುದಕ್ಕೆ **ಸದಿತಿ ಪ್ರಾಣಃ** ಎಂಬ ಉಪನಿಷತ್ತಿನ ವಾಣಿಯಂತೆ ಮುಖ್ಯಪ್ರಾಣ ಎಂದರ್ಥ; **ಸದಿತಿ ಬ್ರಹ್ಮ(ವಿಷ್ಣು)** ಎಂಬ ಉಪನಿಷತ್ತಿನ ಮಾತಿನಂತೆ ಸಜ್ಜನ ಎಂಬುದಕ್ಕೆ ವೈಷ್ಣವರು ಎಂದೂ ಅರ್ಥವಾಗುವುದು. ಸತ್ಪಾತ್ರರು ಎಂದರೆ ಮುಖ್ಯಪ್ರಾಣನ ಮತವನ್ನು ಅವಲಂಬಿಸಿದವರು ಎಂದರ್ಥ. ಅಂತಹವರಿಗೆ ವೈಕುಂಠಪ್ರಾಪ್ತಿ ಎಂಬ ದೀರ್ಘಪ್ರಯಾಣದಲ್ಲಿ ವಿಶ್ರಾಂತಿಧಾಮನಾಗುವವನು ಸಾಕ್ಷಾತ್ ಶ್ರೀಹರಿ ಎಂದು ಭಾವ. ಪಯಣಿಗರಿಗೆ ಆಯಾಸವಾದಾಗ ವಿಶ್ರಾಂತಿಯ ನೆಲೆ ಅಗತ್ಯವೆನ್ನಿಸುವಂತೆ, ಸಾಧಕರಿಗೆ ಆಯಾಸ ಒದಗುವ ಪ್ರಸಂಗದಲ್ಲಿ ಶ್ರೀಹರಿಯೇ ನೆಮ್ಮದಿ ನೀಡುವ ಕಾರ್ಯವನ್ನು ಮಾಡುವನು. ಆದ್ದರಿಂದ ಭಕ್ತರು ಎಂದೂ ಆಂತಕಕ್ಕೊಳಗಾಗಬೇಕಿಲ್ಲ ಎಂದರ್ಥ. ಇದರಿಂದ ಶ್ರೀಹರಿಯು ಮುಕ್ತಿಯಲ್ಲಿ ಮಾತ್ರವಲ್ಲದೆ, ಸಾಧನೆಯ ಹಂತದಲ್ಲೂ ಸಹ ಭಕ್ತರಿಗೆ ಯಥೋಚಿತವಾಗಿ ಆನಂದವನ್ನೇ ನೀಡುವನು ಎಂಬ ವಿಶೇಷಾಂಶ ಸೂಚಿತ.

**ಚಿದಚಿದ್ಭೇದಮಖಿಲಂ ವಿಧಾಯಾಧಾಯ ಭುಂಜತೇ ।**
**ಅವ್ಯಾಕೃತಗೃಹಸ್ಥಾಯ ರಮಾಪ್ರಣಯಿನೇ ನಮಃ ॥ ೩ ॥**

**ಪ** : ಚಿದಚಿದ್ಭೇದವ್, ಅಖಿಲವ್, ವಿಧಾಯ, ಆಧಾಯ, ಭುಂಜತೇ, ಅವ್ಯಾಕೃತಗೃಹಸ್ಥಾಯ, ರಮಾಪ್ರಣಯಿನೇ, ನಮಃ।

**ಅ** : ಚಿದಚಿದ್ಭೇದವ್, ಅಖಿಲವ್, ವಿಧಾಯ, ಆಧಾಯ, ಭುಂಜತೇ, ಅವ್ಯಾಕೃತಗೃಹಸ್ಥಾಯ, ರಮಾಪ್ರಣಯಿನೇ, ನಮಃ।

**ಪ್ರ.ಪ.** : **ಚಿದಚಿದ್ಭೇದಮ್** – ಜಡಚೇತನಗಳೆಂಬ ಪ್ರಭೇದವುಳ್ಳ; **ಅಖಿಲಮ್** – ಸಕಲವನ್ನೂ; **ವಿಧಾಯ** – ಸೃಷ್ಟಿಸಿ; **ಆಧಾಯ** – ರಕ್ಷಿಸಿ; **ಭುಂಜತೇ** – ನಾಶಪಡಿಸುವ; **ಅವ್ಯಾಕೃತಗೃಹಸ್ಥಾಯ** – ವಿಕಾರಕ್ಕೊಳಗಾಗದ ಗೃಹಸ್ಥನಾದ; **ರಮಾಪ್ರಣಯಿನೇ** – ರಮಾಪತಿಯಾದ ಶ್ರೀಹರಿಗೆ; **ನಮಃ** – ನಮಸ್ಕಾರವು.

**ಚೇತನವು ಜಡವೆಂಬ ಈ ಎಲ್ಲ ಜಗವನ್ನು ಸೃಜಿಸಿ ಪಾಲಿಸಿ ನುಂಗುವ।**
**ವಿಕೃತಿಯನೆ ಹೊಂದಿರದ ಪರಮ ಸುಂದರ ಧಾಮ ಶ್ರೀದೇವಿರಮಣ ನಮನಂ ॥೩॥**

**ಅನು : ಶ್ರೀಹರಿಯು ಜಡಚೇತನಗಳೆಂಬ ಪ್ರಭೇದದ ಸಕಲವನ್ನೂ ಸೃಷ್ಟಿಸುವವನು, ರಕ್ಷಿಸುವವನು, ನಾಶಪಡಿಸುವವನು; ವಿಕಾರಕ್ಕೊಳಗಾಗದ ನೆಲೆಯುಳ್ಳವನು, ಮಹಾಲಕ್ಷ್ಮಿಗೆ ಪತಿಯು; ಅವನಿಗೆ ನಮಸ್ಕಾರ.**

ವಿ: ೧. ಜಗತ್ತಿನ ವಸ್ತುಗಳು ಜಡ ಹಾಗೂ ಚೇತನ ಎಂಬುದಾಗಿ ಎರಡು ಬಗೆ. ಅವೆಲ್ಲವನ್ನೂ ಸೃಷ್ಟಿಮಾಡುವ ಪರಮಪುರುಷ ಶ್ರೀಹರಿ; ಸಂರಕ್ಷಿಸುವವನು ಅವನೆ; ಪ್ರಳಯಕಾಲದಲ್ಲಿ ಅವೆಲ್ಲವನ್ನು ನಾಶಮಾಡುವವನು ಸಹ ಅವನೆ ಎಂದು ಭಾವ; ಇಂಥ ಶ್ರೀಹರಿಗೆ ನಮಸ್ಕಾರ.

೨. ಜಗತ್ತಿನಲ್ಲಿಯ ಜಡಗಳ ಸಂಖ್ಯೆ ಅಪಾರ ಹಾಗೂ ಚೇತನರ ಸಂಖ್ಯೆ ಅನಂತ ಹಾಗೂ ತ್ರಿವಿಧ; ಹಿಂದೆ ಆಗಿ ಹೋಗಿರುವ ಜಡ ಚೇತನಗಳು ಅಸಂಖ್ಯ. ಅದರಂತೆ ಮುಂದೆ ಬರುವ ಜಡ ಚೇತನರ ಸಂಖ್ಯೆಯೂ ಸಹ; ಇವೆಲ್ಲವುಗಳಿಗೂ ಸೃಷ್ಟಿ ಸ್ಥಿತಿ, ಲಯಗಳನ್ನು ಮಾಡುವವನು ಅನಾದಿಕಾಲದಿಂದಲೂ ಅನಂತಕಾಲದವರೆಗೆ ಶ್ರೀಹರಿ ಒಬ್ಬನೇ. ಇಲ್ಲಿ ಸೃಷ್ಟಿ ಸ್ಥಿತಿ, ಲಯಗಳೊಂದಿಗೆ ನಿಯಮನ, ಜ್ಞಾನ, ಅಜ್ಞಾನ, ಬಂಧ ಹಾಗೂ ಮೋಕ್ಷ ಎಂಬ ಈ ಐದನ್ನೂ ಸಹ ಮಾಡುವವನು ಅವನೇ. ಇಂತಹ ಅಪಾರ ಮಹಿಮನಾದ ಶ್ರೀಹರಿಗೆ ನಮಸ್ಕಾರ ಎಂದರ್ಥ.

೩. ಸಾಮಾನ್ಯವಾಗಿ ಒಂದು ಮನೆಯನ್ನು ಕಟ್ಟಲು ಸಹ ಬಡಗಿ, ಪೇಂಟರ್, ಎಲೆಕ್ಟ್ರಿಷಿಯನ್, ಮೇಸನ್, ಪ್ಲಂಬರ್ ಹೀಗೆ ಅನೇಕರು ಅಗತ್ಯ. ಆದರೆ ಶ್ರೀಹರಿಯು ವಿಶ್ವದ ಎಲ್ಲರಿಗೂ, ಎಲ್ಲಕಾಲಕ್ಕೂ, ಎಲ್ಲರೀತಿಯಲ್ಲೂ ಮಾಡುವುದು ತಾನೊಬ್ಬನೆ; ಎಂದರೆ ಅವನ ಮಹಿಮೆ ಎಷ್ಟು ಅದ್ಭುತ ಎಂದು ಭಾವ: 'ತದನನ್ಯತ್ವಮಾರಂಭಣಶಬ್ದಾದಿಭ್ಯಃ' (೨/೧/೧೫).

೪. ಸಾಮಾನ್ಯವಾಗಿ ಸೃಷ್ಟಿ ಮಾಡುವವರು ತಾನು ಸೃಷ್ಟಿಸಿದ ಪದಾರ್ಥವನ್ನು ಲಯಮಾಡಲು ಬಯಸುವುದಿಲ್ಲ. ಹುಟ್ಟಿಸಿದ ತಂದೆ ತನ್ನ ಮಕ್ಕಳನ್ನು ತಾನೇ ಹೇಗೆ ಕೊಲ್ಲಲಾರನೋ ಹಾಗೆ. ತಾನು ಬೆಳೆಸಿದ ವೃಕ್ಷ ವಿಷವೃಕ್ಷ ಎಂಬುದನ್ನು ತಿಳಿದಾಗಲೂ, ಅದನ್ನು ಕತ್ತರಿಸಲು, ಅದನ್ನು ಬೆಳೆಸಿದವನಿಗೆ ಹೇಗೆ ಅಸಾಧ್ಯವೆನ್ನಿಸುವುದೋ ಹಾಗೆ. ಆದರೆ, ಜಗತ್ತಿನ ಸೃಷ್ಟಿ ಮಾಡುವ ಶ್ರೀಹರಿಯೇ, ಅದರ ಲಯವನ್ನು ಸಹ ಮಾಡುವನು ಎಂಬುದು ವಿಶೇಷ. ಲೋಕದ ಜನ ಹಾಗೆ ಮಾಡದಿರಲು ಅವರಿಗೆ ಅವುಗಳ ಮೇಲಿರುವ ಅಭಿಮಾನವೇ ಕಾರಣ. ಧೃತರಾಷ್ಟ್ರನಿಗೆ ದುರ್ಯೋಧನಾದಿಗಳ ಬಗ್ಗೆ ಹೇಗೋ ಹಾಗೆ. ಆದರೆ ಶ್ರೀಹರಿಯು ಅಂತಹ ಸೃಷ್ಟಿಕರ್ತನಲ್ಲ. ಅವನು ಕೇವಲ ಲೋಕಕಲ್ಯಾಣಕ್ಕಾಗಿ ಮಾತ್ರವೇ ಸೃಷ್ಟಿಮಾಡುವವನಾದ್ದರಿಂದ, ಅವನಿಗೆ ಅದನ್ನು ನಾಶಮಾಡುವಾಗ ಯಾವ ವಿಕಾರವೂ ಉಂಟಾಗದು ಎಂದರ್ಥ. ಈ ವಿಶೇಷಾಂಶವು ಅವ್ಯಾಕೃತಗೃಹಸ್ಥಾಯಿ ಎಂಬ ಪದದಿಂದ ಸೂಚಿತ. ಇದು ಶ್ರೀಹರಿಯ ಸೃಷ್ಟಿ ಮೊದಲಾದ ಸಕಲ ಕಾರ್ಯಗಳು ಸಹ ಲೋಕವಿಲಕ್ಷಣವಾಗಿದ್ದು, ಅವನ ವಿಹಾರಸ್ವರೂಪವಾಗಿವೆಯೇ ಹೊರತು, ಅದರಿಂದ ಅವನಿಗೆ ಯಾವುದೇ ವಿಧವಾದ ಲಾಭನಷ್ಟಗಳು ಸರ್ವಥಾ ಇರುವುದಿಲ್ಲ ಎಂದು ಭಾವ.

೫. ಶ್ರೀಮದ್ಭಾಗವತದಲ್ಲಿ ಶ್ರೀಕೃಷ್ಣ ತನ್ನ ಮಕ್ಕಳು, ಮೊಮ್ಮಕ್ಕಳನು ಸ್ವತಃ ತಾನೇ ಸಂಹಾರ ಮಾಡುವ ಪ್ರಸಂಗ ನಿರೂಪಿತವಾಗಿದ್ದು, ಅವನ ಈ ಕಾರ್ಯಕ್ಕೆ ಉತ್ತಮ ನಿದರ್ಶನವಾಗಿದೆ.

೬. ಹರಿಕಥಾಮೃತಸಾರದಲ್ಲಿ ಈ ಶ್ಲೋಕದ ಭಾವವು ಸೋದಾಹರಣವಾಗಿ ಬಂದಿರುವುದು ಗಮನಾರ್ಹ :

**ಮಳಲಮನೆಗಳ ಮಾಡಿ ಮಕ್ಕಳು ಕೆಲವು ಕಾಲದಲಾಡಿ ಮೋದದಿ**
**ತುಳಿದು ಕೆಡಿಸುವ ತೆರದಿ ಲಕ್ಷ್ಮೀರಮಣ ಲೋಕಗಳ।**
**ಹಲವು ಬಗೆಯಲಿ ನಿರ್ಮಿಸುವ ನಿಶ್ಚಲನು ತಾನಾಗಿದ್ದು ಸಲಹುವ**
**ಯಲರುಣೆಯ ಪೋಲ್ ನುಂಗುವಂಗೆಲ್ಲಿಹುದೊ ಸುಖದುಃಖ॥** - ೩/೨೮

**ಅಮಂದಗುಣಸಾರೋಽಪಿ ಮಂದಹಾಸೇನ ವೀಕ್ಷಿತಃ।**
**ನಿತ್ಯಮಿಂದಿರಯಾಽಽನಂದಸಾಂದ್ರೋ ಯೋ ನೌಮಿ ತಂ [೧]ಹರಿಮ್ ॥೪॥**

**ಪ :** ಅಮಂದಗುಣಸಾರಃ, ಅಪಿ, ಮಂದಹಾಸೇನ, ವೀಕ್ಷಿತಃ, ನಿತ್ಯಮ್, ಇಂದಿರಯಾ, ಆನಂದಸಾಂದ್ರಃ, ಯಃ, ನೌಮಿ, ತಮ್, ಹರಿಮ್।

**ಅ :** ಅಮಂದಗುಣಸಾರಃ, ಆನಂದಸಾಂದ್ರಃ, ಅಪಿ, ಇಂದಿರಯಾ, ನಿತ್ಯಮ್, ಮಂದಹಾಸೇನ, ವೀಕ್ಷಿತಃ, ಯಃ, ತಮ್, ಹರಿಮ್, ನೌಮಿ।

**ಪ್ರ.ಪ. : ಅಮಂದಗುಣಸಾರಃ** – ಪರಿಪೂರ್ಣವಾದ ಗುಣನಿಧಿಯು; **ಆನಂದಸಾಂದ್ರಃ** – ಆನಂದಪೂರ್ಣನು; **ಅಪಿ** – ಆದರೂ; **ಇಂದಿರಯಾ** – ಮಹಾಲಕ್ಷ್ಮಿಯಿಂದ; **ನಿತ್ಯಮ್** – ಸದಾ; **ಮಂದಹಾಸೇನ** – ಕಿರುನಗೆಯಿಂದ; **ವೀಕ್ಷಿತಃ** – ನೋಡಲ್ಪಡುವವನು; **ಯಃ ತಮ್** – ಆ; **ಹರಿಮ್** – ಶ್ರೀಹರಿಯನ್ನು; **ನೌಮಿ** – ನಮಸ್ಕರಿಸುವೆನು.

**ಪರಿಪೂರ್ಣವಾಗಿರುವ ಗುಣದಿಂದ ತುಂಬಿರುವ ಚೆಲುಮಂದಹಾಸದಿಂದ।**
**ರಮೆ ನಿತ್ಯ ಕಾಣುತಿಹ ನಲಿವೀವ ಸುಖಪೂರ್ಣ ಶ್ರೀಹರಿಗೆ ನನ್ನ ನಮನಂ ॥ ೪ ॥**

**ಅನು : ಪರಿಪೂರ್ಣನಾದ ಗುಣನಿಧಿಯೂ, ಆನಂದಪೂರ್ಣನೂ ಆಗಿದ್ದರೂ, ಮಹಾಲಕ್ಷ್ಮಿಯಿಂದ ಸದಾ ಕಿರುನಗೆಯಿಂದ ನೋಡಲ್ಪಡುವವನು; ಅಂತಹ ಶ್ರೀಹರಿಯನ್ನು ನಮಸ್ಕರಿಸುವೆನು.**

ವಿ : ೧. ಸಾಮಾನ್ಯವಾಗಿ ತಮ್ಮನ್ನು ಇನ್ನೊಬ್ಬರು ಗಮನಿಸಿ ಅಭಿನಂದಿಸಿದಾಗ ಆನಂದವೆನಿಸುವುದು; ಕೆಲವೊಮ್ಮೆ ಆನಂದ ಹೆಚ್ಚುವುದು ಸಹ; ಆದರೆ ಶ್ರೀಹರಿಯು ಸ್ವಯಂ ಆನಂದಪೂರ್ಣನಾಗಿದ್ದು ಇತರರ ಗಮನಕ್ಕೆ ಬಾರದೆಯೂ ಅಷ್ಟೇ ಆನಂದ-ಪೂರ್ಣನಾಗಿರುವನು. ಆದರೂ ಮಹಾಲಕ್ಷ್ಮಿಯ ಮೇಲಿನ ವಿಶೇಷ ಪ್ರೀತಿಯಿಂದಾಗಿ ಅವಳು ತನ್ನನ್ನು ದಿಟ್ಟಿಸಿ ನೋಡಿದಾಗ ನಲಿವು ನೀಡುವನು. ಆದರಿಂದ ಅವನಿಗೆ ಮಾತ್ರ ಯಾವ ಪ್ರಯೋಜನವೂ ಇಲ್ಲ ಎಂದು ಭಾವ.

---

೧. **ಕೇಶವಃ ಕೇಶಿಹಾ ಹರಿಃ.** - ವಿಷ್ಣುಸಹಸ್ರನಾಮ

೨. ಶ್ರೀಹರಿಯು **ಸ್ವರತ** ಎಂಬುದು ಸುಪ್ರಸಿದ್ಧ; ಅದರಿಂದ ತನ್ನನ್ನು ಇತರರು ಗಮನಿಸಿದಿದ್ದರೂ ಅವನ ಆನಂದಕ್ಕೆ ಯಾವ ಕುಂದೂ ಇಲ್ಲ. ಅವನು ಸದಾ ಆನಂದಪೂರ್ಣ ಎಂದು ಭಾವ. ಕೆಲವೊಮ್ಮೆ ತಾವು ಮಾಡಿಕೊಂಡ ಅಲಂಕಾರವನ್ನು ಹಾಗೂ ಸಾಧಿಸಿದ ಹಿರಿಮೆಯನ್ನು ಸಂಬಂಧಿಸಿದವರು ಗಮನಿಸದೇ ಇದ್ದಾಗ ನಿರಾಶೆಯಾಗುವುದುಂಟು. ಆದರೆ ಶ್ರೀಹರಿಯು ಹಾಗಲ್ಲ ಎಂಬ ವಿಶೇಷಾಂಶ ಇಲ್ಲಿ ನಿರೂಪಿತವಾಗಿದೆ. ಶ್ರೀಹರಿಯ ಆನಂದವು ಅವನ ಸ್ವರೂಪವೇ ಆಗಿದ್ದು, ಇತರ ಯಾವುದನ್ನೂ ಸಹ ಅವಲಂಬಿಸಿಲ್ಲ ಎಂದು ತಾತ್ಪರ್ಯ.

೩. ಶ್ರೀಹರಿಯು ಹಾಗೆ ಮಹಾಲಕ್ಷ್ಮಿಯಿಂದ ನೋಡಲ್ಪಡುವುದು ಸಹ ತನ್ನ ಆನಂದವಿಶೇಷಕ್ಕಾಗಿ ಏನೂ ಅಲ್ಲ. ಅದು ಕೇವಲ ಮಹಾಲಕ್ಷ್ಮಿಯ ನಲಿವಿಗಾಗಿ ಮಾತ್ರ ಎಂದು ಭಾವ.

**ವಶೀ ವಶೇ ನ ಕಸ್ಯಾಪಿ ಯೋಽಜಿತೋ[೧] ವಿಜಿತಾಖಿಲಃ ।**
**ಸರ್ವಕರ್ತಾ ನ ಕ್ರಿಯತೇ ತಂ ನಮಾಮಿ ರಮಾಪತಿಮ್ ॥ ೫ ॥**

**ಪ :** ವಶೀ, ವಶೇ, ನ, ಕಸ್ಯ, ಅಪಿ, ಯಃ, ಅಜಿತಃ, ವಿಜಿತಾಖಿಲಃ, ಸರ್ವಕರ್ತಾ, ನ, ಕ್ರಿಯತೇ, ತಮ್, ನಮಾಮಿ, ರಮಾಪತಿಮ್ ।

**ಅ :** ಯಃ, ವಶೀ, ಕಸ್ಯ, ವಶೇ, ಅಪಿ, ನ, ಅಜಿತಃ, ವಿಜಿತಾಖಿಲಃ, ಸರ್ವಕರ್ತಾ, ನ, ಕ್ರಿಯತೇ, ತಮ್, ರಮಾಪತಿಮ್, ನಮಾಮಿ ।

**ಪ್ರ.ಪ. : ಯಃ** – ಯಾರು; **ವಶೀ** – ಎಲ್ಲವನ್ನೂ ವಶದಲ್ಲಿರಿಸಿಕೊಂಡಿರುವನೋ; **ಕಸ್ಯ** – ಯಾರ; **ವಶೇ ಅಪಿ** – ವಶದಲ್ಲೂ; **ನ** – ಇಲ್ಲವೋ; **ಅಜಿತಃ** – ಸೋಲದವನಾಗಿದ್ದು; **ವಿಜಿತಾಖಿಲಃ** – ಎಲ್ಲವನ್ನು ಗೆದ್ದಿರುವನೋ; **ಸರ್ವಕರ್ತಾ** – ಎಲ್ಲವನ್ನೂ ಮಾಡುವವನಾಗಿದ್ದು; **ನ ಕ್ರಿಯತೇ** – ಯಾರಿಂದಲೂ ಮಾಡಲ್ಪಡದವನೋ; **ತಮ್** – ಆ; **ರಮಾಪತಿಮ್** – ಲಕ್ಷ್ಮೀಪತಿಯಾದ ಶ್ರೀಹರಿಯನ್ನು; **ನಮಾಮಿ** – ನಮಸ್ಕರಿಸುವೆನು.

**ಎಲ್ಲವೂ ಇವನ ವಶ ಇವನಾರ ವಶನಲ್ಲ ಎಲ್ಲವನು ಗೆಲ್ಲುವನು ಸೋಲಿಲ್ಲದವನು ।**
**ಎಲ್ಲವನು ಮಾಡಿರುವ ಯಾರೆಂದು ಮಾಡಿರದ ಶ್ರೀರಮಣ ನಿನಗೆ ನಮನಂ ॥ ೫ ॥**

**ಅನು :** ಶ್ರೀಹರಿಯು ಎಲ್ಲವನ್ನೂ ತನ್ನ ವಶದಲ್ಲಿರಿಸಿಕೊಂಡಿರುವವನು, ತಾನು ಮಾತ್ರ ಯಾರ ವಶದಲ್ಲೂ ಇರದವನು, ಸೋಲದವನು, ಸಕಲವನ್ನೂ

೧. ವೇಧಾಃ ಸ್ವಾಂಗೋಽಜಿತಃ ಕೃಷ್ಣೋ ದೃಢಃ ಸಂಕರ್ಷಣೋಽಚ್ಯುತಃ । – ವಿಷ್ಣುಸಹಸ್ರನಾಮ

**ಗೆದ್ದಿರುವವನು, ಎಲ್ಲವನ್ನೂ ನಿರ್ಮಿಸುವವನು , ಯಾರಿಂದಲೂ ಮಾಡಲ್ಪಡದವನು, ಅಂತಹ ರಮಾಪತಿಯಾದ ಶ್ರೀಹರಿಯನ್ನು ನಮಸ್ಕರಿಸುವೆನು.**

ವಿ : ೧. ಶ್ರೀಹರಿಯ ಹಿರಿಮೆಯ ಅನೇಕ ಮುಖಗಳು ಇದರಲ್ಲಿ ನಿರೂಪಿತವಾಗಿವೆ. ಸಾಮಾನ್ಯವಾಗಿ ಕೆಲವೇ ಕೆಲವು ಜನರನ್ನು ವಶದಲ್ಲಿರಿಸಿಕೊಳ್ಳುವುದು ಸಹ ಎಲ್ಲರಿಗೂ ಸಾಧ್ಯವೆನ್ನಿಸದು. ತಾನೇ ವೇತನವನ್ನು ನೀಡಿ ಕೆಲಸಕ್ಕಿಟ್ಟುಕೊಳ್ಳುವ ಆಳುಗಳು ತನ್ನ ಮಾತನ್ನೇ ಕೇಳದೆ ಹೋಗುವುದುಂಟು. ಇನ್ನು ಎಲ್ಲರನ್ನೂ ವಶದಲ್ಲಿಟ್ಟುಕೊಳ್ಳುವುದಾಗಲೀ, ಎಲ್ಲ ಕಾಲಕ್ಕೂ ವಶದಲ್ಲಿಟ್ಟುಕೊಳ್ಳುವುದಾಗಲೀ ಸರ್ವತ್ರ ಅಸಾಧ್ಯದ ಕಾರ್ಯ. ಆದರೆ ಶ್ರೀಹರಿ ಹಾಗಲ್ಲ; ಅವನು ಸಕಲರನ್ನೂ, ಸರ್ವಕಾಲಕ್ಕೂ, ಸರ್ವದಾ, ಸರ್ವತ್ರ ತನ್ನ ವಶದಲ್ಲಿಟ್ಟುಕೊಂಡಿರುವ ಮಹನೀಯ. ರಮಾಬ್ರಹ್ಮಾದಿಗಳನ್ನೊಗೊಂಡ ಇಡೀ ವಿಶ್ವವೇ ಸದಾ ಇವನ ವಶ ಎಂದು ಭಾವ.

೨. ನಮ್ಮ ಜೀವನದಲ್ಲಿ ನಾವು ಪ್ರತಿನಿತ್ಯ ಒಂದಲ್ಲ ಒಂದು ಕಾರಣದಿಂದ ಮತ್ತೊಬ್ಬರಿಗೆ ಅಧೀನರಾಗಿರುವುದು ಅನಿವಾರ್ಯ. ಈಗಾಗಲೇ ತಿಳಿಸಿದಂತೆ ನಾವೇ ನೇಮಿಸಿಕೊಂಡ ಆಳುಗಳಿಗೂ (ವಾಹನ ಚಾಲಕರು ಮೊದಲಾದವರು) ಸಹ ಅಧೀನರಾಗಿರುವುದು ಅನಿವಾರ್ಯ. ಪ್ರಜೆಗಳೆಲ್ಲಾ ರಾಜರಿಗೆ ಅಧೀನ, ರಾಜನು ಮಂತ್ರಿ ಮೊದಲಾದವರ ಅಧೀನನಾಗುವ ಪ್ರಸಂಗವು ಸಹ ಇರುವುದು. ವರ್ತಕರು ಗಿರಾಕಿಗಳಿಗೆ ಅಧೀನ, ಗಿರಾಕಿಗಳು ವರ್ತಕರಿಗೆ, ಗುರುಗಳು ಶಿಷ್ಯರಿಗೆ, ಶಿಷ್ಯರು ಗುರುಗಳಿಗೆ ಹೀಗೆ ಪ್ರತಿಯೊಂದು ವರ್ಗದಲ್ಲೂ ಒಬ್ಬರು ಮತ್ತೊಬ್ಬರಿಗೆ ಒಂದಲ್ಲ ಒಂದು ಕಾರಣಕ್ಕೆ ವಶದಲ್ಲಿರುವುದು ಅನಿವಾರ್ಯ. ವರಾದಿಗಳ ಕಾರಣದಿಂದಾಗಿ ಅಸುರರಿಗೂ ಸಹ ರುದ್ರಾದಿದೇವತೆಗಳು ವಶವರ್ತಿಗಳಾಗುವುದು ಪುರಾಣಗಳಲ್ಲಿ ನಿರೂಪಿತವಾಗಿವೆ. ಆದರೆ ಶ್ರೀಹರಿಯು ಮಾತ್ರ ಯಾರಿಗೂ ಅಧೀನನಾಗದ ಸರ್ವತಂತ್ರ ಸ್ವತಂತ್ರ ಎಂದು ಭಾವ.

೩. ಸಾಮಾನ್ಯವಾಗಿ ಒಬ್ಬನು ಮತ್ತೊಬ್ಬನಿಗೆ ಅಧೀನನಾಗಲು ಅಜ್ಞಾನ, ಅಶಕ್ತಿಗಳು ಮುಖ್ಯ ಕಾರಣ. ಶ್ರೀಹರಿಯು ಸರ್ವಜ್ಞ, ಸರ್ವಶಕ್ತನಾದ್ದರಿಂದ ಅವನು ಯಾರ ವಶವೂ ಅಲ್ಲ ಎಂದು ತಾತ್ಪರ್ಯ. ಅವನ ಸರ್ವಜ್ಞತ್ವ ಹಾಗೂ ಸರ್ವಶಕ್ತತ್ವಗಳು ಅನಾದಿ ಹಾಗೂ ನಿತ್ಯವಾದ್ದರಿಂದ ಅವನು ಯಾವ ಕಾಲಕ್ಕೂ, ಯಾರ ವಶನೂ ಅಲ್ಲ ಎಂಬ ಅಂಶ ಸ್ಫುಟ-ಪಡುವುದು.

೪. ಅವನು ಎಲ್ಲರನ್ನು ಗೆದ್ದವನು ಹಾಗೂ ಯಾರಿಗೂ ಸೋಲದವನು. ಇಲ್ಲೂ ಸಹ ಸೋಲಿಗೆ ಅಜ್ಞಾನ, ಅಶಕ್ತಿಗಳೇ ಕಾರಣ, ಶ್ರೀಹರಿಯು ಸರ್ವಜ್ಞ ಹಾಗೂ ಸರ್ವಶಕ್ತನಾದ್ದರಿಂದಲೇ ಅವನು ಯಾರಿಗೂ ಸೋಲನು ಎಂದರ್ಥ. ಅವನು ಎಲ್ಲವನ್ನು ಬಲ್ಲವನಾದ್ದರಿಂದ ಅವನಿಗೆ ಯಾವುದೇ ಒಂದು ವಿಷಯದಲ್ಲೂ ಸೋಲಿಲ್ಲ, ಸರ್ವಶಕ್ತನಾದ್ದರಿಂದ, ಸ್ವಗತಭೇದವಿವರ್ಜಿತನಾದ್ದರಿಂದ ಅವನ ಯಾವರೂಪಕ್ಕೂ

ಸೋಲಿಲ್ಲ ಎಂದರ್ಥ. ಇದರಿಂದ ಪರಶುರಾಮರೂಪದ ಶ್ರೀಹರಿ ಶ್ರೀರಾಮರೂಪದಿಂದ ಪರಾಜಿತನಾದ ಎಂಬಂತೆ ಕಂಡದ್ದು ಕೇವಲ ಅಸುರಮೋಹನ ಎಂದು ಸ್ಪಷ್ಟಪಡುವುದು. ಅದರಂತೆ ಮಹಾಭಾರತದಲ್ಲಿ ಭೀಷ್ಮರಿಂದ ಪರಾಜಿತನಾದ ಎಂಬುದು ಸಹ. ವಾಸ್ತವವಾಗಿ ಪರಶುರಾಮ ಭೀಷ್ಮರಿಂದ ಪರಾಜಿತನಾಗಿಯೇ ಇಲ್ಲ. ಅವರಿಬ್ಬರ ಮಧ್ಯೆ ಯುದ್ಧ ಪ್ರಾರಂಭವಾಗುವ ಮುನ್ನ, ಭೀಷ್ಮರು ಪರಶುರಾಮರ ಬಳಿಗೆ ತೆರಳಿ, ಪ್ರದಕ್ಷಿಣೆ ಹಾಕಿ ನಮಸ್ಕಾರವನ್ನು ಮಾಡಿ ಅಭಯವನ್ನು ಬೇಡುವರು. ಅದಕ್ಕಾಗಿ ಪರಶುರಾಮರೂಪದ ಶ್ರೀಹರಿಯು ಅವರನ್ನು ಸೋಲಿಸಲಿಲ್ಲ. ನಿಜಕ್ಕೂ ವಶನಾದದ್ದು ಭೀಷ್ಮರ ಪರಾಕ್ರಮಕ್ಕಲ್ಲ, ಅವರ ಭಕ್ತಿಗೆ ಮಾತ್ರ ಎಂದು ಭಾವ. ಇದರಿಂದ ಪರಮಾತ್ಮನು ಭಕ್ತರ ವಶವರ್ತಿಯಂತೆ ನಡೆದುಕೊಳ್ಳುವುದು ಕೇವಲ ಭಕ್ತವಾತ್ಸಲ್ಯದಿಂದಲೇ[೧] ಹೊರತು, ಅಶಕ್ತಿಯಿಂದಲ್ಲ ಎಂದು ತಿಳಿಯಬೇಕು. ಇದು ಜಿಂತತೇಸ್ತೋತ್ರದ ಸಾರಸರ್ವಸ್ವವೆನ್ನಿಸುವ ವಿವರ. ವೃಕಾಸುರನಿಗೆ ವರ ನೀಡಿದ್ದ ರುದ್ರದೇವರು, ಅವನು ಅವರು ನೀಡಿದ ವರವನ್ನು ಪರೀಕ್ಷಿಸಲೆಂದು ಅವರ ತಲೆಯ ಮೇಲೆಯೇ ಕೈ ಇಡಲು ಹೊರಟಾಗ, ಸಂಕಟಕ್ಕೊಳಗಾಗಿ ಶ್ರೀಹರಿಯನ್ನು ಮೊರೆ ಹೋಗಿ, ಬಿಡಗಡೆಯನ್ನು ಕಂಡ ವಿವರ ಶ್ರೀಮದ್ಭಾಗವತಾದಿಗಳಲ್ಲಿ ಪ್ರಸಿದ್ಧವಾದುದು. ಅದರಂತೆ ದುರ್ವಾಸರು ಹಂಸಡಿಬಿಕರು ತಮಗೆ ಬಗೆಬಗೆಯ ಕೆಡುಕನ್ನು ಮಾಡಿದರೂ, ಅವರಿಗೆ ವರ ನೀಡಿದವರು ತಾವೇ ಆದ್ದರಿಂದ ಹತಾಶರಾಗಿ ಕೊನೆಗೆ ಶ್ರೀಕೃಷ್ಣನಿಂದ ಅಂತಹ ಸಂಕಟದಿಂದ ಪಾರಾದರು ಎಂಬ ಹರಿವಂಶದ ವಿವರವು ಸಹ ಗಮನಾರ್ಹ.

೫. ಅವನು ಸಕಲವನ್ನು ಮಾಡುವವನು. ಅವನು ಸರ್ವಜ್ಞ ಹಾಗೂ ಸರ್ವಶಕ್ತ ಎಂದು ಭಾವ. ಆದ್ದರಿಂದ ಅವನು ಯಾರಿಂದಲೂ ಮಾಡಲ್ಪಡದವನು; ಎಂದರೆ ಸೃಷ್ಟಿಸಲ್ಪಡದವನು ಎಂದರ್ಥ. ದಶರಥ-ಕೌಸಲ್ಯೆ, ವಸುದೇವ-ದೇವಕಿ ಮೊದಲಾದವರು ಅವನನ್ನು ತಪಸ್ಸಿನಿಂದ ಮೆಚ್ಚಿಸಿ ಅವನ ಅನುಗ್ರಹಕ್ಕೆ ಪಾತ್ರರಾಗಿ ಅವನ ಮಾತಾಪಿತೃಗಳೆನಿಸಿಕೊಂಡವರೇ ಹೊರತು ವಾಸ್ತವವಾಗಿ ಅವನಿಗೆ ಹುಟ್ಟು ಸರ್ವಥಾ ಇಲ್ಲ ಎಂದು ತಿಳಿಯಬೇಕು; ಶ್ರೀಹರಿಯದು ಸದಾ ಜ್ಞಾನಾನಂದಾದಿಮಯವಾದ ಅಪ್ರಾಕೃತಶರೀರವೇ ಹೊರತು, ಜೀವರಂತೆ ಪ್ರಾಕೃತಶರೀರವಲ್ಲ ಎಂದು ತಾತ್ಪರ್ಯ.

೬. ಅವನು ಇಂತಹ ಹಿರಿಮೆಯನ್ನು ಹೊಂದಲು ರಮಾಪತಿಯಾಗಿರುವುದೇ ಕಾರಣ. ಮಹಾಲಕ್ಷ್ಮಿಯು ಪ್ರಕೃತಿಗೆ ಅಭಿಮಾನಿದೇವತೆಯಾಗಿದ್ದು, ಅವಳಿಗೆ ಸರ್ವಥಾ ಪ್ರಾಕೃತದೇಹವಿಲ್ಲ. ಅಂತಹ ಮಹಾಲಕ್ಷ್ಮಿಗೇ ಪತಿಯಾಗಿರುವ ಶ್ರೀಹರಿಗೆ ಪ್ರಾಕೃತಶರೀರವಿಲ್ಲ ಎಂಬುದು ಕೈಮುತ್ಯಸಿದ್ಧ ಎಂಬ ವಿಶೇಷವಿವರವು ರಮಾಪತಿಂ ಎಂಬ ಪದದಿಂದ ಸೂಚಿತ.

---

೧. ಅಹಂ ಭಕ್ತಪರಾಧೀನೋ ಹ್ಯಸ್ವತಂತ್ರ ಇವ ದ್ವಿಜ ।...
ವಶೀಕುರ್ವಂತಿ ಮಾಂ ಭಕ್ತ್ಯಾ ಸತ್ಸ್ತ್ರಿಯಃ ಸತ್ಪತಿಂ ಯಥಾ ॥ – ಭಾಗವತ (೯/೬/೫೧,೫೫)

**ಅಗುಣಾಯ [೧]ಗುಣೋದ್ರೇಕಸ್ವರೂಪಾಯಾದಿಕಾರಿಣೇ ।**
**ವಿದಾರಿತಾರಿಸಂಘಾಯ ವಾಸುದೇವಾಯ ತೇ ನಮಃ ॥ ೬ ॥**

**ಪ** : ಅಗುಣಾಯ, ಗುಣೋದ್ರೇಕಸ್ವರೂಪಾಯ, ಆದಿಕಾರಿಣೇ, ವಿದಾರಿತಾರಿಸಂಘಾಯ, ವಾಸುದೇವಾಯ, ತೇ, ನಮಃ ।

**ಅ** : ಅಗುಣಾಯ, ಗುಣೋದ್ರೇಕಸ್ವರೂಪಾಯ, ಆದಿಕಾರಿಣೇ, ವಿದಾರಿತಾರಿ-ಸಂಘಾಯ, ವಾಸುದೇವಾಯ, ತೇ, ನಮಃ ।

**ಪ್ರ.ಪ.** : **ಅಗುಣಾಯ** – ಪ್ರಾಕೃತಗುಣರಹಿತನಾದ; **ಗುಣೋದ್ರೇಕಸ್ವರೂಪಾಯ** – ಗುಣಪೂರ್ಣಸ್ವರೂಪನಾದ; **ಆದಿಕಾರಿಣೇ** – ಸರ್ವಕ್ಕೂ ಕಾರಣನಾದ; **ವಿದಾರಿತಾರಿ-ಸಂಘಾಯ** – ಶತ್ರುಗಳ ಗುಂಪನ್ನು ಸರ್ವನಾಶ ಮಾಡಿದ; **ವಾಸುದೇವಾಯ** – ವಾಸುದೇವನಾದ; **ತೇ** – ನಿನಗೆ; **ನಮಃ** – ನಮಸ್ಕಾರವು.

**ತ್ರಿಗುಣವರ್ಜಿತನಾದ ಸಹಜಗುಣಸಂಪನ್ನ ಶ್ರೀಬ್ರಹ್ಮದೇವಜನಕ ।**
**ಒಳಹೊರಗು ಇರುವಂಥ ಶತ್ರುಗಡಣವ ತರಿವ ಶ್ರೀವಾಸುದೇವ ನಮನಂ ॥ ೬ ॥**

**ಅನು : ಪ್ರಾಕೃತಗುಣರಹಿತನಾದ, ಗುಣಪೂರ್ಣಸ್ವರೂಪನಾದ, ಸರ್ವಕ್ಕೂ ಕಾರಣನಾದ, ಶತ್ರುಗಳ ಗುಂಪನ್ನು ಸರ್ವನಾಶ ಮಾಡುವ ವಾಸುದೇವನಾದ ನಿನಗೆ ನಮಸ್ಕಾರ.**

ವಿ : ೧. ಶ್ರೀಹರಿಯು ಏಕಕಾಲಕ್ಕೆ **ನಿರ್ಗುಣ** ಹಾಗೂ **ಸಗುಣ** ಎಂಬುದು ವಿಶೇಷ. ಮೇಲ್ನೋಟಕ್ಕೆ ನಿರ್ಗುಣ ಹಾಗೂ ಸಗುಣ ಎಂಬುದು ವ್ಯಾಹತ ಎಂಬಂತೆ ತೋರುವುದು. ನಿರ್ಗುಣ ಗುಣಪೂರ್ಣನಾಗಲು ಸಾಧ್ಯವಿಲ್ಲ; ಅದರಂತೆ ಗುಣಪೂರ್ಣನು ನಿರ್ಗುಣನಾಗಲು ಸಹ; ಆದರೆ ಶ್ರೀಹರಿಯ ವಿಷಯದಲ್ಲಿ ಇದು ಅಸತ್ಯವಾಗಿರದೆ ಸತ್ಯವೇ ಆಗಿದೆ ಎಂಬುದು ವಿಶೇಷ; ಅದು ಹೀಗೆ – ನಿರ್ಗುಣ ಎಂದರೆ ಜ್ಞಾನಾನಂದಾದಿಗುಣರಹಿತ ಎಂದರ್ಥವಲ್ಲ, ಪ್ರಕೃತಿಯ ಗುಣಗಳಾದ ಸತ್ವಗುಣ, ರಜೋಗುಣ ಹಾಗೂ ತಮೋಗುಣ ಎಂಬ ಮೂರುಗುಣಗಳಿಂದ ರಹಿತನಾದವನು ಎಂದರ್ಥ. ಅವನು ಸಗುಣ, ಗುಣಪೂರ್ಣ ಎಂಬುದಕ್ಕೆ ಜ್ಞಾನಾನಂದಾದಿ ಅನಂತಾನಂತಗುಣಗಣಪರಿಪೂರ್ಣ ಎಂದರ್ಥ. ಎಂದರೆ ಗುಣತ್ರಯ ಶೂನ್ಯ ಹಾಗೂ ಗುಣಪರಿಪೂರ್ಣ ಎಂದರ್ಥ. ಇದರಲ್ಲಿ ಯಾವ ವಿರೋಧವೂ ಸರ್ವಥಾ ಇಲ್ಲ.

---

೧. **ಅತ್ಯುದ್ರಿಕ್ತವಿದೋಷಸತ್ಸುಖಮಹಾಜ್ಞಾನೈಕತಾನಪ್ರಭಾ-**
ಸರ್ವಪ್ರಾಭವಶಕ್ತಿಭೋಗಬಲಸತ್ಸಾರಾತ್ಮದಿವ್ಯಾಕೃತಿಮ್ ।
ಸೃಷ್ಟಿಸ್ಥಾನನಿರೋಧನಿತ್ಯನಿಯತಿಜ್ಞಾನಪ್ರಕಾಶಾವೃತಿ-
ಧ್ವಾಂತಾಮೋಕ್ಷವಿಮೋಕ್ಷದಂ ಹರಿಮಜಂ ನಿತ್ಯಂ ಸದೋಪಾಸ್ಮಹೇ ॥ – ಛಾಂದೋಗ್ಯಭಾಷ್ಯ

೨. ಶತ್ರುಗಳ ಸಮುದಾಯವನ್ನು ಸಂಪೂರ್ಣವಾಗಿ ನಾಶಪಡಿಸಿದವನು ಎಂಬುದು ಶ್ರೀಹರಿಯ ಮತ್ತೊಂದು ಹಿರಿಮೆ. ಅವನು ಸಕಲ ಶತ್ರುಗಳನ್ನು ಗೆದ್ದವನು, ಸರ್ವಜಿತ್ ಆದವನು ಎಂದರ್ಥ. ಅವನಿಗೆ ಸೋಲದಿರುವ ಶತ್ರುಗಳೇ ಇಲ್ಲ ಎಂದರ್ಥ. ಈ ರೀತಿಯಾಗಿ ಸರ್ವಶತ್ರುಗಳನ್ನು ಗೆದ್ದವನಾದ್ದರಿಂದ ಅವನು ವಾಸುದೇವ ಎಂದು ಹೆಸರು. ವಾಸುದೇವ ಎಂದರೆ ಅರ್ಹರಿಗೆಲ್ಲ ಮೋಕ್ಷ ನೀಡುವವನು ಎಂದರ್ಥ. ಇತರರಿಗೆ ಬಿಡುಗಡೆ ನೀಡುವ ಅವನು ಶತ್ರುಗಳ ಬಂಧನಕ್ಕೆ ಹೇಗೆ ತಾನೇ ಗುರಿಯಾಗಲು ಸಾಧ್ಯ ಎಂದು ಭಾವ.

೩. ಶತ್ರುಗಳ ಗುಂಪನ್ನೇ ನಾಶಮಾಡುವವನು ಎಂಬುದಕ್ಕೆ ಶತ್ರುಗಳು ಅಸಂಖ್ಯವಾಗಿ ಏಕಕಾಲಕ್ಕೆ ಎದುರಿಸಿ ಬಂದರೂ, ಅವರನ್ನು ಸಂಪೂರ್ಣವಾಗಿ ಸದೆಬಡಿಯುವವನು ಎಂಬ ವಿಶೇಷಾರ್ಥ ಸೂಚಿತ. ಇದಕ್ಕೆ ೩೬ ಸಾವಿರ ಮಹೌಘ ಅಕ್ಷೋಹಿಣಿ ಸಂಖ್ಯೆಯ ರಾವಣನ ಮೂಲಬಲವನ್ನು ರಾಮ ಅಷ್ಟೇ ಸಂಖ್ಯೆಯ ರೂಪಗಳನ್ನು ಸ್ವೀಕರಿಸಿ, ಕ್ಷಣಮಾತ್ರದಲ್ಲಿ ನಾಶಮಾಡಿದ ರಾಮಾಯಣದ ಯುದ್ಧಕಾಂಡದ ವಿವರ ಶ್ರೇಷ್ಠ ನಿದರ್ಶನ. ಅದರಂತೆ ಕಾಲಯವನ, ಕಾರ್ತವೀರ್ಯಾರ್ಜುನ ಮೊದಲಾದವರನ್ನು ಅವರ ಅಪಾರಸೇನೆಯ ಸಮೇತವಾಗಿ ಕೃಷ್ಣ ಹಾಗೂ ಪರಶುರಾಮ ರೂಪಗಳಿಂದ ನಾಶಮಾಡಿದ ವಿವರಗಳೂ ಸಹ.

**[೧]ಆದಿದೇವಾಯ ದೇವಾನಾಂಪತಯೇ ಸಾದಿತಾರಯೇ ।**
**ಅನಾದ್ಯಜ್ಞಾನಪಾರಾಯ ನಮೋ ವರವರಾಯ ತೇ ॥ ೭ ॥**

**ಪ :** ಆದಿದೇವಾಯ, ದೇವಾನಾಮ್, ಪತಯೇ, ಸಾದಿತಾರಯೇ, ಅನಾದ್ಯ-ಜ್ಞಾನಪಾರಾಯ ನಮಃ, ವರವರಾಯ, ತೇ ।

**ಅ :** ಆದಿದೇವಾಯ, ದೇವಾನಾಮ್, ಪತಯೇ, ಸಾದಿತಾರಯೇ, ಅನಾದ್ಯ-ಜ್ಞಾನಪಾರಾಯ, ವರವರಾಯ, ತೇ, ನಮಃ ।

**ಪ್ರ.ಪ. : ಆದಿದೇವಾಯ** – ಆದಿದೇವನಾದ; **ದೇವಾನಾಮ್** – ದೇವತೆಗಳಿಗೆ; **ಪತಯೇ** – ಒಡೆಯನಾದ; **ಸಾದಿತಾರಯೇ** – ಶತ್ರುಗಳನ್ನು ಸದೆಬಡಿದ; **ಅನಾದ್ಯಜ್ಞಾನಪಾರಾಯ** – ಅನಾದಿಯಾದ ಅಜ್ಞಾನವನ್ನು ಪರಿಹರಿಸುವ, **ವರವರಾಯ** – ಶ್ರೇಷ್ಠರಿಗೂ ಶ್ರೇಷ್ಠನಾದ; **ತೇ** – ನಿನಗೆ; **ನಮಃ** – ನಮಸ್ಕಾರವು.

**ಆದಿದೇವನು ಆಗಿ ದಿವಿಜಪತಿ ಎಂದೆನಿಸಿ ಅರಿಗಳನು ತರಿವ ವೀರ ।**
**ಆದಿಯನೆ ಹೊಂದಿರದ ಅಜ್ಞಾನ ದಾಟಿಪನೆ ಶ್ರೇಷ್ಠರಿಗೂ ಶ್ರೇಷ್ಠ ನಮನಂ ॥ ೭ ॥**

---

೧. **ಆದಿದೇವಃ** ಪುರಂದರಃ, **ಆದಿದೇವೋ** ಮಹಾದೇವಃ – ವಿಷ್ಣುಸಹಸ್ರನಾಮ
**ತ್ವಮಾದಿದೇವಃ** । – ಗೀತಾ (೧೧/೩೨)

**ಅನು : ಆದಿದೇವನಾದ, ದೇವತೆಗಳಿಗೆ ಒಡೆಯನಾದ, ಶತ್ರುಗಳನ್ನು ಸದೆಬಡಿದ, ಅನಾದಿಯಾದ ಅಜ್ಞಾನವನ್ನು ಪರಿಹರಿಸುವ, ಶ್ರೇಷ್ಠರಿಗೂ ಶ್ರೇಷ್ಠನಾದ ನಿನಗೆ ನಮಸ್ಕಾರ.**

ವಿ : ೧. **ಆದಿದೇವ** ಎಂದರೆ ಆದಿಕಾಲದಿಂದಲೂ ದೇವನೇ ಆಗಿರುವವನು; ಎಲ್ಲ ದೇವತೆಗಳಿಗೂ ದೇವನಾದವನು ಎಂದರ್ಥ; ದೇವತೆಗಳಿಗೆ ಪತಿಯೆಂದರೆ ಅಂತರ್ನಿಯಾಮಕನಾದವನು. ಸರ್ವಶತ್ರುಗಳನ್ನು ಸದೆಬಡೆದವನು ಆದವನು ಎಂದು ಭಾವ.

೨. ಅನಾದಿಕಾಲದಿಂದ ತನ್ನ ಭಕ್ತರನ್ನು ಆವರಿಸಿರುವ ಅಜ್ಞಾನವನ್ನು ಪರಿಹರಿಸುವವನು. ಜೀವರಿಗೆ ಅನಾದಿಕಾಲದಿಂದ ಜ್ಞಾನ ನೀಡುವವನಾಗಿರುವವನು; ಇನ್ನು **ಅನ** ಎಂದರೆ ಮುಖ್ಯಪ್ರಾಣ; **ಆದ್ಯ** ಎಂದರೆ ಬ್ರಹ್ಮದೇವರು. ಅವರಿಬ್ಬರಿಗೂ ಸಹ ಜ್ಞಾನದಾಯಕ ಎಂದರ್ಥ. ಅದರಂತೆ **ಅನ** (ಮುಖ್ಯಪ್ರಾಣ) ಮೊದಲಾದ ಸಕಲರಿಗೂ ಸಹ ಯಥಾಯೋಗ್ಯವಾಗಿ ಅಜ್ಞಾನಾದಿಗಳ ನಾಶಕ ಎಂದೂ ಭಾವ.

೩. ಆದ್ದರಿಂದಲೇ ಅವನು ಶ್ರೇಷ್ಠರಿಗಿಂತ ಶ್ರೇಷ್ಠ; ಸರ್ವಶ್ರೇಷ್ಠ ಎಂದರ್ಥ. ವರರು ಎನ್ನಿಸಿದ ಬ್ರಹ್ಮಾದಿಗಳಿಂದಲೂ ಸಹ ವರ ಎಂದು ಭಾವ. ಅದರಂತೆ ಮೊದಲನೆಯ ಅಧ್ಯಾಯದ ಮೊದಲನೆಯ ಶ್ಲೋಕದಲ್ಲಿ ಬಂದಿರುವಂತೆ ವರದೇಶವರಪ್ರದ ಎಂದು ತಾತ್ಪರ್ಯ.

೪. **ನಮೋ ವರವರಾಯ** ಎಂಬುದನ್ನು **ಅವರವರಾಯ** ಎಂದು ಪದವಿಭಾಗ ಮಾಡಬಹುದು. ಆದರಿಂದ ಅವರರಿಂದಲೂ ಸಹ ವರ ಪಡೆಯುವವನಂತೆ ವರ್ತಿಸುವನು ಎಂಬ ಅರ್ಥವಿಶೇಷ ಸೂಚಿತವಾಗುವುದು: **'ವೃಣೋತ್ಯಸುರತೋ ವರಾನ್'** (ಮ.ಭಾ. ತಾ.ನಿ. ೨/೧೩೫).

**[೧]ಅಜಾಯ ಜನಯಿತ್ರೇಽಸ್ಯ[೨] [೩]ವಿಜಿತಾಖಿಲದಾನವ ।**
**ಅಜಾದಿಪೂಜ್ಯಪಾದಾಯ ನಮಸ್ತೇ ಗರುಡಧ್ವಜ[೪] ॥ ೮ ॥**

**ಪ :** ಅಜಾಯ, ಜನಯಿತ್ರೇ, ಅಸ್ಯ, ವಿಜಿತಾಖಿಲದಾನವ, ಅಜಾದಿಪೂಜ್ಯಪಾದಾಯ, ನಮಃ, ತೇ, ಗರುಡಧ್ವಜ ।

---

೧. **ಅಜಃ** ಸರ್ವೇಶ್ವರಃ ಸಿದ್ಧಃ **ಅಜೋ** ದುರ್ಮರ್ಷಣಃ **ಅಜೋ** ಮಹಾರ್ಹಃ - ವಿಷ್ಣುಸಹಸ್ರನಾಮ

೨. ಓಂ ಜನ್ಮಾದ್ಯಸ್ಯ ಯತಃ ಓಂ - ಬ್ರಹ್ಮಸೂತ್ರ (೧/೧/೨)

ಅಸ್ಯ ಶ್ರೀಬ್ರಹ್ಮರುದ್ರಪ್ರಭೃತಿಸುರನರದ್ವಿಶತ್ರಾತ್ಮಕಸ್ಯ । - ಭಾಗ.ತಾ.ನಿ.(೧/೧/೧)

೩. **ವಿಜಿತಾತ್ಮಾ** ವಿಧೇಯಾತ್ಮಾ ಸತ್ಕೀರ್ತಿಶ್ಛಿನ್ನಸಂಶಯಃ । - ವಿಷ್ಣುಸಹಸ್ರನಾಮ

೪. ಮಹರ್ದ್ಧಿರ್ಋದ್ಧೋ ವೃದ್ಧಾತ್ಮಾ ಮಹಾಕ್ಷೋ **ಗರುಡಧ್ವಜಃ** । - ವಿಷ್ಣುಸಹಸ್ರನಾಮ

**ಅ :** ವಿಜಿತಾಖಿಲದಾನವ, ಅಜಾದಿಪೂಜ್ಯಪಾದಾಯ, ಅಜಾಯ, ಅಸ್ಯ, ಜನಯಿತ್ರೇ, ಗರುಡಧ್ವಜ, ತೇ, ನಮಃ।

**ಪ್ರ.ಪ. : ವಿಜಿತಾಖಿಲದಾನವ** – ಸಕಲದಾನವರನ್ನು ಪರಾಭವಗೊಳಿಸಿದ; **ಅಜಾದಿ- ಪೂಜ್ಯಪಾದಾಯ** – ರಮಾಬ್ರಹ್ಮಾದಿಗಳಿಂದ ಪೂಜಿತ ಚರಣನಾದ; **ಅಜಾಯ** – ಹುಟ್ಟಿಲ್ಲದ; **ಅಸ್ಯ** – ಇದಕ್ಕೆಲ್ಲ; **ಜನಯಿತ್ರೇ** – ಸೃಷ್ಟಿಕರ್ತನಾದ; **ಗರುಡಧ್ವಜ** – ಗರುಡಧ್ವಜನಾದ; **ತೇ** – ನಿನಗೆ; **ನಮಃ** – ನಮಸ್ಕಾರವು.

**ಎಂದೆಂದು ಜನಿಸದಲೆ ಎಲ್ಲವನು ಸೃಜಿಸುವನೆ ದಾನವರ ಸದೆಯುವವನೆ।**
**ಬ್ರಹ್ಮಾದಿಸುರರೆಲ್ಲ ಮಣಿವಂಥ ಸಿರಿಚರಣ ಗರುಡಕೇತನನಿಗೆ ನಮನ ॥ ೮ ॥**

**ಅನು : ಸಕಲದಾನವರನ್ನು ಪರಾಭವಗೊಳಿಸಿದ, ರಮಾಬ್ರಹ್ಮಾದಿಗಳಿಂದ ಪೂಜಿತಚರಣನಾದ, ಹುಟ್ಟೇ ಇರದ, ಈ ಎಲ್ಲಕ್ಕೂ ಸೃಷ್ಟಿಕರ್ತನಾದ, ಗರುಡ-ಧ್ವಜನಾದ ನಿನಗೆ ನಮಸ್ಕಾರ.**

ವಿ : ೧. ಶ್ರೀಹರಿಯು **ಅಜ** ಎಂದರೆ ಎಂದೂ ಹುಟ್ಟಿಲ್ಲದವನು; ಅವನಿಗೆ ಹುಟ್ಟೇ ಇಲ್ಲವೆಂದ ಮೇಲೆ ಸಾವೂ ಇಲ್ಲವೆಂದರ್ಥ. ಇತರ ಎಲ್ಲರನ್ನು ಸಹ ಹುಟ್ಟಿಸುವ ತಂದೆಯೂ ಅವನೇ. ಹುಟ್ಟೇ ಇಲ್ಲದ ಅವನು ಇತರರ ಹುಟ್ಟಿಗೆ ಕಾರಣನಾಗಿರುವನು ಹಾಗೂ ಪ್ರೇರಕನಾಗಿರುವನು ಎಂದರ್ಥ; ಇದು ಒಂದು ರೀತಿಯಲ್ಲಿ ಜನಾರ್ದನ ಎಂಬ ಪದದ ಅರ್ಥವೇ ಆಗಿದೆ.

೨. **ಅಜಾ** ಎಂದರೆ ಮಹಾಲಕ್ಷ್ಮೀ, **ಅಜ** ಎಂದರೆ ಬ್ರಹ್ಮ; ಅವರೇ ಮೊದಲಾದವರಿಂದ ಶ್ರೀಹರಿಯು ಸದಾ ಪೂಜಿತಪಾದನು. ಆದ್ದರಿಂದ ಅವರೆಲ್ಲರಿಗಿಂತ ತುಂಬ ಶ್ರೇಷ್ಠನಾದವನು. ಗರುಡನು ಕಾಲದ ಅಭಿಮಾನಿ ದೇವತೆ. ಅಂತಹ ಗರುಡನನ್ನು ತನ್ನ ವಾಹನವನ್ನಾಗಿ ಮಾಡಿ ಕೊಂಡು ಅವನ ಮೇಲೇರಿ ಕುಳಿತವನು ಎಂದರೆ ಅವನು ಸರ್ವದಾ ಸರ್ವಕಾಲನಿಯಾಮಕ ಎಂದರ್ಥ. ಅದರಂತೆ ಛಂದೋಭಿಮಾನಿಯಾದ (**ಛಂದೋಮಯೇನ ಗರುಡೇನ ಸಮುಹ್ಯಮಾನಃ**. ಭಾಗವತ. ೮/೩/೨೯) ಗರುಡನಿಗೂ ಸ್ವಾಮಿ ಎಂಬ ವಿಶೇಷಾರ್ಥ ಗರುಡಧ್ವಜ ಎಂಬ ಶಬ್ದಕ್ಕೆ ಆಗುವುದು.

೩. ಶ್ರೀಹರಿಯು **ಅಖಿಲದಾನವ**ರನ್ನು ಸಹ ಅನಾಯಾಸದಿಂದ ನಾಶಮಾಡಿದವನು. **ವಿಜಿತ** ಎಂಬುದಕ್ಕೆ ವಿ ಎಂದರೆ ಗರುಡ ಎಂದು ಅರ್ಥವಿರುವುದರಿಂದ, ಗರುಡನ ಮೂಲಕವಾಗಿಯೇ ಜರಾಸಂಧಾದಿ ದಾನವರ ಸಕಲ ಸೈನ್ಯವನ್ನು ಸಹ ನಾಶಮಾಡಿದವನು ಎಂಬ ವಿಶೇಷಾಂಶ ಸೂಚಿತ (ಮ.ಭಾ.ತಾ.ನಿ. ೧೭/೫):

**ಪತತ್ರವಾಯುನಾಽಸ್ಯ ತೇ ನರೇಶ್ವರಾಃ ಪ್ರಪಾತಿತಾಃ ।**
**ಯದೀದೃಶಂ ಪತತ್ರಿಣೋ ಬಲಂ ಹರೇಃ ಕಿಮುಚ್ಯತೇ ॥**

೪. ಈ ಸ್ತೋತ್ರದ ಅನೇಕ ಶ್ಲೋಕಗಳಲ್ಲಿ 'ತೇ' ಎಂಬುದಾಗಿ (ನಾರಾಯಣಾಯ ತೇ, ವಾಸುದೇವಾಯ ತೇ, ವರವರಾಯ ತೇ ಇತ್ಯಾದಿ) ಬಂದಿದೆ. ಇಲ್ಲಿ ತೇ ಎಂದರೆ ನಿನಗೆ ಎಂದರ್ಥ. ಇದರಿಂದ ಶ್ರೀಮದಾಚಾರ್ಯರು ಶ್ರೀಹರಿಯನ್ನು ಪ್ರತ್ಯಕ್ಷವಾಗಿ ಕಾಣುತ್ತಲೇ ತೇ ಎಂಬುದಾಗಿ ಸ್ತೋತ್ರ ಮಾಡಿರುವರು ಎಂದಾಗುವುದು. ಇದರಿಂದ ಅವರು ನಿತ್ಯಭಗವದಪರೋಕ್ಷಿಗಳು, ಪ್ರಳಯಕಾಲದಲ್ಲೂ ಸಹ ಎಂಬ ವಿಶೇಷಾಂಶ ತಿಳಿಯುವುದು. ಇದರಿಂದ ಈ ಕೃತಿಯ ಇತರ ಸ್ತೋತ್ರಗಳಲ್ಲಿ ಹಾಗೂ ಅವರ ಇತರ ಕೃತಿಗಳಲ್ಲಿ ತೇ ಎಂಬುದಾಗಿ ಬಂದಿರುವ ಪ್ರತಿಸಂದರ್ಭದಲ್ಲೂ ಈ ವಿಶೇಷಾರ್ಥವನ್ನೇ ತಿಳಿಯಬೇಕು[೧].

**ಇಂದಿರಾಮಂದಸಾಂದ್ರಾಗ್ರ್ಯಕಟಾಕ್ಷಪ್ರೇಕ್ಷಿತಾತ್ಮನೇ ।**
**ಅಸ್ಮದಿಷ್ಟೈಕಕಾರ್ಯಾಯ ಪೂರ್ಣಾಯ ಹರಯೇ ನಮಃ ॥ ೯ ॥**

॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ದ್ವಾದಶಸ್ತೋತ್ರೇ ದ್ವಿತೀಯೋಽಧ್ಯಾಯಃ ॥

**ಪ** : ಇಂದಿರಾಮಂದಸಾಂದ್ರಾಗ್ರ್ಯಕಟಾಕ್ಷಪ್ರೇಕ್ಷಿತಾತ್ಮನೇ, ಅಸ್ಮದಿಷ್ಟೈಕಕಾರ್ಯಾಯ, ಪೂರ್ಣಾಯ, ಹರಯೇ, ನಮಃ ।

**ಅ** : ಇಂದಿರಾಮಂದಸಾಂದ್ರಾಗ್ರ್ಯಕಟಾಕ್ಷಪ್ರೇಕ್ಷಿತಾತ್ಮನೇ, ಅಸ್ಮದಿಷ್ಟೈಕಕಾರ್ಯಾಯ, ಪೂರ್ಣಾಯ, ಹರಯೇ, ನಮಃ ।

**ಪ್ರ.ಪ.** : **ಇಂದಿರಾಮಂದಸಾಂದ್ರಾಗ್ರ್ಯಕಟಾಕ್ಷಪ್ರೇಕ್ಷಿತಾತ್ಮನೇ** – ಮಹಾಲಕ್ಷ್ಮಿಯ ಪೂರ್ಣವಾದ, ನಿಬಿಡವಾದ, ಶ್ರೇಷ್ಠವಾದ, ಕುಡಿನೋಟದಿಂದ ದಿಟ್ಟಿಸಲ್ಪಡುವ ಸ್ವರೂಪವುಳ್ಳ; **ಅಸ್ಮದಿಷ್ಟೈಕಕಾರ್ಯಾಯ** – ನಮ್ಮ ಇಷ್ಟವನ್ನು ಪೂರೈಸುವ ಕಾರ್ಯವನ್ನು ಮಾತ್ರ ಹೊಂದಿರುವ; **ಪೂರ್ಣಾಯ** – ಪರಿಪೂರ್ಣನಾದ; **ಹರಯೇ** – ಶ್ರೀಹರಿಗೆ; **ನಮಃ** – ನಮಸ್ಕಾರವು.

**ಸಿರಿರಮೆಯು ಸಂತಸದ ಕುಡಿನೋಟದಿಂದೆಂದು ಕಾಣುತಿಹ ದಿವ್ಯರೂಪ ।**
**ಎಮ್ಮ ನಲಿಸುವುದೊಂದೆ ಕರ್ತವ್ಯವಾಗಿರುವ ಪರಿಪೂರ್ಣ ಹರಿಗೆ ನಮನಂ ॥ ೯ ॥**

॥ ದ್ವಾದಶಸ್ತೋತ್ರದ ಕನ್ನಡಪದ್ಯಾನುವಾದದಲ್ಲಿ ಎರಡನೆಯ ಅಧ್ಯಾಯ ಮುಕ್ತಾಯವಾಯಿತು ॥

---

೧. ಸ್ವೇನಾಪರೋಕ್ಷೀಕೃತಾಯೈವ ನಾರಾಯಣಾಯ ವಂದನಮಿದಂ ನ ತು ಅನ್ಯವತ್ ಪರೋಕ್ಷೀಕೃತಾಯೇತಿ ಸೂಚನಾಯ 'ತೇ ನಮಃ' ಇತ್ಯುಕ್ತಮ್ । ಪ್ರತ್ಯಗಾತ್ಮನಾ ಸ್ವಹೃದಿ ದೃಶ್ಯಮಾನಾಯ ತುಭ್ಯಂ ನಮಃ ಇತ್ಯರ್ಥಃ । –(ವಾ.– ಮ.ಭಾ.ತಾ.ನಿ. ಭಾವಪ್ರಕಾಶಿಕಾ)

**ಅನು : ಶ್ರೀಹರಿಯು ಮಹಾಲಕ್ಷ್ಮಿಯು ನಿಬಿಡವಾದ, ಶ್ರೇಷ್ಠವಾದ, ತುಂಬು ಸಂತಸದ ತನ್ನ ಕುಡಿನೋಟದಿಂದ ಸದಾ ಧ್ಯಾನಿಸುವ ದಿವ್ಯಸ್ವರೂಪನು; ನಮ್ಮ ಇಷ್ಟಾರ್ಥವನ್ನು ಪೂರೈಸುವುದೊಂದನ್ನೇ ಕಾರ್ಯವನ್ನಾಗಿ ಹೊಂದಿರುವವನು; ಸದಾ ಪರಿಪೂರ್ಣನು; ಅವನಿಗೆ ನಮಸ್ಕಾರವು.**

ವಿ : ೧. ಮಹಾಲಕ್ಷ್ಮಿಯ ಕಟಾಕ್ಷಕ್ಕಾಗಿ ಇಡೀ ಜಗತ್ತೇ ಹಾತೊರೆಯುವುದು; ಅಂತಹ ಮಹಾಲಕ್ಷ್ಮಿಯ ಕಟಾಕ್ಷ ಶ್ರೀಹರಿಯ ಕಟಾಕ್ಷಕ್ಕಾಗಿ ಹಾತೊರೆಯುವುದು. ಅಂತಹ ಮಹಾಲಕ್ಷ್ಮಿ ಜಗತ್ತಿನ ಒಡತಿಯಾದರೆ, ಶ್ರೀಹರಿ ಅವಳಿಗೆ ಒಡೆಯನಾಗಿರುವನು; ಆದ್ದರಿಂದ ಅವನು ಸರ್ವೋತ್ತಮ ಎಂದು ಭಾವ.

೨. ಶ್ರೀಹರಿಯು ಸ್ವಯಂ ಪೂರ್ಣನಾದ್ದರಿಂದ ಅವನಿಗೆ ಬರುವುದಾಲೀ, ಹೋಗುವು-ದಾಗಲೀ ಇಲ್ಲವೇ ಇಲ್ಲ. ಆದರೂ ಅವನು ಪ್ರತಿಯೊಂದು ಕಾರ್ಯವನ್ನು ಮಾಡುವುದು ಭಕ್ತರ ಅಭೀಷ್ಟಗಳನ್ನು ಪೂರೈಸಲು ಮಾತ್ರ. ಇದು ಅವನ ಅಪಾರ ಕಾರುಣ್ಯಕ್ಕೆ ನಿದರ್ಶನ ಎಂದರ್ಥ.

೩. ಅಂತಹ ಶ್ರೀಹರಿಯು ನಮ್ಮಿಂದ ಏನನ್ನೂ ಅಪೇಕ್ಷಿಸಲಾರನು; ಅವನಿಗೆ ಭಕ್ತಿಯಿಂದ ಶಿರಬಾಗಿ ನಮಸ್ಕರಿಸುವುದೊಂದೇ ಭಕ್ತಜನತೆಯ ಮುಖ್ಯ ಕಾರ್ಯ ಎಂದು ಭಾವ.

*****

## ೩. ತೃತೀಯಾಧ್ಯಾಯ (ಹರ್ಯಷ್ಟಕ)

**ಕುರು ಭುಂಕ್ಷ್ವ ಚ ಕರ್ಮ ನಿಜಂ [1]ನಿಯತಂ**
**ಹರಿಪಾದವಿನಮ್ರಧಿಯಾ ಸತತಮ್ ।**
**ಹರಿರೇವ [2]ಪರೋ ಹರಿರೇವ ಗುರು-**
**ರ್ಹರಿರೇವ [3]ಜಗತ್ಪಿತೃಮಾತೃಗತಿಃ ॥ ೧ ॥**

**ಪ :** ಕುರು, ಭುಂಕ್ಷ್ವ, ಚ, ಕರ್ಮ, ನಿಜಮ್, ನಿಯತಮ್, ಹರಿಪಾದವಿನಮ್ರಧಿಯಾ, ಸತತಮ್, ಹರಿಃ ಏವ, ಪರಃ, ಹರಿಃ, ಏವ, ಗುರುಃ, ಹರಿಃ, ಏವ, ಜಗತ್ಪಿತೃಮಾತೃಗತಿಃ

---

೧. ನಿಯತಂ ಕುರು ಕರ್ಮ ತ್ವಂ ಕರ್ಮ ಜ್ಯಾಯೋ ಹ್ಯಕರ್ಮಣಃ ।
ಶರೀರಯಾತ್ರಾಽಪಿ ಚ ತೇ ನ ಪ್ರಸಿದ್ಧ್ಯೇದಕರ್ಮಣಃ ॥ – ಗೀತಾ (೩/೮)
ಅತೋ ನಿಯತಂ ವರ್ಣಾಶ್ರಮೋಚಿತಂ ಕರ್ಮ ಕುರು ॥ – ಗೀತಾಭಾಷ್ಯ (೩/೮)
ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ । – ಗೀತಾ (೧೮/೪೬)
ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ । – ಗೀತಾ (೨/೪೭)

೨. ಸುವಿರುದ್ಧಸ್ವರೂಪತ್ವಾಜ್ಜೀವಾದನ್ಯತಮೋ ಹರಿಃ । – ಇತಿ ವಾಮನೇ (ಭಾಗ. ತಾ.ನಿ. ೭/೨/೩೮)
ತದ್ಗ್ರಂಥವಿರೋಧಾಚ್ಚ । ತಥಾಹಿ ಸ್ಕಾಂದೇ ಶೈವೇ-
'ಯದಂತರಂ ವ್ಯಾಘ್ರಹರೀಂದ್ರಯೋರ್ವನೇ ಯದಂತರಂ ಮೇರುಗಿರೀಂದ್ರವಿಂಧ್ಯಯೋಃ ।
ಯದಂತರಂ ಸೂರ್ಯಸುರೇಡ್ಯಬಿಂಬಯೋಸ್ತದಂತರಂ ರುದ್ರಮಹೇಂದ್ರಯೋರಪಿ ॥
ಯದಂತರಂ ಸಿಂಹಗಜೇಂದ್ರಯೋರ್ವನೇ ಯದಂತರಂ ಸೂರ್ಯಶಶಾಂಕಯೋರ್ದಿವಿ ।
ಯದಂತರಂ ಜಾಹ್ನವಿಸೂರ್ಯಕನ್ಯಯೋಸ್ತದಂತರಂ ಬ್ರಹ್ಮಗಿರೀಶಯೋರಪಿ ॥
ಯದಂತರಂ ಪ್ರಲಯಜವಾರಿವಿಪ್ರುಷೋರ್ಯದಂತರಂ ಸ್ತಂಬಹಿರಣ್ಯಗರ್ಭಯೋಃ ।
ಸ್ಫುಲಿಂಗಸಂವರ್ತಕಯೋರ್ಯದಂತರಂ ತದಂತರಂ ವಿಷ್ಣುಹಿರಣ್ಯಗರ್ಭಯೋಃ ॥
ಅನಂತತ್ವಾನ್ಮಹಾವಿಷ್ಣೋಸ್ತದಂತರಮನಂತಕಮ್ ।
ಮಾಹಾತ್ಮ್ಯಸೂಚನಾರ್ಥಾಯ ಹ್ಯುದಾಹರಣಮೀರಿತಮ್ ॥
ತತ್ಸಮೋಽಭ್ಯಧಿಕೋ ವಾಽಪಿ ನಾಸ್ತಿ ಕಶ್ಚಿತ್ ಕದಾಚನ ।
ಏತೇನ ಸತ್ಯವಾಕ್ಯೇನ ತಮೇವ ಪ್ರವಿಶಾಮ್ಯಹಮ್' ॥ – ಗೀತಾಭಾಷ್ಯ (೨/೨೪)

**'ಅಲ್ಪಶಕ್ತಿರಸಾರ್ವಜ್ಞ್ಯಂ ಪಾರತಂತ್ರ್ಯಮಪೂರ್ಣತಾ ।**
**ಉಪಜೀವಕತ್ವಂ ಜೀವತ್ವಮೀಶತ್ವಂ ತದ್ವಿಪರ್ಯಯಃ ।**
**ಸ್ವಾಭಾವಿಕಂ ತಯೋರೇತನ್ನಾನ್ಯಥಾ ಸ್ಯಾತ್ ಕಥಂಚನ ।**
**ವದಂತಿ ಶಾಶ್ವತಾವೇತಾವತ ಏವ ಮಹಾಜನಾಃ' ಇತಿ ಮಹಾವಿಷ್ಣುಪುರಾಣೇ ।**
– ಗೀ.ತಾ. (೨/೨೦)

೩. **ಮಾತಾ ರಾಮೋ ಮತ್ಪಿತಾ ರಾಮಚಂದ್ರೋ ಸ್ವಾಮೀ ರಾಮೋ ಮತ್ಸಖಾ ರಾಮಚಂದ್ರಃ ।**
**ಸರ್ವಸ್ವಂ ಮೇ ರಾಮಚಂದ್ರೋ ದಯಾಲುರ್ನಾನ್ಯದ್ ದೈವಂ ನೈವ ಜಾನೇ ನ ಜಾನೇ ॥**
– ರಾಮರಕ್ಷಾಸ್ತೋತ್ರ

**ಅ :** ಹರಿಃ, ಏವ, ಪರಃ, ಹರಿಃ, ಏವ, ಗುರುಃ, ಹರಿಃ, ಏವ, ಜಗತ್ಪಿತೃಮಾತೃಗತಿಃ, ಹರಿಪಾದವಿನಮ್ರಧಿಯಾ, ನಿಜಮ್, ನಿಯತಮ್, ಕರ್ಮ, ಸತತಮ್, ಕುರು, ಚ, ಭುಂಕ್ಷ್ವ।

**ಪ್ರ.ಪ. : ಹರಿಃ** – ಹರಿಯು; **ಏವ** – ಒಬ್ಬನೇ; **ಪರಃ** – ಶ್ರೇಷ್ಠನು; **ಹರಿಃ** – ಹರಿಯು; **ಏವ** – ಒಬ್ಬನೇ; **ಗುರುಃ** – ಗುರುವು; **ಹರಿಃ** – ಹರಿಯು; **ಏವ** – ಒಬ್ಬನೇ, **ಜಗತ್ಪಿತೃಮಾತೃಗತಿಃ** – ಜಗತ್ತಿನ ತಂದೆ, ತಾಯಿ, ಆಶ್ರಯ; **ಹರಿಪಾದವಿನಮ್ರಧಿಯಾ** – ಹರಿಪಾದದಲ್ಲಿನಮ್ರವಾದ ಬುದ್ಧಿಯಿಂದ; **ನಿಜಮ್** – ನಿನಗೆ ವಿಹಿತವಾದ; **ನಿಯತಮ್** – ವರ್ಣಾಶ್ರಮೋಚಿತವಾದ; **ಕರ್ಮ** – ಕರ್ಮವನ್ನು; **ಸತತಮ್** – ಸದಾ; **ಕುರು** – ಮಾಡು ಹಾಗೂ ಮಾಡಿಸು; **ಚ** – ಹಾಗೂ; **ಭುಂಕ್ಷ್ವ** – ಫಲವನ್ನು ಅನುಭವಿಸು.

**ಮಾಡು ವಿಹಿತ ಕರ್ಮವನ್ನು ಹರಿಯ ಪಾದಕೆರಗುತ**
**ಉಣ್ಣು ಬರುವ ಫಲಗಳನ್ನು ಅವನ ಕರುಣವೆನ್ನುತ।**
**ಹರಿಯೆ ಪರನು ಹರಿಯೆ ಗುರುವು ಹರಿಯೆ ತಂದೆತಾಯಿಯು**
**ಹರಿಯೆ ಗತಿಯು ಲೋಕಕೆಲ್ಲ ಎಲ್ಲು ಆವ ಕಾಲಕು** ॥೧॥

**ಅನು : ಹರಿಯೇ ಸರ್ವೋತ್ತಮ, ಹರಿಯೇ ಗುರು, ಹರಿಯೇ ಜಗತ್ತಿನ ತಂದೆ, ತಾಯಿ ಹಾಗೂ ಆಶ್ರಯ; ಹರಿಪಾದದಲ್ಲಿ ನಮ್ರವಾದ ಬುದ್ಧಿಯಿಂದ ನಿನಗೆ ವಿಹಿತವಾದ ವರ್ಣಾಶ್ರಮೋಚಿತವಾದ ಕರ್ಮವನ್ನು ಸದಾ ಮಾಡು (ಮಾಡಿಸು) ಹಾಗೂ ಅವನು ನೀಡುವ ಫಲವನ್ನು ಅನುಭವಿಸು.**

ವಿ : ೧. ಪ್ರತಿಯೊಬ್ಬರಿಗೂ ಅವರ ಪಾಲಿಗೆ ವಿಹಿತವಾದ ಕರ್ತವ್ಯಕರ್ಮದ ಆಚರಣೆ ಕಡ್ಡಾಯವಾದುದು. ಅದಾಗಿ ಲಭಿಸುವ ಫಲವನ್ನು ಅರ್ಹತೆಯನ್ನು ಪಡೆಯುವುದು ಸದಾ ಇದ್ದೇ ಇರುವುದು. ಆದರೆ ಕರ್ಮಾಚರಣೆ ಮಾಡುವಾಗ ಹಾಗೂ ಅದರಿಂದ ಲಭಿಸುವ ಫಲವನು ಅನುಭವಿಸುವಾಗ ಹರಿಯ ಪಾದದಲ್ಲಿ ವಿನಮ್ರಭಾವ ಇರಲೇಬೇಕು.

೨. ಕರ್ಮಾಚರಣೆ ಹಾಗೂ ಫಲಾನುಭವ ವಿಹಿತವಾಗಿರುವಂತೆ ಅದೆಲ್ಲಕ್ಕೂ ಸ್ವಾಮಿಯಾದ ಶ್ರೀಹರಿಯಲ್ಲಿ ಭಕ್ತಿಭಾವ ಅಷ್ಟೇ ಮುಖ್ಯವಾದುದು. ಪ್ರತಿಯೊಬ್ಬರಿಗೂ ಅವರವರ ಯೋಗ್ಯತೆಗೆ ತಕ್ಕಂತೆ ಕರ್ಮವನ್ನು ವಿಧಿಸುವುದು ಅದಕ್ಕೆ ಉಚಿತವಾದ ಫಲವನ್ನು ನೀಡುವುದು ಶ್ರೀಹರಿಯೇ ಆಗಿರುವನು. ಇಲ್ಲಿ **ನಿಜಂ** ಎಂದರೆ ಅವರ ಸ್ವಭಾವಕ್ಕೆ ಅನುಗುಣವಾದ ಎಂದೂ, **ನಿಯತಂ** ಎಂದರೆ ಅವರವರ ವರ್ಣ ಹಾಗೂ ಆಶ್ರಮಗಳಿಗೆ ಅನುಗುಣವಾದ ಎಂದೂ ಅರ್ಥ.

೩. ಶ್ರೀಹರಿಯೇ ಸರ್ವೋತ್ತಮ; ಎಲ್ಲರಿಗೂ ಸನ್ಮಾರ್ಗವನ್ನು ತೋರಿಸುವ ಗುರುವು ಅವನೇ. ಈ ಜಗತ್ತಿನ ತಂದೆ, ತಾಯಿ, ಗತಿ ಮೊದಲಾಗಿ ಸರ್ವಸ್ವವೂ ಅವನೇ. ಶ್ರೇಷ್ಠ ವ್ಯಕ್ತಿಗಳಲ್ಲಿ ಗೌರವ, ತಂದೆ ತಾಯಿಗಳನ್ನು ಗೌರವಿಸಿ ಅವರ ಮಾತಿನಂತೆ ನಡೆದುಕೊಳ್ಳುವುದು. ಗುರುಗಳನ್ನು ಗೌರವಿಸಿ ಅವರಿಂದ ಯೋಗ್ಯವಾದ ಉಪದೇಶವನ್ನು ಪಡೆದುಕೊಳ್ಳುವುದು ಅದರಂತೆ ನಡೆದುಕೊಳ್ಳುವುದು ಶ್ರೇಯಸ್ಸಿಗೆ ಸಾಧನ. ಗುರು ಮೊದಲಾಗಿ ಎಲ್ಲವೂ ಶ್ರೀಹರಿಯೇ ಆಗಿರುವಾಗ ಅವನಲ್ಲಿ ಎಲ್ಲರಿಗಿಂತ ಹೆಚ್ಚಾದ ನಮ್ರತೆಯನ್ನು ಹೊಂದುವುದು ಅತ್ಯಂತ ಮುಖ್ಯ ಎಂದು ಭಾವ. ಹರಿಯೇ ಗುರು ಎಂದರೆ ಗುರುಗಳಲ್ಲಿ ಸನ್ನಿಹಿತನಾಗಿದ್ದು, ಉಪದೇಶ ನೀಡುವವನು ಅವನೇ ಎಂದರ್ಥ[೧].

೪. ಶ್ರೀಹರಿಯೇ **ಗುರು, ತಂದೆ, ತಾಯಿ** ಮೊದಲಾಗಿ ಎಲ್ಲವೂ ಆಗಿರುವನು ಎಂದರೆ ಗುರುಗಳಲ್ಲಿ ಸನ್ನಿಹಿತನಾಗಿದ್ದು ಜ್ಞಾನ ನೀಡುವವನು, ತಂದೆ ತಾಯಿಗಳಲ್ಲಿ ನೆಲೆಸಿದ್ದು ಜನ್ಮನೀಡಿ ಉಪಕರಿಸುವವನು ಆಗಿರುವನು ಎಂದರ್ಥ. ಮೇಲ್ನೋಟಕ್ಕೆ ಇತರರಿಂದ ಕಾರ್ಯಗಳು ನಡೆದಂತೆ ತೋರಿದರೂ ವಾಸ್ತವವಾಗಿ ಅಂತರ್ಯಾಮಿಯಾಗಿ ನೆಲೆಸಿ ಆ ಎಲ್ಲಾ ಕಾರ್ಯ ನಡೆಸುವವನು ಅವನೇ ಎಂದು ಭಾವ. ಒಂದು ರೀತಿಯಲ್ಲಿ **ಮಾತೃದೇವೋ ಭವ, ಪಿತೃದೇವೋ ಭವ, ಆಚಾರ್ಯದೇವೋ ಭವ** ಎಂಬ ಉಪನಿಷದ್ವಚನಗಳ ಭಾವವೂ ಅಗಿದೆ.

೫. ಇಲ್ಲಿ **ಕುರು** ಎಂಬುದಕ್ಕೆ **ಕಾರಯ** ಎಂದೂ ಅರ್ಥ; ನೀನು ಮಾಡು ಹಾಗೂ ನಿನ್ನ ಬಂಧುಗಳಿಂದ ಹಾಗೂ ಶಿಷ್ಯವರ್ಗದಿಂದ ಮಾಡಿಸು ಎಂದು ಭಾವ. ಶ್ರೀರಾಘವೇಂದ್ರಸ್ವಾಮಿಗಳ **ಕರಿಷ್ಯೇ ಕಾರಯಿಷ್ಯೇ ಚ** ಎಂಬ ಪ್ರಾತಃಸಂಕಲ್ಪಗದ್ಯದ ಮಾತಿನ ಹಿನ್ನೆಲೆಯಲ್ಲಿ ಈ ಅರ್ಥ ದೃಢಪಡುವುದು.

೬. ಇಲ್ಲಿ **ಪರಃ** ಎಂಬುದಕ್ಕೆ ಪೂರ್ಣ ಎಂದು, **ಪಾಲಕ** ಎಂದೂ ಅರ್ಥ. **ಪೂರ್ಣ** ಎಂದರೆ ಗುಣಪೂರ್ಣ, ಅನಂತಾನಂತಕಲ್ಯಾಣಗುಣಗಣಪರಿಪೂರ್ಣ ಎಂದು ಅರ್ಥ. ಪಾಲಕ ಎಂಬುದಕ್ಕೆ ರಕ್ಷಕ, ಅನಾದಿಕಾಲದಿಂದ ಅನಂತಕಾಲದವರೆಗೆ ರಕ್ಷಣೆ ನೀಡುವವನು ಎಂದರ್ಥ. **ಪರಃ** ಎಂದರೆ ಭಿನ್ನ ಎಂದೂ ಅರ್ಥ. ಇದರಿಂದ ಶ್ರೀಹರಿಯು ರಮಾಬ್ರಹ್ಮಾದಿಚೇತನ- ಗಳಿಗಿಂತಲೂ, ಸಕಲ ಚೇತನಗಳಿಗಿಂತಲೂ, ಸಕಲ ಜಡಗಳಿಗಿಂತಲೂ ಅತ್ಯಂತ ಭಿನ್ನನಾದವನು ಎಂದು ಭಾವ. ಶ್ರೀಹರಿಯು ಚೇತನನಾಗಿ ಜಡಗಳಿಂದ ಭಿನ್ನ. ಭಾವಪದಾರ್ಥವಾಗಿದ್ದು, ಅಭಾವಪದಾರ್ಥಗಳಿಗಿಂತ

---

೧. ಅಗಮ್ಯತ್ವಾತ್ ಹರಿಸ್ತಸ್ಮಿನ್ನಾವಿಷ್ಟೋ ಮುಕ್ತಿದೋ ಭವೇತ್ ।... - ಮ.ಭಾ.ತಾ.ನಿ.(೧/೧೨೪)
ಅಪ್ಯಚ್ಯುತೋ ಗುರುದ್ವಾರಾ ಪ್ರಸಾದಕೃದಹಂ ತ್ವಿತಿ । - ಮ.ಭಾ.ತಾ.ನಿ.(೨೮/೫೨)

ಭಿನ್ನ. ಸರ್ವತಂತ್ರಸ್ವತಂತ್ರನಾಗಿದ್ದು, ಅಸ್ವತಂತ್ರರಾದ ಇತರ ಸಕಲರಿಂದಲೂ ಭಿನ್ನ. **ಈಶಕೋಟಿಪ್ರವಿಷ್ಟನಾಗಿ** ಜೀವಜಡಗಳಿಂದ ಭಿನ್ನ ಎಂದು ಅರ್ಥ. ಸರ್ವತ್ರ ವ್ಯಾಪ್ತನಾಗಿ ಅಣುವಾದ ಜೀವರಿಂದ ಭಿನ್ನ. ಸ್ವತಂತ್ರನಾಗಿ ಅಸ್ವತಂತ್ರರಾದ ರಮಾಬ್ರಹ್ಮಾದಿಗಳಿಗಿಂತ ಭಿನ್ನ. **ದ್ವಾಸುಪರ್ಣಾ** ಇತ್ಯಾದಿ ಸಕಲ ಶ್ರುತಿಸ್ಮೃತಿಗಳ ವಚನದಿಂದ ತಿಳಿಯುವಂತೆಯೂ ಅವನು ಭಿನ್ನ. ಯಾವ ಉಪಾಧಿಯ ಕಾರಣವೂ ಇಲ್ಲದೇ ಸ್ವಾಭಾವಿಕವಾಗಿಯೇ [೧]ಭಿನ್ನ ಎಂದೂ ತಿಳಿಯಬೇಕು.

೭. ಶ್ರೀಹರಿಯು ಅನಂತಗುಣ, ಜೀವರು ಅಲ್ಪಗುಣರು; ಶ್ರೀಹರಿಯು ಸರ್ವಜ್ಞ, ಜೀವರು ಅಲ್ಪಜ್ಞರು; ಶ್ರೀಹರಿಯು ವ್ಯಾಪ್ತ, ಜೀವರು ಅಣುಗಳು; ಶ್ರೀಹರಿಯ ಒಂದೊಂದು ಗುಣವೂ ಅನಂತ; ಜೀವರ ಎಲ್ಲ ಗುಣಗಳು ಸೇರಿಯೂ ಅಲ್ಪ; ಶ್ರೀಹರಿಯು ಅಪ್ರಾಕೃತವಾದ ಜ್ಞಾನಾನಂದಮಯವಾದ ಶರೀರವುಳ್ಳವನು, ಜೀವರದು ಸಂಸಾರಾವಸ್ಥೆಯಲ್ಲಿ ಲಿಂಗ, ಅನಿರುದ್ಧ ಎಂಬ ಭೌತಿಕದೇಹಗಳನ್ನು ಹೊಂದಿದವರು. ಶ್ರೀಹರಿಗೆ ಕರ್ಮಬಂಧವಿಲ್ಲ; ಜೀವರು ಕರ್ಮದಿಂದ ಬದ್ಧರು - ಹೀಗೆ ಬಹುಬಗೆಯಲ್ಲಿ ಶ್ರೀಹರಿಯು ಇತರರಿಂದ ಅತ್ಯಂತಭಿನ್ನ ಎಂದು ಭಾವ.

**ನ ತತೋಽಸ್ತ್ಯಪರಂ ಜಗದೀಡ್ಯತಮಂ**
**ಪರಮಾತ್ ಪರತಃ [೨]ಪುರುಷೋತ್ತಮತಃ ।**
**ತದಲಂ ಬಹುಲೋಕವಿಚಿಂತನಯಾ**
**ಪ್ರವಣಂ ಕುರು ಮಾನಸಮೀಶಪದೇ ॥ ೨ ॥**

**ಪ :** ನ, ತತಃ, ಅಸ್ತಿ, ಅಪರಮ್, ಜಗತಿ, ಈಡ್ಯತಮಮ್, ಪರಮಾತ್, ಪರತಃ, ಪುರುಷೋತ್ತಮತಃ, ತತ್, ಅಲಮ್, ಬಹುಲೋಕವಿಚಿಂತನಯಾ (ಅಲಮ್), ಪ್ರವಣಮ್, ಕುರು, ಮಾನಸಮ್, ಈಶಪದೇ।

**ಅ :** ಪರಮಾತ್, ಪರತಃ, ಪುರುಷೋತ್ತಮತಃ, ಅಪರಮ್, ಈಡ್ಯತಮಮ್, ಜಗತಿ, ನ, ಅಸ್ತಿ, ತತ್, ಬಹುಲೋಕವಿಚಿಂತನಯಾ, ಅಲಮ್, ಈಶಪದೇ, ಮಾನಸಮ್, ಪ್ರವಣಮ್, ಕುರು ।

**ಪ್ರ.ಪ. : ಪರಮಾತ್** - ಅತ್ಯುತ್ತಮವಾದದ್ದಕ್ಕಿಂತಲೂ; **ಪರತಃ** - ಶ್ರೇಷ್ಠನಾದ; **ಪುರುಷೋತ್ತಮತಃ** - ಪುರುಷೋತ್ತಮನಾದ ಶ್ರೀಹರಿಗಿಂತ; **ಅಪರಮ್** - ಬೇರೆಯಾದ; **ಈಡ್ಯತಮಮ್** - ಅತ್ಯಂತ ಪೂಜ್ಯವಾದ ವಸ್ತು; **ಜಗತಿ** - ಜಗತ್ತಿನಲ್ಲಿ; **ನ ಅಸ್ತಿ** - ಇಲ್ಲವೇ

೧. ಯತ ಏವ ಜಾತ್ಯಾ ಅರ್ಥಾತ್ ಶ್ರುತೇಶ್ಚ ಗುಣತೋ ನಿಜರೂಪತಶ್ಚ। - ಮ.ಭಾ.ತಾ.ನಿ.(೧/೨೮)

೨. ನಾರಸಿಂಹವಪುಃ ಶ್ರೀಮಾನ್ ಕೇಶವಃ ಪುರುಷೋತ್ತಮಃ - ವಿಷ್ಣುಸಹಸ್ರನಾಮ

ಇಲ್ಲ; **ತತ್** – ಆದ್ದರಿಂದ; **ಬಹುಲೋಕವಿಚಿಂತನಯಾ** – ಅತಿಯಾದ ಲೌಕಿಕ ಚಿಂತನೆ; **ಅಲಮ್** – ಬೇಡ; **ಈಶಪದೇ** – ಶ್ರೀಹರಿಯ ಪಾದದಲ್ಲಿ; **ಮಾನಸಮ್** – ಮನಸ್ಸನ್ನು; **ಪ್ರವಣಮ್** – ಭಕ್ತಿಪೂರ್ವಕವಾಗಿ; **ಕುರು** – ಇರಿಸು.

**ಅವನಿಗಿಂತ ಪೂಜ್ಯತಮನು ಎಲ್ಲು ಇಲ್ಲ ಲೋಕದಿ**
**ಪರನು ಸರ್ವಜಗಕೆ ಅವನು ಸರ್ವಪುರುಷವೃಂದದಿ ।**
**ಲೋಕಚಿಂತೆಯನ್ನು ತೊರೆದು ನಿರುತ ಬದುಕು ಜೀವವೆ**
**ಹರಿಯ ಪದದಿ ಮನವನಿರಿಸಿ ಒಲಿಸು ನೀನು ಅವನನೆ ॥ ೨ ॥**

**ಅನು : ಅತ್ಯುತ್ತಮವಾದದ್ದಕ್ಕಿಂತಲೂ ಶ್ರೇಷ್ಠನಾದ ಪುರುಷೋತ್ತಮನಾದ ಶ್ರೀಹರಿಗಿಂತ ಬೇರೆಯಾದ, ಅತ್ಯಂತ ಪೂಜ್ಯವಾದ ವಸ್ತು ಜಗತ್ತಿನಲ್ಲಿ ಇಲ್ಲವೇ ಇಲ್ಲ, ಆದ್ದರಿಂದ ಅತಿಯಾದ ಲೌಕಿಕ ಚಿಂತನೆ ಬೇಡ, ಶ್ರೀಹರಿಯ ಪಾದದಲ್ಲಿ ಮನಸ್ಸನ್ನು ಭಕ್ತಿಪೂರ್ವಕವಾಗಿ ಇರಿಸು.**

ವಿ : ೧. ಅನೇಕರು ಶ್ರೇಷ್ಠರಾಗಿದ್ದಾಗ ಅವರಲ್ಲಿ ಯಾವ ಒಬ್ಬರನ್ನಾದರೂ ಆಶ್ರಯಿಸಬಹುದು. ಆದರೆ ಒಬ್ಬನೇ ಶ್ರೇಷ್ಠನಾಗಿದ್ದಾಗ ಅವನನ್ನು ಬಿಟ್ಟು ಬೇರೆಯವರನ್ನು ಆಶ್ರಯಿಸುವುದೂ ಸರಿಯೆನ್ನಿಸದು. ಶ್ರೀಹರಿಯು ಅಂತಹವನು; ಅವನು ಸರ್ವಕಾಲಕ್ಕೂ, ಸರ್ವರೀತಿಯಿಂದಲೂ, ಸರ್ವರಿಗಿಂತಲೂ ಮಿಗಿಲಾದವನು. ಆದ್ದರಿಂದ ಬೇರಾವುದನ್ನು ಚಿಂತಿಸದೆ ಸ್ವಾಮಿಯಾದ ಅವನ ಪಾದವನ್ನು ಶರಣು ಹೊಂದುವುದೇ ಶ್ರೇಯಸ್ಕರ ಎಂದು ಭಾವ.

೨. ಶ್ರೇಯಸ್ಸಿಗೆ ಸಾಧಕವೆನ್ನಿಸದ ಇತರ ವಿಷಯಗಳನ್ನು ನಿಷ್ಕಾರಣವಾಗಿ ಚಿಂತಿಸುವುದಕ್ಕಿಂತ ಸರ್ವಶ್ರೇಷ್ಠನಾದ ಶ್ರೀಹರಿಯನ್ನು ನಂಬುವುದೇ ಉಚಿತ. ಒಂದು ಪರೀಕ್ಷೆಯಲ್ಲಿ ಉತ್ತೀರ್ಣನಾಗಲು ಅದಕ್ಕೆ ವಿಹಿತವಾದ ಪಠ್ಯಪುಸ್ತಕಗಳನ್ನು ಸೂಕ್ತವಾದ ಮಾರ್ಗದರ್ಶನದಲ್ಲಿ ಅಧ್ಯಯನ ಮಾಡುವುದೊಂದೇ ಸರಿಯಾದ ಮಾರ್ಗ. ಪಠ್ಯಪುಸ್ತಕಗಳು ಒಂದೆರಡೂ, ನಾಲ್ಕಾರೂ, ಇರಬಹುದು ಅಷ್ಟನ್ನೂ ಮಾತ್ರ ಸರಿಯಾಗಿ ಅಭ್ಯಾಸ ಮಾಡಿದರೂ ಅವನು ಉತ್ತಮ ರೀತಿಯಲ್ಲಿ ಉತ್ತೀರ್ಣನಾಗಲು ಸಾಧ್ಯ. ಅದನ್ನು ಬಿಟ್ಟು ಇತರ ನೂರಾರು ಗ್ರಂಥಗಳನ್ನು ಅಧ್ಯಯನ ಮಾಡಿದರೂ ಉತ್ತೀರ್ಣವಾಗಲು ಸಾಧ್ಯವಿಲ್ಲ. ಇಲ್ಲೂ ಹಾಗೆ ಸರ್ವೋತ್ತಮನಾದ ಶ್ರೀಹರಿ ಒಬ್ಬನೇ ಆದರೂ ನಮ್ಮನ್ನು ಸಂಸಾರದ ಕಷ್ಟಕೋಟಲೆಗಳಿಂದ ಪಾರು ಮಾಡಲು ಸರ್ವಸಮರ್ಥನಾದವನು. ಬೇರಾರೂ ಅಂತಹ ವಿಶಿಷ್ಟ ಸಾಮರ್ಥ್ಯವನ್ನು ಹೊಂದಿಲ್ಲ; ಅದ್ದರಿಂದ ಅವನೊಬ್ಬನನ್ನೇ ಭಕ್ತಿಯಿಂದ ಆರಾಧಿಸುವುದು ಶ್ರೇಯಸ್ಸಿಗೆ ಸಾಧನೆ ಎಂದರ್ಥ.

೩. ಇಲ್ಲಿ ಶ್ರೀಹರಿಯನ್ನು ಆರಾಧಿಸುವುದೆಂದರೆ ಮನಸ್ಸನ್ನು ಸಂಪೂರ್ಣವಾಗಿ ಅವನಲ್ಲೇ ಕೇಂದ್ರೀಕರಿಸುವುದು ಎಂದರ್ಥ. ಎಂದರೆ ಸಕಲ ಜ್ಞಾನೇಂದ್ರಿಯಗಳಿಂದ ಏನನ್ನು ತಿಳಿಯುತ್ತಿದ್ದರು ಅದು ಶ್ರೀಹರಿಗೆ ಸಂಬಂಧಿಸಿದ ವಿಷಯವಾಗಿರಬೇಕು. ಅಂದರೆ ಕರ್ಮೇಂದ್ರಿಯಗಳಿಂದ ಏನೇ ಕಾರ್ಯವನ್ನು ಮಾಡುತ್ತಿದ್ದರೂ ಅದು ಅವನಿಗೆ ಪ್ರಿಯವಾದ ಕಾರ್ಯವಾಗಿರಬೇಕು ಎಂದು ಭಾವ. ಒಂದು ಗುರಿಯ ಕಡೆ ಏಕಾಗ್ರತೆ ಇಲ್ಲವಾದಲ್ಲಿ ಅದನ್ನು ಸಾಧಿಸುವುದು ಅಸಾಧ್ಯ. ಮೋಕ್ಷವನ್ನೇ ನೀಡುವಂತಹ ಶ್ರೀಹರಿಯಲ್ಲಿ ಅಂತಹ ಏಕಾಗ್ರತೆ ಹಾಗೂ ಭಕ್ತಿ ಅತಿ ಮುಖ್ಯ ಎಂದರ್ಥ.

೪. ಶ್ರೀಹರಿಯ ಚಿಂತನೆಯೊಂದೆ ಸದ್ಗತಿಗೆ ದಾರಿಯಾದ್ದರಿಂದ, ಅದೊಂದೆ ಸಾಕು. ಮನಸ್ಸನ್ನು ಸದಾಕಾಲ ಅವನಲ್ಲಿ ತೊಡಗಿಸುವುದೇ ಶ್ರೇಯಸ್ಸಿನ ಮಾರ್ಗ.

೫. **ಬಹುಲೋಕ** ಎಂಬುದಕ್ಕೆ ಸ್ವರ್ಗಾದಿ ಅನೇಕ ಲೋಕಗಳು ಎಂದು ಸಹ ಅರ್ಥವಾಗುವುದು. ಎಂದರೆ, ಸ್ವರ್ಗಲೋಕ ಮೊದಲಾದವುಗಳನ್ನು ಪಡೆಯಬೇಕು ಎಂದು ಹಾತೊರೆಯದೆ, ಸರ್ವಶ್ರೇಷ್ಠನಾದ ಶ್ರೀಹರಿಯ ಲೋಕವನ್ನು ಪಡೆಯಲೆಂದು ಅವನನ್ನೇ ಆಶ್ರಯಿಸಬೇಕು ಎಂದು ಭಾವ.

೬. **ಬಹುಲೋಕಚಿಂತನೆ** ಎಂಬುದಕ್ಕೆ ಇಲ್ಲಿ ಬಂದಿರುವಂತೆ ಸ್ವಕಪೋಲಕಲ್ಪಿತವಾಗಿ, ಬಗೆಬಗೆಯಾಗಿ ಚಿಂತಿಸುವ ನಿರ್ಮೂಲವಾದ ಚಿಂತನೆ ಎಂದರ್ಥ; ಅಂತಹ ಚಿಂತನೆಗಳು ಸಂಖ್ಯೆಯಲ್ಲಿ ಹೆಚ್ಚು ಹಾಗೂ ಉಪಯುಕ್ತತೆಯಲ್ಲಿ ಶೂನ್ಯ: **ಬಹುಶಾಖಾ ಹ್ಯನಂತಾಶ್ಚ ಬುದ್ಧಯೋ ಅವ್ಯವಸಾಯಿನಾಮ್**.

೭. ಮನಸ್ಸನ್ನು ಶ್ರೀಹರಿಯಲ್ಲಿ ತೊಡಗಿಸಬೇಕು ಎಂದರೆ ಮನಸ್ಸನ್ನು ಶ್ರೀಹರಿಯ ಚಿಂತನೆಗೇ ಮೀಸಲಿಡಬೇಕು ಎಂದು ಅರ್ಥ. ಬೃಹದಾರಣ್ಯಕೋಪನಿಷತ್ತಿನ ಸಪ್ತಾನ್ನಬ್ರಾಹ್ಮಣದಲ್ಲಿ ಬಂದಿರುವಂತೆ ಮನಸ್ಸಿನೊಂದಿಗೆ ಪ್ರಾಣ ಹಾಗೂ ಮಾತನ್ನು ಸಹ ಶ್ರೀಹರಿಯ ಚಿಂತನೆಗೆ ಮೀಸಲಿಡಬೇಕು ಎಂದು ತಿಳಿಯಬೇಕು.

೮. ಇಲ್ಲಿ ಮನಸ್ಸನ್ನು ಎಂಬುದಕ್ಕೆ ಅದರಿಂದ ನಿಯಂತ್ರಿಸಲ್ಪಡುವ ಐದು ಜ್ಞಾನೇಂದ್ರಿಯಗಳನ್ನು ಹಾಗೂ ಐದು ಕರ್ಮೇಂದ್ರಿಯಗಳನ್ನು ಸಹ ಶ್ರೀಹರಿಯ ವಿಷಯಕ್ಕೆ ಸಂಬಂಧಿಸಿದ ಚಿಂತನೆಯಲ್ಲಿಯೇ ತೊಡಗಿಸಬೇಕು ಎಂದೂ ಅರ್ಥ. ಎಂದರೆ ಕಣ್ಣಿಂದ ಶ್ರೀಹರಿಯ ರೂಪ, ಕಿವಿಯಿಂದ ಶ್ರೀಹರಿಯ ವಾರ್ತೆ, ಘ್ರಾಣದಿಂದ ಶ್ರೀಹರಿಯ ಮಾನ್ಯಗಂಧದ ಸೇವನೆ, ರಸನದಿಂದ ಶ್ರೀಹರಿಯ ನೈವೇದ್ಯದ ಸ್ವೀಕಾರ, ಸ್ಪರ್ಶೇಂದ್ರಿಯದಿಂದ ಶ್ರೀಹರಿಯ ಪಾದಸ್ಪರ್ಶ – ಹೀಗೆ ಜ್ಞಾನೇಂದ್ರಿಯಗಳಿಂದಲೂ, ಬಾಯಿಯಿಂದ ಶ್ರೀಹರಿಯ ಕೀರ್ತನೆ, ಕೈಯಿಂದ ಶ್ರೀಹರಿಯ ಅರ್ಚನೆ, ಕಾಲುಗಳಿಂದ

ಶ್ರೀಹರಿಯ ಕ್ಷೇತ್ರಗಳ ಯಾತ್ರೆ ಹೀಗೆ ಸಕಲೇಂದ್ರಿಯಗಳು ಸಹ ಶ್ರೀಹರಿಯ ಪ್ರಿಯವಾದ ಕಾರ್ಯಗಳಲ್ಲಿಯೇ ತೊಡಗಬೇಕು ಎಂಬುದು ಸಂದೇಶ.

೯. **ಈಶಪದೇ** ಎಂಬಲ್ಲಿ ಈಶ ಎಂದರೆ ಶ್ರೀಹರಿಯಾದ ವಿಷ್ಣು ಹಾಗೂ ಅವನ ವೇದವ್ಯಾಸ ಮೊದಲಾದ ಇತರ ರೂಪಗಳು. ಅವನ ಪದಗಳನ್ನು ಚಿಂತಿಸುವುದರಿಂದ ಮನಸ್ಸಿನಲ್ಲಿ ಕವಿದ ಅಜ್ಞಾನದ ಕತ್ತಲೆ ದೂರಾಗುವುದು ಎಂಬ ಫಲಶ್ರುತಿ ದ್ವಾದಶಸ್ತೋತ್ರದಲ್ಲಿದೆ: **ಹೃತ್ತಮಃ-ಶಮನೇಽರ್ಕಾಭಂ ಶ್ರೀಪತೇಃ ಪಾದಪಂಕಜಮ್**.

೧೦. **ಈಶಪದ** ಎಂದರೆ ವ್ಯಾಸಪದ; ವ್ಯಾಸಪದ ಎಂದರೆ ಶ್ರೀವೇದವ್ಯಾಸರೂಪದಿಂದ ರಚಿತವಾದ ಎಂದರೆ ಪದಾತ್ಮಕವಾದ, ಶ್ರೀಮದ್ಭಾಗವತಾದಿ ಶಾಸ್ತ್ರಪ್ರಪಂಚ ಎಂದರ್ಥ. ಅವುಗಳಲ್ಲಿ ಮನಸ್ಸನ್ನು ತೊಡಗಿಸುವುದು ಎಂದರೆ ಅವನ ಶ್ರವಣಮನನಾದಿರೂಪಸಾಧನೆಯಲ್ಲಿ ತೊಡಗಿಸಿಕೊಳ್ಳುವುದು ಎಂದರ್ಥ. ಪರಮಾತ್ಮನ ಪಾದವು ಕಮಲದಂತೆ ಇದ್ದರೆ, ಅವನ ಪದರೂಪವಾದ ಶಾಸ್ತ್ರಗಳಿಂದ ಪ್ರಮೇಯಪದ್ಮಗಳು ಹೊರಹೊಮ್ಮಿ ಸಾಧನೆಗೆ ಕಾರಣವಾಗುವವು ಎಂದರ್ಥ.

೧೧. ಇಲ್ಲಿ **ಪದೇ** ಎಂಬುದಕ್ಕೆ ಪಾದ ಎಂಬ ಅರ್ಥದೊಂದಿಗೆ ಅವನ ಸ್ವರೂಪ ಹಾಗೂ ಇತರ ಸಕಲ ಅವಯವಗಳು ಸಹ ಚಿಂತನೆಯ ವಿಷಯಗಳಾಗಬೇಕು ಎಂದು ಭಾವ. ಈ ಬಗ್ಗೆ ಹೆಚ್ಚಿನ ವಿವರಗಳು ಇದರ ಮೊದಲ ಅಧ್ಯಾಯದಲ್ಲಿಯೇ ಬಂದಿವೆ.

೧೨. ಮನಸ್ಸನ್ನು ಶ್ರೀಹರಿಯ ಪಾದದಲ್ಲಿ ತೊಡಗಿಸುವುದು ಎಂಬಲ್ಲಿ ಪದ ಎಂಬುದಕ್ಕೆ ಸ್ವರೂಪ ಎಂಬ ಅರ್ಥದ ಹಿನ್ನೆಲೆಯಲ್ಲಿ ಅವನ ಸ್ವರೂಪಚಿಂತನೆಯಲ್ಲಿ ತೊಡಗಿಸಿಕೊಳ್ಳುವುದು, ಧ್ಯಾನಮಾಡುವುದು ಎಂಬ ಅರ್ಥ ಸೂಚಿತವಾಗುವುದು. ಅದರಂತೆ ಸ್ತುತಿ ಹಾಗೂ ನಮಸ್ಕಾರ ಎಂದೂ ಅರ್ಥ: **ಮನೋವೃತ್ತೇಃ ತತ್ಪ್ರವಣತಾ ಹಿ ವಂದನಮ್** (ನ್ಯಾಯಸುಧಾ. ೧/೧/೧).

**ಯತತೋಽಪಿ ಹರೇಃ ಪದಸಂಸ್ಮರಣೇ**
**ಸಕಲಂ ಹ್ಯಘಮಾಶು ಲಯಂ ವ್ರಜತಿ ।**
**ಸ್ಮರತಸ್ತು ವಿಮುಕ್ತಿಪದಂ ಪರಮಂ**
**ಸ್ಫುಟಮೇಷ್ಯತಿ ತತ್ ಕಿಮಪಾಕ್ರಿಯತೇ** ॥ ೩ ॥

ಪ : ಯತತಃ, ಅಪಿ, ಹರೇಃ, ಪದಸಂಸ್ಮರಣೇ, ಸಕಲಮ್, ಹಿ, ಅಘಮ್, ಆಶು, ಲಯಮ್, ವ್ರಜತಿ, ಸ್ಮರತಃ, ತು, ವಿಮುಕ್ತಿಪದಮ್, ಪರಮಮ್, ಸ್ಫುಟಮ್, ಏಷ್ಯತಿ, ತತ್, ಕಿಮ್, ಅಪಾಕ್ರಿಯತೇ ।

**ಅ :** ಹರೇಃ, ಪದಸಂಸ್ಮರಣೇ, ಯತತಃ, ಅಪಿ, ಸಕಲಮ್, ಅಘಮ್, ಆಶು, ಲಯಮ್, ವ್ರಜತಿ, ಹಿ, ಸ್ಮರತಃ, ತು, ಪರಮಮ್, ವಿಮುಕ್ತಿಪದಮ್, ಸ್ಫುಟಮ್, ಏಷ್ಯತಿ, ತತ್, ಕಿಮ್, ಅಪಾಕ್ರಿಯತೇ।

**ಪ್ರ.ಪ. : ಹರೇಃ** – ಶ್ರೀಹರಿಯ; **ಪದಸಂಸ್ಮರಣೇ** – ಪಾದಸ್ಮರಣೆಯನ್ನು ಮಾಡಲು; **ಯತತಃ** – ಪ್ರಯತ್ನ ಮಾಡುವವನ; **ಸಕಲಮ್** – ಸಕಲ; **ಅಘಮ್** – ಪಾಪವೂ; **ಅಪಿ** – ಸಹ; **ಆಶು** – ಕೂಡಲೇ; **ಲಯಮ್** – ನಾಶವನ್ನು; **ವ್ರಜತಿ** – ಹೊಂದುವುದು; **ಹಿ** – ನಿಶ್ಚಯವಾಗಿ; **ಸ್ಮರತಃ ತು** – ಸ್ಮರಣೆ ಮಾಡುವವನಿಗಂತೂ; **ಪರಮಮ್** – ಸರ್ವಶ್ರೇಷ್ಠವಾದ; **ವಿಮುಕ್ತಿಪದಮ್** – ವಿಶೇಷಮುಕ್ತಿ ಪದವಿಯು; **ಸ್ಫುಟಮ್** – ನಿಶ್ಚಿತವಾಗಿ; **ಏಷ್ಯತಿ** – ದೊರೆಯುವುದು; **ತತ್** – ಆದ್ದರಿಂದ; **ಕಿಮ್** – ಏತಕ್ಕೋಸ್ಕರ; **ಅಪಾಕ್ರಿಯತೇ** – ಅದನ್ನು ತೊರೆಯಬೇಕು.

**ಹರಿಯ ಪದವ ನೆನೆಯುವಂಥ ಯತ್ನ ಮಾತ್ರದಿಂದಲೆ**
**ನೆಲೆಸಿ ಇರುವ ದುರಿತರಾಶಿ ಬೇಗ ಅಳಿದು ಪೋಪುದು ।**
**ಅವನ ಸ್ಮರಣೆ ಮಾಡಲಿನ್ನು ನಿತ್ಯ ಏಕಮನದಲಿ**
**ಖಚಿತ ಮುಕುತಿ ದೊರೆವುದಯ್ಯ ಅವನನೇಕೆ ತೊರೆವುದು ॥ ೩ ॥**

**ಅನು : ಶ್ರೀಹರಿಯ ಪಾದಸ್ಮರಣೆಯನ್ನು ಮಾಡಲು ಪ್ರಯತ್ನ ಮಾಡುವವನ ಸಕಲ ಪಾಪವೂ ಸಹ ನಿಶ್ಚಯವಾಗಿ ಕೂಡಲೇ ನಾಶವನ್ನು ಹೊಂದುವುದು; ಸ್ಮರಣೆ ಮಾಡುವವನಿಗಾದರೋ ಸರ್ವಶ್ರೇಷ್ಠವಾದ ವಿಶೇಷಮುಕ್ತಿಪದವಿಯು ನಿಶ್ಚಿತವಾಗಿ ದೊರೆಯುವುದು; ಆದ್ದರಿಂದ ಅದನ್ನು ತೊರೆಯುವುದೇತಕ್ಕೆ ?**

ವಿ : ೧. ಶ್ರೀಹರಿಯ ಸ್ಮರಣೆಯ ಮಹತ್ವ ಇದರಲ್ಲಿ ವಿಶಿಷ್ಟರೀತಿಯಲ್ಲಿ ನಿರೂಪಿತವಾಗಿದೆ.

೨. ಶ್ರೀಹರಿಯ ಪಾದಗಳ ಸ್ಮರಣೆ ಮಾಡಲು ತೊಡಗುವುದು ಸಹ ಅತ್ಯಂತ ಪುಣ್ಯಕರ. ಸ್ಮರಣೆ ಮಾಡುವುದಿರಲಿ ಅದಕ್ಕೆ ಪ್ರಯತ್ನ ಮಾಡುವುದು ಸಕಲ ಪಾಪಗಳ ಪರಿಹಾರಕ್ಕೆ ಸಾಧನ. ಅಂತಹ ಪ್ರಯತ್ನಕ್ಕೂ ಸಹ ಅವನು ಪ್ರಸನ್ನನಾಗಿ ಪೂರ್ಣಾನುಗ್ರಹವನ್ನು ಮಾಡುವನು. ಇನ್ನು ಸ್ಮರಣೆ ಮಾಡಿದರಂತೂ ಸಕಲ ಪಾಪ ಪರಿಹಾರದೊಂದಿಗೆ ಸರ್ವಶ್ರೇಷ್ಠವಾದ ವೈಕುಂಠದ ಪ್ರಾಪ್ತಿಯು ನಿಶ್ಚಿತ ಎಂದರ್ಥ[೧].

---

೧. ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ।
ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ॥ – ಗೀತಾ (೨/೪೦)
'ಪ್ರಾರಂಭಮಾತ್ರಮಿಚ್ಛಾ ವಾ ವಿಷ್ಣುಧರ್ಮೇ ನ ನಿಷ್ಫಲಾ।
ನ ಚಾನ್ಯಧರ್ಮಾಕರಣಾದ್ ದೋಷವಾನ್ ವಿಷ್ಣುಧರ್ಮಕೃತ್' ಇತ್ಯಾಗ್ನೇಯೇ।
– ಗೀ.ತಾ.(೨/೪೦)

೩. ಸ್ಮರಣೆಯ ಪ್ರಯತ್ನವು ಸಕಲ ಪಾಪಗಳ ಪರಿಹಾರಕವಾದರೆ, ಸ್ಮರಣೆಯಂತೂ ಮುಕ್ತಿಗೇ ಸಾಧನ ಎಂದು ಭಾವ. ಇತರ ವಿಷಯಗಳು ಹಾಗಲ್ಲ. ಅವುಗಳ ಬಗ್ಗೆ ಮಾಡುವ ಪ್ರಯತ್ನವೇ ವ್ಯರ್ಥವಾಗುವುದು. ಪ್ರಯತ್ನ ಮಾಡಿ ಸಾಧಿಸಿದರೂ ನಿರೀಕ್ಷಿತ ಫಲ ಸರ್ವಥಾ ವ್ಯರ್ಥ; ಆದರೆ ಜನರು ಸಾಮಾನ್ಯವಾಗಿ ಅಂತಹ ನಿಷ್ಫಲವಾದ ಕಾರ್ಯವನ್ನು ಮಾಡಿ ಹತಾಶರಾಗುವರು. ಆದರೆ ಶ್ರೀಹರಿಯ ಚಿಂತನೆಯ ಬಗ್ಗೆ ಮಾಡುವ ಪ್ರಯತ್ನ ಮಾತ್ರ ಎಂದೂ ವಿಫಲವಾಗದೆ, ಸಫಲವಾಗುವುದು ಎಂದು ಭಾವ.

೪. ರಾವಣ ಹಿರಣ್ಯಕಶಿಪು ಮೊದಲಾದವರು ಬ್ರಹ್ಮಾದಿದೇವತೆಗಳನ್ನು ಸುದೀರ್ಘಕಾಲ ಆರಾಧಿಸಿ ಅಪೇಕ್ಷಿತ ಫಲವನ್ನು ಪಡೆದುಕೊಂಡರೂ, ಮುಂದೆ ಅವರು ಕಂಡದ್ದು ದುರಂತವನ್ನೇ ಹೊರತು ಅಪೇಕ್ಷಿತ ಸಿದ್ಧಿಯನ್ನಲ್ಲ; ಆದರೆ ಧ್ರುವ, ಪ್ರಹ್ಲಾದ ಮೊದಲಾದವರು ಆರಾಧಿಸಿದ ಫಲವಾಗಿ ಸಮಸ್ತ ಅನಿಷ್ಟಗಳನ್ನು ಗೆದ್ದು ಲೋಕಮಾನ್ಯರೆನ್ನಿಸಿದರು; ಇಂದಿಗೂ ಅವರ ಸ್ಮರಣೆಯನ್ನು ಇಡೀ ಲೋಕವೇ ಮಾಡಿ ನಲಿಯುತ್ತಿದೆ; ಹರಿಭಕ್ತರಿಗೂ ಅನ್ಯದೇವತಾ ಭಕ್ತರಿಗೂ ಇರುವ ಅಂತರವೆಂದರೆ ಇದೇ. ಅದಕ್ಕಾಗಿ ಎಲ್ಲರೂ ಶ್ರೀಹರಿಯನ್ನೇ ಆರಾಧಿಸಬೇಕು ಎಂದು ಇದರ ಸಂದೇಶ.

೫. ಶ್ರೀಹರಿಯ ಆರಾಧನೆಯನ್ನು ಮಾಡುವುದು ಕಷ್ಟವೆಂಬ ಕಾರಣವನ್ನು ಮುಂದಿಟ್ಟು ಅವನಿಂದ ದೂರವಾಗುವುದು ಸಹ ಸರಿಯಲ್ಲ. ಅವನ ಆರಾಧನೆಯಷ್ಟು ಸುಲಭವಾಗಿ ಬೇರಾವ ದೇವತೆಯನ್ನು ಆರಾಧಿಸುವುದು ಸಾಧ್ಯವಿಲ್ಲ. ಶ್ರೀಹರಿಗೆ ಭಕ್ತಿ ಮುಖ್ಯವೇ ಹೊರತು ಇತರ ಪದಾರ್ಥಗಳಲ್ಲ. ಅವನು ಸ್ವಯಂ ಪರಿಪೂರ್ಣನಾದ್ದರಿಂದ ಬೇರೆ ಯಾರಿಂದಲೂ ಏನನ್ನೂ ಬಯಸುವುದಿಲ್ಲ. ಆದರೆ ಇತರ ದೇವತೆಗಳು ಹಾಗಲ್ಲ ಅವರ ಆರಾಧನೆಗೆ ವಿಶೇಷವಾದ ನಿಯಮಾವಳಿಯೇ ಇರುವುದು. ನೈವೇದ್ಯ ಪದಾರ್ಥಗಳು ಸಹ ಅವರ ನಿರೀಕ್ಷೆಯಂತೆ ಇರಬೇಕು. ಸ್ವಲ್ಪ ತಪ್ಪಿದರೂ ಸಹ ಅವರ ಆರಾಧನೆಯಿಂದ ಅಪಾಯ ನಿಶ್ಚಿತ. ಆದ್ದರಿಂದ ಶ್ರೀಹರಿಯನ್ನೇ ಆರಾಧಿಸಿ ಉದ್ಧಾರವಾಗಬೇಕು ಎಂದರ್ಥ.

೬. ಶ್ರೀಹರಿಯು ಸರ್ವತಂತ್ರಸ್ವತಂತ್ರನೂ, ಪರಿಪೂರ್ಣನೂ ಆಗಿರುವುದರಿಂದ, ಅವನ ಆರಾಧನೆ ತುಂಬಾ ಸುಲಭ. ಇತರರು ಅಸ್ವತಂತ್ರರು, ಅಪೂರ್ಣರು ಆಗಿರುವುದರಿಂದ, ಅವರ ಆರಾಧನೆ ಕಷ್ಟಕರ. ಈ ರೀತಿಯಲ್ಲಿ ವಿಚಾರ ಮಾಡಿದರೂ, ಶ್ರೀಹರಿಯ ಚಿಂತನೆಯೇ ಅತ್ಯಂತ ಸಾರ್ಥಕ ಎಂದು ಸ್ಫುಟಪಡುವುದು ಎಂದು ಭಾವ.

೭. ಇತರರನ್ನು ಮೆಚ್ಚಿಸುವುದು ಅಷ್ಟು ಸುಲಭವಲ್ಲ; ವಿಶೇಷಪ್ರಯತ್ನದಿಂದ ಮೆಚ್ಚಿಸಿದರೂ, ಅವರು ಸರ್ವಶ್ರೇಷ್ಠಪುರುಷಾರ್ಥವಾದ ಮುಕ್ತಿಯನ್ನು ಕೊಡಲು ಸಮರ್ಥರಲ್ಲ. ಶ್ರೀಹರಿಯು ನೀಡುವ ಫಲ ಶ್ರೇಷ್ಠಪುರುಷಾರ್ಥವಾದ ಮುಕ್ತಿ. ಆ ಕಾರಣದಿಂದಾಗಿಯೇ ಅವನ ಆರಾಧನೆ ವಿವೇಕಿಗಳಿಗೆ ಅತ್ಯಂತ ವಿಹಿತ ಎಂದು ಭಾವ.

**ಶೃಣುತಾಮಲಸತ್ಯವಚಃ[೧] ಪರಮಂ**
**ಶಪಥೇರಿತಮುಚ್ಛ್ರಿತಬಾಹುಯುಗಮ್ ।**
**ನ ಹರೇಃ ಪರಮೋ ನ ಹರೇಃ ಸದೃಶಃ**
**ಪರಮಃ ಸ ತು ಸರ್ವಚಿದಾತ್ಮಗಣಾತ್ ॥ ೪ ॥**

ಪ : ಶೃಣುತ, ಅಮಲಸತ್ಯವಚಃ, ಪರಮಮ್, ಶಪಥೇರಿತಮ್, ಉಚ್ಛ್ರಿತಬಾಹುಯುಗಮ್, ನ ಹರೇಃ ಪರಮಃ, ನ, ಹರೇಃ, ಸದೃಶಃ, ಪರಮಃ, ಸಃ, ತು, ಸರ್ವಚಿದಾತ್ಮಗಣಾತ್ ।

ಅ : ಶಪಥೇರಿತಮ್, ಉಚ್ಛ್ರಿತಬಾಹುಯುಗಮ್, ಪರಮಮ್, ಅಮಲಸತ್ಯವಚಃ, ಶೃಣುತ, ಹರೇಃ ಪರಮಃ, ನ, ಹರೇಃ, ಸದೃಶಃ, ನ, ಸಃ, ತು, ಸರ್ವಚಿದಾತ್ಮಗಣಾತ್, ಪರಮಃ ।

ಪ್ರ.ಪ. : **ಉಚ್ಛ್ರಿತಬಾಹುಯುಗಮ್** – ಎರಡೂ ತೋಳುಗಳನ್ನು ಮೇಲೆತ್ತಿ; **ಶಪಥೇರಿತಮ್** – ಶಪಥಪೂರ್ವಕವಾಗಿ ಹೇಳಲ್ಪಡುವ; **ಪರಮಮ್** – ಸರ್ವಶ್ರೇಷ್ಠವಾದ; **ಅಮಲಸತ್ಯವಚಃ** – ನಿರ್ಮಲವಾದ ಸತ್ಯವಚನವನ್ನು; **ಶೃಣುತ** – ಆಲಿಸಿರಿ; **ಹರೇಃ** – ಶ್ರೀಹರಿಗಿಂತ; **ಪರಮಃ** – ಶ್ರೇಷ್ಠನಾದವನು; ನ – ಇಲ್ಲ; **ಹರೇಃ** – ಶ್ರೀಹರಿಗೆ; **ಸದೃಶಃ** – ಸಮನಾದವನು; ನ – ಇಲ್ಲ; **ಸಃ** – ಅವನು; **ತು** – ಆದರೂ; **ಸರ್ವಚಿದಾತ್ಮಗಣಾತ್** – ಸಕಲ ಜಡಚೇತನಗಳ ಸಮುದಾಯಕ್ಕಿಂತ; **ಪರಮಃ** – ಶ್ರೇಷ್ಠನಾದವನು.

**ಕಿವಿಯನಿತ್ತು ಕೇಳಿರೆಲ್ಲ ಸತ್ಯ ವಿಮಲವಚನವ**
**ಎರಡು ತೋಳನೆತ್ತಿ ಹೇಳ್ವೆ ನಿತ್ಯ ಶಪಥಪೂರ್ವಕ ।**
**ಹರಿಯಗಿಂತ ಹಿರಿಯನಿಲ್ಲ ಸಮನು ಕೂಡ ಇಲ್ಲವು**
**ಅವನು ಎಂದು ಪೂಜ್ಯತಮನು ಸರ್ವಪ್ರಾಣಿಲೋಕಕು ॥ ೪ ॥**

**ಅನು : ಎರಡೂ ತೋಳುಗಳನ್ನು ಮೇಲೆತ್ತಿ ಶಪಥಪೂರ್ವಕವಾಗಿ ಹೇಳಲ್ಪಡುವ ಸರ್ವಶ್ರೇಷ್ಠವಾದ, ನಿರ್ಮಲವಾದ ಸತ್ಯವಚನವನ್ನು ಆಲಿಸಿರಿ; ಶ್ರೀಹರಿಗಿಂತ ಶ್ರೇಷ್ಠನಾದವನು ಇಲ್ಲ, ಸಮನಾದವನು ಇಲ್ಲ, ಅವನು ಸಕಲ ಜಡಚೇತನಗಳ ಸಮುದಾಯಕ್ಕಿಂತ ಶ್ರೇಷ್ಠನಾದವನು.**

---

೧. ಸತ್ಯಂ ಪ್ರಾಣಸ್ತಥಾ ಶ್ರೇಷ್ಠ – ತೈತ್ತಿರೀಯಭಾಷ್ಯ
'ಸದೇವ ಸತ್ಯಮಿತ್ಯುಕ್ತಂ ಸತ್ಯೋ ವಾಯುರುದಾಹೃತಃ । – ಐತರೇಯಭಾಷ್ಯ
ಸರ್ವಸಾಧುಗುಣತ್ವಾತ್ ತು ವಾಯುಃ ಸತ್ಯ ಇತೀರ್ಯತೇ । – ಐತರೇಯಭಾಷ್ಯ

ವಿ: ೧. ಶ್ರೀಹರಿಯು ಸರ್ವೋತ್ತಮನೆಂದು ಶಪಥಪೂರ್ವಕವಾಗಿ ಇಲ್ಲಿ ಹೇಳಲಾಗಿದೆ.

೨. ಸಾಮಾನ್ಯವಾಗಿ ಸಂಬಂಧಿಸಿದವರು ಒಂದು ಮಾತನ್ನು ಹೇಳಿದರೆ ಅದಕ್ಕೆ ತುಂಬ ಮಹತ್ವವಿರುವುದು. ಅದು ಸತ್ಯ ಎಂಬುದಾಗಿ ಹೇಳಿದರಂತೂ ಅದರ ಮಹತ್ವ ಮತ್ತಷ್ಟು ಹೆಚ್ಚುವುದು. ಶ್ರೇಷ್ಠ ಎಂದರೆ ಮತ್ತಷ್ಟು ಆಲಿಸಿರಿ ಎಂದು ಹೇಳಿದಾಗ ಇನ್ನೂ ಹೆಚ್ಚು ಮಹತ್ವ. ಶಪಥಪೂರ್ವಕ ಎಂದಾದ ಮತ್ತಷ್ಟು ಮಹತ್ವ. ಎರಡು ತೋಳುಗಳೆತ್ತಿ ಹೇಳುವೆ ಎಂದಾಗ ಅದರ ಮಹತ್ವಕ್ಕೆ ಸಾಟಿಯೇ ಇರದು. ಇದು ಅಂತಹ ಮಹತ್ವಪೂರ್ವಕವಾದ ಕಳಕಳಿಯ ಮಾತಾಗಿದೆ ಎಂದರ್ಥ.

೩. **ಶ್ರುಣುತ** ಎಂಬುದಕ್ಕೆ ಕೇಳಿರಿ ಹಾಗೂ ಅದರಂತೆ ಅನುಷ್ಠಾನ ಮಾಡಿರಿ ಎಂದು ಅರ್ಥ: **ಶ್ರುತ್ವಾನುಷ್ಠಾನಂ ಕುರು** (ಗೀತಾವಿವೃತಿ). **ಶ್ರುಣುತ** ಎಂಬುದಕ್ಕೆ ಶ್ರವಣಭಕ್ತಿ ಎಂದರ್ಥ. ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ. ಸಖ್ಯ ಹಾಗೂ ಆತ್ಮನಿವೇದನರೂಪವಾದ [೧]ನವವಿಧಭಕ್ತಿಯನ್ನು ಶ್ರೀಹರಿಯಲ್ಲಿ ಮಾಡಬೇಕು ಎಂದರ್ಥ.

೪. **ಅಮಲ - ಮಲ** ಎಂದರೆ ದೋಷ; **ನಿರ್ಮಲ** ಎಂದರೆ ದೋಷರಹಿತವಾದ; ಅಪ್ರಾಮಾಣಿಕತ್ವ ಹಾಗೂ ಪ್ರಮಾಣವಿರುದ್ಧತ್ವರೂಪದೋಷರಹಿತವಾದ ಎಂದು ಭಾವ.

೫. **ಸತ್ಯ** ಎಂದರೆ ಯಥಾರ್ಥಜ್ಞಾನಪೂರ್ವಕವಾದ ನಡತೆ ಎಂದರ್ಥ: **ಋತಂ ಯಥಾರ್ಥವಿಜ್ಞಾನಂ ಸತ್ಯಂ ತತ್ಪೂರ್ವಿಕಾ ಕೃತಿಃ. ಸತ್ಯವಚನ** ಎಂಬುದಕ್ಕೆ ಸತ್ಯವಾದ ಮಾತು ಎಂಬ ಅರ್ಥದಂತೆ, **ಸತ್ಯಂ ಮೀಮಾಂಸಾ** (ತಲವಕಾರಭಾಷ್ಯ) ಎಂಬ ಮಾತಿನಿಂದ ಬ್ರಹ್ಮಮೀಮಾಂಸೆಯಿಂದ ಯುಕ್ತವಾದ ಮಾತು ಎಂಬ ವಿಶೇಷಾರ್ಥವೂ ವಿಹಿತ. ಅದರಂತೆ **ಸತ್ಯಃ** ಎಂಬುದು ಮಹಾವಿಷ್ಣುವಿನ ನಾಮಗಳಲ್ಲಿ ಒಂದು (**ಸತ್ಯಃ ಸಮಾತ್ಮಾ ಸಮ್ಮಿತಃ ಸಮಃ** - ವಿಷ್ಣುಸಹಸ್ರನಾಮ). ಸತ್ಯವಚನ ಎಂಬುದಕ್ಕೆ ವೇದವ್ಯಾಸರೂಪದಿಂದ ತಿಳಿಸಿರುವ ವಚನ ಎಂದರ್ಥ: **ಸತ್ಯಂ ಸತ್ಯಂ ಪುನಃ ಸತ್ಯಮದ್ಧೃತ್ಯ ಭುಜಮುಚ್ಯತೇ. ವೇದಶಾಸ್ತ್ರಾತ್ ಪರಂ ನಾಸ್ತಿ ನ ದೈವಂ ಕೇಶವಾತ್ ಪರಮ್** (ಹರಿವಂಶ). ಇಲ್ಲಿಯೂ ಸಹ **ಸತ್ಯಂ ಸತ್ಯಂ ಸತ್ಯಂ** ಎಂದು ಮೂರು ಬಾರಿ ಬಂದಿರುವುದು ಅದು ಪ್ರತ್ಯಕ್ಷ, ಅನುಮಾನ ಹಾಗೂ ಆಗಮ ಎಂಬ ಪ್ರಮಾಣತ್ರಯದಿಂದ ಸಿದ್ಧವಾದ ಹಾಗೂ ಮೀಮಾಂಸಾತ್ರಯದಿಂದ ಸಿದ್ಧವಾದ ಪರಮಸತ್ಯ ಎಂದರ್ಥ; ಆದ್ದರಿಂದ ಇದು ಪೂರ್ಣಪ್ರಮಾಣ ಎನ್ನಿಸುವುದು.

೬. **ಪರಮಂ - ಪರ** ಎಂದರೆ ಶ್ರೇಷ್ಠ; **ಮಾ** ಎಂದರೆ ವಿದ್ಯೆ; ಪರವಿದ್ಯೆ ಎಂದರೆ ಬ್ರಹ್ಮಸೂತ್ರ. ಬ್ರಹ್ಮಸೂತ್ರದಿಂದ ನಿರ್ಣಯಿಸಲ್ಪಟ್ಟ ಸರ್ವಶ್ರೇಷ್ಠವಾದ ವಚನ ಎಂದರ್ಥ.

---

೧. ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಮ್ ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಮ್ ॥ -ಭಾಗವತ (೭/೫/೨೩)

೭. ಇಲ್ಲಿ **ಸತ್ಯವಚನ** ಎಂಬುದಕ್ಕೆ ಸತ್ಯಲೋಕಾಧಿಪತಿಯಾದ ಮುಖ್ಯಪ್ರಾಣನ ಅವತಾರರಾದ ತಮ್ಮ ವಚನ ಎಂದೂ ಅರ್ಥ. ಅವರು ಅಮಲ; ಅಜ್ಞಾನಾದಿದೋಷರಹಿತರು ಎಂಬುದು ಸಹ ಸೂಚಿತ.

೮. ಶ್ರೀಹರಿಯು ಸಕಲ ಚೇತನರಿಗಿಂತಲೂ ಮಿಗಿಲಾದ ಸರ್ವ ಶ್ರೇಷ್ಠವಾದ ಚೇತನ. ಎಂದರೆ ಸರ್ವೋತ್ತಮ ದೇವತೆ ಎಂಬುದು ಆ ಸತ್ಯವಚನ.

೯. ಇದು ಹರಿವಂಶ, ಮಹಾಭಾರತ, ವೇದೋಪನಿಷತ್ತು ಮೊದಲಾದವುಗಳಲ್ಲಿ ಬಂದಿರುವ ಮಹಾಪ್ರಮೇಯ ಎಂದು ತಿಳಿಯಬೇಕು.

**ಯದಿ ನಾಮ ಪರೋ ನ ಭವೇತ್ ಸ ಹರಿಃ**
**ಕಥಮಸ್ಯ ವಶೇ ಜಗದೇತದಭೂತ್ ।**
**ಯದಿ ನಾಮ ನ ತಸ್ಯ ವಶೇ ಸಕಲಂ**
**ಕಥಮೇವ ತು ನಿತ್ಯಸುಖಂ ನ ಭವೇತ್** ॥ ೫ ॥

**ಪ :** ಯದಿ, ನಾಮ, ಪರಃ, ನ, ಭವೇತ್, ಸಃ, ಹರಿಃ, ಕಥಮ್, ಅಸ್ಯ, ವಶೇ, ಜಗತ್, ಏತತ್, ಅಭೂತ್, ಯದಿ, ನಾಮ, ನ, ತಸ್ಯ, ವಶೇ, ಸಕಲಮ್, ಕಥಮ್, ಏವ, ತು, ನಿತ್ಯಸುಖಂ, ನ, ಭವೇತ್ ।

**ಅ :** ಸಃ, ಹರಿಃ, ಯದಿ, ನಾಮ, ಪರಃ, ನ, ಭವೇತ್, ಕಥಮ್, ಅಸ್ಯ, ವಶೇ, ಏತತ್, ಜಗತ್, ಅಭೂತ್, ಯದಿ, ನಾಮ, ತಸ್ಯ, ವಶೇ, ಸಕಲಮ್, ನ, ನಿತ್ಯಸುಖಮ್, ಕಥಮ್, ಏವ, ತು, ನ, ಭವೇತ್ ।

**ಪ್ರ.ಪ. : ಸಃ** – ಆ; **ಹರಿಃ** – ಶ್ರೀಹರಿಯು; **ಯದಿ ನಾಮ** – ಒಂದು ವೇಳೆ; **ಪರಃ** – ಸರ್ವೋತ್ತಮನಾಗಿ; **ನ ಭವೇತ್** – ಇಲ್ಲವಾಗಿದ್ದಲ್ಲಿ; **ಕಥಮ್** – ಹೇಗೆ ತಾನೆ; **ಅಸ್ಯ** – ಅವನ; **ವಶೇ** – ಅಧೀನದಲ್ಲಿ; **ಏತತ್** – ಈ; **ಜಗತ್** – ಜಗತ್ತು; **ಅಭೂತ್** – ಇರುತ್ತಿತ್ತು; **ಯದಿ ನಾಮ** – ಒಂದು ವೇಳೆ; **ತಸ್ಯ** – ಅವನ; **ವಶೇ** – ವಶದಲ್ಲಿ; **ಸಕಲಮ್** – ಎಲ್ಲವೂ; **ನ** – ಇರದಿದ್ದಲ್ಲಿ; **ನಿತ್ಯಸುಖಮ್** – ನಿತ್ಯಸುಖವು; **ಕಥಮ್** – ಹೇಗೆ; **ಏವ ತು** – ತಾನೆ; **ನ ಭವೇತ್**[೧] – ಉಂಟಾಗುತ್ತಿರಲಿಲ್ಲ.

---

೧. ಸ ಏಷ ಸರ್ವವೇತ್ತಾ ಹಿ ಪರಮಾತ್ ಪರಮೋ ಹರಿಃ ।
ನಾನ್ಯೋ ವೇತ್ತಾ ಸ್ವತಂತ್ರೋಽಸ್ತಿ ಜೀವಾಃ ಸರ್ವೇ ಹಿ ದುಃಖಿನಃ ।
ಯದಿ ಸ್ವತಂತ್ರಾ ನೈವೈತೇ ದುಃಖಿನಃ ಸ್ಯುಃ ಕದಾಚನ ।
ಅತ ಆರ್ತಿಮತಾಮಾರ್ತಿದಾತಾ ಮುಕ್ತಿಪ್ರದಶ್ಚ ಸಃ ।
ಭಗವಾನ್ ಪರಮೋ ವಿಷ್ಣುಃ ಸ್ವತಂತ್ರಃ ಸರ್ವದೈಕರಾಟ್ ॥ – ಬೃಹದ್ಭಾಷ್ಯ

**ಹಿರಿಯನಲ್ಲದಿರಲು ಹರಿಯು ನಿರುತ ಎಲ್ಲ ಲೋಕಕು**
**ಇರುವುದೇಕೆ ಎಲ್ಲ ಜಗವು ನಿತ್ಯ ಅವನ ವಶದೊಳು ।**
**ಇಲ್ಲದಿರಲು ಎಲ್ಲ ಜಗವು ನಿತ್ಯ ಅವನ ವಶದೊಳು**
**ನಿತ್ಯಸುಖವು ಆಗದೇಕೆ ನಿರುತ ಎಲ್ಲ ಲೋಕಕು ॥ ೫ ॥**

**ಅನು : ಶ್ರೀಹರಿಯು ಒಂದು ವೇಳೆ ಸರ್ವೋತ್ತಮನಾಗಿರದಿದ್ದಲ್ಲಿ ಹೇಗೆ ತಾನೆ ಈ ಜಗತ್ತು ಅವನ ಅಧೀನದಲ್ಲಿ ಇರುತ್ತಿತ್ತು? ಒಂದು ವೇಳೆ ಅವನ ವಶದಲ್ಲಿ ಎಲ್ಲವೂ ಇರದಿದ್ದಲ್ಲಿ ನಿತ್ಯಸುಖವು ಆದೇಕೆ ತಾನೇ ಉಂಟಾಗುತ್ತಿರಲಿಲ್ಲ?**

ವಿ : ೧. ಶ್ರೀಹರಿಯು ಸರ್ವೋತ್ತಮ ಎಂಬುದಕ್ಕೆ ವಿಶೇಷ ಕಾರಣ ನೀಡಿ ಇಲ್ಲಿ ಸಮರ್ಥಿಸಲಾಗಿದೆ.

೨. ಶ್ರೀಹರಿಯು ಸರ್ವೋತ್ತಮನೂ, ಸ್ವತಂತ್ರನೂ ಆಗಿರುವುದರಿಂದಲೇ ಈ ಸಕಲ ಜಗತ್ತು ಅವನ ಅಧೀನದಲ್ಲಿದೆ ಎಂದರ್ಥ.

೩. ಜಗತ್ತು ಶ್ರೀಹರಿಯ ಅಧೀನದಲ್ಲಿರದೆ ನಮ್ಮ ಅಧೀನದಲ್ಲಿಯೇ ಇದೆ ಎನ್ನುವಂತಿಲ್ಲ. ಹಾಗೆ ಎಲ್ಲವೂ ನಮ್ಮ ಅಧೀನದಲ್ಲೇ ಇದ್ದಿದ್ದಲ್ಲಿ ನಾವು ಬಯಸಿದ್ದೆಲ್ಲಾ ಈಡೇರಲೇಬೇಕಿತ್ತು. ಹಾಗೆ ಈಡೇರುತ್ತಿಲ್ಲ ಎಂಬುದು ಎಲ್ಲರ ಅನುಭವದಿಂದ ಸಿದ್ಧವಾಗಿರುವ ವಿಚಾರ. ಇದರಿಂದ ನಾವು ಸ್ವತಂತ್ರರಲ್ಲ ಎಂಬುದು ಸ್ಪಷ್ಟಪಡುವುದು. ಆದ್ದರಿಂದ ಶ್ರೀಹರಿಯೇ ಸ್ವತಂತ್ರ ಎಂದು ಭಾವ.

೪. ನಮ್ಮ ಅತ್ಯಂತ ಮುಖ್ಯವಾದ ಬಯಕೆ ಎಂದರೆ[೧]ನಿತ್ಯಸುಖ, ಎಂದರೆ, ಸದಾ ನಲಿವೇ ಆಗಬೇಕು ಎಂದು ಭಾವ. ಆದರೆ, ನಾವು ಬಯಸದ ನೋವು ಬರುವುದು ತಪ್ಪಿದ್ದಲ್ಲ; ಅದರಂತೆ ಬಯಸುವ ನಲಿವು ಬರುವುದೂ ಇಲ್ಲ. ಇದರಿಂದ ನಮ್ಮ ಬೇಕುಬೇಡಗಳ ಪೂರೈಕೆ ನಮ್ಮ ಅಧೀನದಲ್ಲಿಲ್ಲ ಎಂದಾಗುವುದು. ಇದು ಇಂದಿನ ನಾಸ್ತಿಕವಾದಕ್ಕೆ ಅತ್ಯಂತ ಸಮರ್ಥವಾದ ಉತ್ತರವಾಗಿದೆ. ಚಾರ್ವಾಕದರ್ಶನದ ನಿರಾಕರಣೆಯೂ ಇದರಲ್ಲಿದೆ.

೫. ಇಲ್ಲಿ ಇತರ ಬೇಕು-ಬೇಡಗಳ ಬಗ್ಗೆ ಪ್ರಸ್ತಾಪಿಸದೇ, ನಿತ್ಯಸುಖ ಎಂಬುದಾಗಿ ಸೂಚಿಸಿರುವುದು ಅತ್ಯಂತ ಮಾರ್ಮಿಕ. ಕಾರಣ ನಾವು ಏನನ್ನೇ ಬಯಸಿದರೂ ಸಹ ಅದರ

---

ಯದಿ ನಾಮ ಪರೋ ನ ಸ್ಯಾತ್ ಕಥಮೇತಜ್ಜಗದ್ವಶೇ ।
ವಶೇ ಯದಿ ಜಗನ್ನ ಸ್ಯಾನ್ನಿತ್ಯಾನಂದಃ ಕಥಂ ಭವೇತ್ ॥ – ವಾಯುಪುರಾಣ

೧. ಇಹ ಖಲು ಸುಖಮೇವ ಮೇ ಸ್ಯಾದ್ ದುಃಖಂ ಮನಾಗಪಿ ಮಾ ಭೂತ್ ಇತಿ ನಿಖಿಲಾಪೇಕ್ಷಿತ ಮೋಕ್ಷಸ್ಯ । – ಪ್ರಮಾಣಲಕ್ಷಣಟೀಕಾ

ಕೊನೆಯ ಗುರಿ ಸುಖವೇ ಆಗಿರುವುದು. ಅದನ್ನು ಸಕಲಪ್ರಾಣಿಗಳು ಸದಾ ಬಯಸುವುದು ಸರ್ವಾನುಭವಸಿದ್ಧ ಎಂಬುದು ಸ್ಪಷ್ಟಪಡಿಸುವುದು.

೬. ನಿತ್ಯಸುಖವು ಏತಕ್ಕೆ ಆಗುತ್ತಿಲ್ಲ ಎಂಬ ಮಾತಿಗೆ ನಾವು ಬಯಸದ ದುಃಖ ಸದಾ ಏತಕ್ಕೆ ಉಂಟಾಗುತ್ತಿದೆ ಎಂಬ ಭಾವವೂ ವಿಹಿತ. ಒಟ್ಟಾಗಿ ನಮಗೆ ಇಷ್ಟವಾದದ್ದು ದೊರಕದೆ ಇರುವುದು, ಅನಿಷ್ಟವಾದದ್ದು ತೊಲಗದಿರುವುದು ಅಸ್ವಾತಂತ್ರ್ಯಕ್ಕೆ ನಿದರ್ಶನ. ಅದರಂತೆ ಸ್ವತಂತ್ರರಾದ ಬೇರೊಂದು ಕಾರಣ ಇದ್ದೇ ಇದೆ ಎಂಬುದಕ್ಕೆ ಇದು ಸೂಚಕ.

೭. ಇದು ಬ್ರಹ್ಮಸೂತ್ರದ ಇತರವ್ಯಪದೇಶಾಧಿಕರಣದ ಸಾರರೂಪವಾದ ವಚನ[೧].

**ನ ಚ ಕರ್ಮವಿಮಾಮಲಕಾಲಗುಣ-**
**ಪ್ರಭೃತೀಶಮಚಿತ್ತನು ತದ್ಧಿ ಯತಃ ।**
**ಚಿದಚಿತ್ತನು ಸರ್ವಮಸೌ ತು ಹರಿ-**
**ರ್ಯಮಯೇದಿತಿ ವೈದಿಕಮಸ್ತಿ ವಚಃ ॥ ೬ ॥**

**ಪ :** ನ, ಚ, ಕರ್ಮವಿಮಾಮಲಕಾಲಗುಣಪ್ರಭೃತಿ, ಈಶಮ್, ಅಚಿತ್ತನು, ತತ್, ಹಿ, ಯತಃ, ಚಿದಚಿತ್ತನು, ಸರ್ವಮ್, ಅಸೌ, ತು, ಹರಿಃ, ಯಮಯೇತ್, ಇತಿ, ವೈದಿಕಮ್, ಅಸ್ತಿ, ವಚಃ ।

**ಅ :** ಕರ್ಮವಿಮಾಮಲಕಾಲಗುಣಪ್ರಭೃತಿ, ನ, ಈಶಮ್, ಚ, ಯತಃ, ತತ್, ಅಚಿತ್ತನು, ಹಿ, ಅಸೌ, ಹರಿಃ, ಚಿದಚಿತ್ತನು, ಸರ್ವಮ್, ಯಮಯೇತ್, ತು, ಇತಿ, ವೈದಿಕಮ್, ವಚಃ, ಅಸ್ತಿ ।

**ಪ್ರ.ಪ. :** [೨]**ಕರ್ಮವಿಮಾಮಲಕಾಲಗುಣಪ್ರಭೃತಿ** – ಕರ್ಮ, ಅವಿದ್ಯೆ, ದೋಷ, ಕಾಲ, ಗುಣ ಮೊದಲಾದವು; **ಈಶಮ್** – ಅದಕ್ಕೆ ಸಮರ್ಥ ಕಾರಣವಾಗಲು; **ನ ಚ** – ಸಾಧ್ಯವಿಲ್ಲ; **ಯತಃ** – ಏಕೆಂದರೆ; **ತತ್** – ಅದೆಲ್ಲ; **ಅಚಿತ್ತನು** – ಜಡಸ್ವರೂಪ; **ಹಿ** – ಅಲ್ಲವೆ; **ಅಸೌ** – ಈ; **ಹರಿಃ** – ಶ್ರೀಹರಿಯು; **ಚಿದಚಿತ್ತನು** – ಚೇತನ ಹಾಗೂ ಜಡ ಎಂಬ; **ಸರ್ವಮ್**

---

೧. ಜೀವಕರ್ತೃತ್ವಪಕ್ಷಃ ಶ್ರುತಿಪ್ರಾಪ್ತೋ ವಿಸ್ತರಾನ್ನಿರಾಕ್ರಿಯತೇ ।
ಓಂ ಇತರವ್ಯಪದೇಶಾದ್ಧಿತಾಕರಣಾದಿದೋಷಪ್ರಸಕ್ತಿಃ ಓಂ ॥
ಜೀವಕರ್ತೃತ್ವಪಕ್ಷೇ ಹಿತಾಕರಣಮಹಿತಕರಣಂ ಚ ನ ಸ್ಯಾತ್ ॥ – ಬ್ರ.ಸೂ.ಭಾ.(೨/೧/೨೨)

೨. ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ ।
ಯದನುಗ್ರಹತಃ ಸಂತಿ ನ ಸಂತಿ ಯದುಪೇಕ್ಷಯಾ ॥ – ಭಾಗವತ (೨/೫/೧೪)

೩. ಕರ್ಮಾವಿದ್ಯಾಪ್ರಧಾನಂ ಚ ತಥಾ ಕಾಲೋ ಗುಣಾಶ್ಚ ಯೇ ।
ನ ತೇಷಾಂ ಕರ್ತೃತಾ ಕ್ವಾಪಿ ಹ್ಯಸ್ಮಾದೇತೇ ಹ್ಯಚೇತನಾಃ ॥ – ವಾಯುಪುರಾಣ

– ಸಕಲವನ್ನು; **ಯಮಯೇತ್** – ನಿಯಮನ ಮಾಡುವನು; **ತು ಇತಿ** – ಎಂಬುದಾಗಿ; **ವೈದಿಕಮ್** – ವೇದೋಕ್ತವಾದ ; **ವಚಃ** – ವಚನವು; **ಅಸ್ತಿ** – ಇದೆ.

**ಇದಕೆ ಕರ್ಮಕಾಲತ್ರಿಗುಣ ಅಲ್ಲ ಮುಖ್ಯಕಾರಣ**
**ಜಡಗಳಾಗಿ ಅವುಗಳೆಲ್ಲ ಎಂದು ಇರುವ ಕಾರಣ ।**
**ಸಕಲ ಚೇತನಕು ಜಡಕು ಅವನೆ ಸರ್ವ ಸ್ವಾಮಿಯು**
**ಹರಿಯೆ ಸರ್ವಕರ್ತೃವೆಂದು ವೇದವಾಣಿ ಇರುವುದು ॥ ೬ ॥**

**ಅನು : ಕರ್ಮ, ಅವಿದ್ಯೆ, ದೋಷ, ಕಾಲ, ಗುಣ ಮೊದಲಾದವು ಅದಕ್ಕೆ ಮುಖ್ಯಕಾರಣವಾಗಲು ಸಾಧ್ಯವಿಲ್ಲ, ಏಕೆಂದರೆ ಅದೆಲ್ಲ ಜಡಸ್ವರೂಪ ಅಲ್ಲವೇ? ಈ ಶ್ರೀಹರಿಯು ಚೇತನ ಹಾಗೂ ಜಡ ಎಂಬ ಸಕಲವನ್ನು ನಿಯಮನ ಮಾಡುವವನು ಎಂಬುದಾಗಿ ವೇದವಾಣಿ ಇದೆ.**

ವಿ: ೧. ನಾವು ಬಯಸಿದ್ದೆಲ್ಲ ಈಡೇರುವುದಿಲ್ಲ ಎಂಬ ಕಾರಣದಿಂದ ಶ್ರೀಹರಿಯೇ ಅದಕ್ಕೆ ಕಾರಣ ಎಂದೇಕೆ ತಿಳಿಯಬೇಕು? ಕರ್ಮ, ಅವಿದ್ಯೆ, ದೋಷ, ಕಾಲ, ಗುಣ ಮೊದಲಾದ ಕಾರಣದಿಂದ ನಮಗೆ ಬಯಸಿದ್ದು ದೊರೆಯುತ್ತಿಲ್ಲ ಎಂದು ತಿಳಿಯಬಹುದಲ್ಲ? ಎಂಬ ಆಕ್ಷೇಪಕ್ಕೆ ಇಲ್ಲಿ ಉತ್ತರವಿದೆ.

೨. ಇದಕ್ಕೆ ನಾವು ಮಾಡಿದ ಕರ್ಮ ಕಾರಣ ಎಂಬುದು ಮೀಮಾಂಸಕರ ವಾದ; ಅವಿದ್ಯೆ ಕಾರಣ ಎಂಬುದು ಮಾಯಾವಾದಿಗಳ ವಾದ; ಕಾಲ ಕಾರಣ ಎಂಬುದು ಜ್ಯೋತಿಷ್ಕರ ಚಿಂತನೆ; ಸತ್ತ್ವ, ರಜಸ್ ಹಾಗೂ ತಮಸ್ ಎಂಬ ಮೂರು ಪ್ರಕೃತಿಯ ಗುಣಗಳು ಕಾರಣ ಎಂಬುದು ಸಾಂಖ್ಯರ ವಿಚಾರ; ಎಂದರೆ, ನಾವು ಮಾಡುವ ಪುಣ್ಯಪಾಪರೂಪದ ಕರ್ಮಗಳಿಂದಾಗಿ ನಮಗೆ ಬಯಸಿದ್ದು ಸಿಗುತ್ತಿಲ್ಲ. ಅವಿದ್ಯೆಯ ಪ್ರಭಾವದಿಂದಾಗಿಯೂ ಸಹ. ಇದರಂತೆ ರಾಹುಕಾಲ, ಗುಳಿಕಕಾಲ, ಯಮಗಂಡಕಕಾಲ ಮೊದಲಾದವು ಹಾಗೂ ಗ್ರಹಗತಿ ಮೊದಲಾದವುಗಳು ಕಾರಣವಾಗಿರಬಹುದು. ಅದರಂತೆ ಸತ್ತ್ವಗುಣ ಮೊದಲಾದ ಪ್ರಕೃತಿಯ ಗುಣಗಳಿಂದಲೂ ಸಹ ಹೀಗಾಗಲು ಸಾಧ್ಯ ಎಂದು ಭಾವ.

೩. ಈ ವಿಚಾರವು ಸರಿಯಲ್ಲ. ಏಕೆಂದರೆ ಕಾಲ, ಗುಣ ಮೊದಲಾದ ಇಲ್ಲಿ ತಿಳಿಸಿರುವ ಸಕಲವೂ ಸಹ ಜಡಪದಾರ್ಥಗಳು. ಜಡಪದಾರ್ಥಗಳಿಗೆ ಸ್ವತಂತ್ರವೃತ್ತಿ ಇಲ್ಲ ಎಂಬುದು ಭೌತಶಾಸ್ತ್ರದ ಮೂಲಭೂತ ನಿಯಮ. ಇಂದಿಗೂ ಅಪಘಾತ ಮೊದಲಾದ ಯಾವುದೇ ಅನರ್ಥಕ್ಕೂ ಸಹ ಜಡವನ್ನು ಹೊಣೆಯಾಗಿಸಿದ ಪ್ರಸಂಗವಾಗಲಿ, ಅವುಗಳನ್ನು ನ್ಯಾಯಾಲಯ ಶಿಕ್ಷೆಗೆ ಗುರಿಪಡಿಸಿದ ಪ್ರಸಂಗಗಳಾಗಲಿ ಸರ್ವಥಾ ನಡೆದಿಲ್ಲ ಎಂಬುದು

ಇದಕ್ಕೆ ನಿದರ್ಶನ. ಕೊಲೆ ಮಾಡಿದಾಗ ಶಿಕ್ಷೆ ನೀಡುವುದು ಕೊಲೆಗಾರನಿಗೆ ಹೊರತು, ಕೊಲೆ ಮಾಡಲು ಉಪಯೋಗಿಸಿದ ಚಾಕು, ಚೂರಿಗಳಂತಹ ಜಡಪದಾರ್ಥಗಳಿಗಾಗಲೀ ಅಲ್ಲವಷ್ಟೇ. ಆದ್ದರಿಂದ ಜಡಕಾರಣವಾದವು ಸರ್ವಥಾ ಅಗ್ರಾಹ್ಯ ಎಂದು ಭಾವ.

೪. ಇದರಿಂದ ಕಾಲಕರ್ಮಾದಿಗಳು ಸರ್ವಥಾ ಕಾರಣವಲ್ಲ ಎಂದರ್ಥವಲ್ಲ. ಅವು ಸ್ವತಂತ್ರಕಾರಣವಾಗಲು ಸರ್ವಥಾ ಸಾಧ್ಯವಿಲ್ಲ. ಅವಕ್ಕೆ ಮೂಲಕಾರಣವಾಗಿ ಚೇತನವು ಇರಲೇಬೇಕು ಎಂದು [೧]ಭಾವ. ಕೊಲೆ ಮೊದಲಾದವುಗಳು ನಡೆದಾಗ ಕೊಲೆಗಾರನು ಮೂಲಕಾರಣನು ಹೇಗೋ ಹಾಗೆ. ಅಪಘಾತ ಎಂಬಲ್ಲಿಯೂ ಸಹ ಅಪಘಾತ ಮಾಡಿದವನು ಕಾರಣ ಎಂದಾದರೂ ಸಹ ಆವನಿಗೆ ಕೊಲ್ಲುವ ಉದ್ದೇಶವಿರುವುದಿಲ್ಲ ಎಂಬ ಕಾರಣದಿಂದ ಮುಖ್ಯಕಾರಣ ಎನ್ನುವುದಿಲ್ಲ ಅಷ್ಟೆ.

೫. ಹಾಗಿದ್ದಲ್ಲಿ ಕರ್ಮ, ಕಾಲ ಮೊದಲಾದವುಗಳಿಗೆ ಅಭಿಮಾನಿಗಳಾದ ಚೇತನರು ಇದಕ್ಕೆ ಕಾರಣ ಎನ್ನಬಹುದಲ್ಲ ಎಂಬುದು ಮುಂದಿನ ಪ್ರಶ್ನೆ. ಅದೂ ಸಹ ಸರಿಯಲ್ಲ. ಚೇತನರಿಗೆ ಕಾರಣವಾಗುವ ಸಾಧ್ಯತೆ ಇರುವುದು ನಿಜವಾದರೂ ಸಹ, ಸ್ವಾತಂತ್ರ್ಯವಿಲ್ಲ ಎಂಬುದು ಗಮನಿಸಬೇಕಾದ ಸಂಗತಿ. ಜಡವು ಪರಿಜ್ಞಾನಶೂನ್ಯವಾದ್ದರಿಂದ, ಅದಕ್ಕೆ ಕಾರಣತ್ವವನ್ನು ಹೇಗೆ ಒಪ್ಪಲಾಗದೋ, ಅದೇ ರೀತಿಯಲ್ಲಿ ಚೇತನತ್ವವಿದ್ದರೂ ಸಹ ಸ್ವಾತಂತ್ರ್ಯ ಇಲ್ಲದಾಗ ಮುಖ್ಯಕಾರಣತ್ವ ಕೂಡುವುದಿಲ್ಲ ಎಂದರ್ಥ.

೬. ಹಾಗಿದ್ದಲ್ಲಿ, ಮೂಲಕಾರಣ ಯಾರು ಎಂಬ ಪ್ರಶ್ನೆಗೆ ಉತ್ತರವೇನು? ಇದಕ್ಕೆ ವೇದವಚನಗಳು ಉತ್ತರ ನೀಡಿವೆ. ಸಕಲ ಜಡಚೇತನಗಳನ್ನು ಸಹ ನಿಯಂತ್ರಿಸುವ ಚೇತನನಾದ ಶ್ರೀಹರಿಯೇ ಅದಕ್ಕೆ ಕಾರಣ ಎಂದು ಭಾವ. ಇದರಿಂದಾಗಿಯೇ ಅಪರಾಧ ನಡೆದಲ್ಲಿ ಮನೆಯ ಯಜಮಾನನನ್ನು ಹೊಣೆಗಾರನನ್ನಾಗಿಸುವುದು, ಮತ್ತೊಬ್ಬರ ಪ್ರೇರಣೆಯಿಂದ ಕೊಲೆ ಇತ್ಯಾದಿ ಅನರ್ಥಗಳು ನಡೆದಾಗ ಪ್ರೇರಕನನ್ನೇ ಮುಖ್ಯಹೊಣೆಗಾರನನ್ನಾಗಿಸುವುದು ನ್ಯಾಯಾಲಯಗಳಲ್ಲೂ ನಡೆಯುತ್ತಿರುವ ವಿಚಾರವಾಗಿದೆ. ಹಾಗಿದ್ದರೆ, ಅಸ್ವತಂತ್ರನಿಗೇತಕ್ಕೆ ಫಲಾಫಲಗಳ ಹೊಣೆ ಎಂಬುದು ಮುಂದಿನ ಪ್ರಶ್ನೆ. ಇದಕ್ಕೂ ಉತ್ತರ ಅದೇ ಆಗಿದೆ. ಸ್ವತಂತ್ರ ಎಂಬ ಕಾರಣದಿಂದಲೇ ಮುಖ್ಯಕಾರಣನಾದ ಶ್ರೀಹರಿಗೆ ಪುಣ್ಯ, ಪಾಪಗಳ ಪ್ರಶ್ನೆಗೆ ಅವಕಾಶವಿಲ್ಲ. ಅದು ಏನಿದ್ದರೂ ಅಸ್ವತಂತ್ರರಿಗೆ ಮಾತ್ರ ಅನ್ವಯಿಸುವ ವಿಚಾರ. ಕಾರ್ಖಾನೆಯಲ್ಲಿ ಕೆಲಸಗಾರನಿಗೆ ಇರುವ ನಿರ್ಬಂಧ ಅದರ ಯಜಮಾನನಿಗೆ ಹೇಗೆ ಇರಲಾರದೋ ಹಾಗೆ ಎಂದು ತಿಳಿಯಬೇಕು.

---

೧. ಸರ್ವಕರ್ತಾ ಸರ್ವಶಕ್ತಿರೇಕ ಏವ ನ ಚಾಪರಃ ।
ಪ್ರಧಾನಕಾಲಬ್ರಹ್ಮೇಶಮುಖಾಃ ಸರ್ವೇಽಪಿ ತದ್ವಶಾಃ ॥ — ಮಾಂಡೂಕಭಾಷ್ಯ (೧/೧೫)

**ವ್ಯವಹಾರಭಿದಾಽಪಿ ಗುರೋರ್ಜಗತಾಂ**
**ನ ತು ಚಿತ್ತಗತಾ ಸ ಹಿ ಚೋದ್ಯಪರಮ್ ।**
**ಬಹವಃ ಪುರುಷಾಃ [೧]ಪುರುಷಪ್ರವರೋ**
**ಹರಿರಿತ್ಯವದತ್ ಸ್ವಯಮೇವ ಹರಿಃ ॥ ೭ ॥**

**ಪ :** ವ್ಯವಹಾರಭಿದಾ, ಅಪಿ, ಗುರೋಃ, ಜಗತಾಮ್, ನ, ತು, ಚಿತ್ತಗತಾ, ಸಃ, ಹಿ, ಚೋದ್ಯಪರಮ್, ಬಹವಃ, ಪುರುಷಾಃ, ಪುರುಷಪ್ರವರಃ, ಹರಿಃ, ಇತಿ, ಅವದತ್, ಸ್ವಯಮ್, ಏವ, ಹರಿಃ।

**ಅ :** ವ್ಯವಹಾರಭಿದಾ, ಅಪಿ, ಜಗತಾಮ್, ಗುರೋಃ, ಚಿತ್ತಗತಾ, ನ, ತು, ಚೋದ್ಯಪರಮ್, ಪುರುಷಾಃ, ಬಹವಃ, ಸಃ, ಹರಿಃ, ಪುರುಷಪ್ರವರಃ, ಇತಿ, ಸ್ವಯಮ್, ಹರಿಃ, ಏವ, ಅವದತ್, ಹಿ।

**ಪ್ರ.ಪ. :** **ವ್ಯವಹಾರಭಿದಾ** – ವ್ಯಾವಹಾರಿಕಭೇದವು; **ಅಪಿ** – ಸಹ; **ಜಗತಾಮ್** – ಜಗತ್ತುಗಳಿಗೆ; **ಗುರೋಃ** – ಗುರುಗಳಾದ ವೇದವ್ಯಾಸದೇವರ; **ಚಿತ್ತಗತಾ** – ಮನಸ್ಸಿನಲ್ಲಿ; **ನ ತು** – ಇಲ್ಲವೇ ಇಲ್ಲ; **ಚೋದ್ಯಪರಮ್** – ಪ್ರಶ್ನೆಯ ಬಳಿಕ ; **ಪುರುಷಾಃ** – ಚೇತನರು; **ಬಹವಃ** – ಅಪಾರ ಸಂಖ್ಯೆಯವರು; **ಸಃ** – ಆ; **ಹರಿಃ** – ಶ್ರೀಹರಿಯು; **ಪುರುಷಪ್ರವರಃ** – ಪುರುಷೋತ್ತಮನು; **ಇತಿ** – ಎಂಬುದಾಗಿ; **ಸ್ವಯಮ್** – ಸ್ವತಃ; **ಹರಿಃ ಏವ** – ಶ್ರೀಹರಿಯೇ; **ಅವದತ್** – ತಿಳಿಸಿರುವನು; **ಹಿ** – ಅಲ್ಲವೇ?

**ಜೀವ ಈಶ ಜಡದ ಭೇದ ಎಲ್ಲ ಮಿಥ್ಯೆ ಎಂಬುದು**
**ವಿಶ್ವಗುರುವ ಮತವದಲ್ಲ ಪೂರ್ವಪಕ್ಷ ಮಾತ್ರವೆ।**
**ಜೀವಕೋಟಿಗೆಣಿಕೆಯಿಲ್ಲ ಹರಿಯೆ ಅದಕೆ ಈಶನು**
**ಹರಿಯೆ ಇದನು ಒರೆದು ಇರುವ ವ್ಯಾಸ ವಿಶ್ವಪಾವನ ॥ ೭ ॥**

**ಅನು : ವ್ಯಾವಹಾರಿಕಭೇದ ಎಂಬುದು ಸಹ ಜಗದ್ಗುರುವಾದ ವೇದವ್ಯಾಸರ ಮನೋಭಾವವಲ್ಲ, ಅದು ಪ್ರಶ್ನೆಗೆ ಉತ್ತರವಾಗಿ ಬಂದಿರುವ ವಿವರ, ಚೇತನರು ಅಪಾರ, ಪುರುಷೋತ್ತಮನಂತೂ ಶ್ರೀಹರಿಯೇ ಎಂಬುದಾಗಿ ಸ್ವತಃ ಶ್ರೀಹರಿಯಾದ ಅವನೇ ತಿಳಿಸಿರುವನಲ್ಲವೇ!**

ವಿ : ೧. ಮಾಯಾವಾದಿಗಳು ಇದನ್ನೆಲ್ಲಾ ಒಪ್ಪುವರು. ಅದರಂತೆ, ಜೀವೇಶರಲ್ಲಿಯ ಭೇದವನ್ನು ಸಹ. ಆದರೆ, ಅದು ಸ್ವಾಭಾವಿಕವಾದುದಲ್ಲ ವ್ಯಾವಹಾರಿಕ (ಔಪಾಧಿಕ)

---

೧. ವೈಕುಂಠಃ **ಪುರುಷಃ** ಪ್ರಾಣಃ, ಅವ್ಯಯಃ **ಪುರುಷಃ**, ಪ್ರಧಾನ**ಪುರುಷೇಶ್ವರಃ** – ವಿಷ್ಣುಸಹಸ್ರನಾಮ

ಎನ್ನುವರು. ಎಂದರೆ, ಜೀವೇಶ್ವರರಲ್ಲಿ ಸ್ವಾಭಾವಿಕವಾಗಿ ಅಭೇದವೇ ಇದ್ದರೂ, ಅವಿದ್ಯೆಯ ಕಾರಣದಿಂದಾಗಿ ಭೇದವಿರುವಂತೆ ತೋರುವುದು ಎಂಬುದು ಅವರ ವಾದ. ಅದು ಸರಿಯಲ್ಲ; ಏಕೆಂದರೆ ಪ್ರಶ್ನೆ ಕೇಳಿದ ಜನಮೇಜಯ ರಾಜನಿಗೆ ವೈಶಂಪಾಯನರು ಜೀವೇಶರ ಭೇದವು ಔಪಾಧಿಕವಲ್ಲ, ಸ್ವಾಭಾವಿಕವೇ ಆಗಿದೆ ಎಂದು ಉತ್ತರ ನೀಡಿರುವರು. ಆದ್ದರಿಂದ ಜೀವೇಶರ ಭೇದವು ಸ್ವಾಭಾಕವಾದುದೆಂದೇ ದೃಢಪಡುವುದು ಎಂದು ಭಾವ.

೨. ಹೀಗೆ ಜೀವೇಶಭೇದವು ಸ್ವಾಭಾವಿಕವಾದುದರಿಂದ ದುಃಖಿಗಳಾದ ಜೀವಿಗಳನ್ನೂ, ದುಃಖಲೇಶವೂ ಇರದ ಅನಂತಗುಣಪೂರ್ಣನಾದ ಶ್ರೀಹರಿಯೇ ನಿಯಂತ್ರಿಸುವನು ಎಂಬ ಶ್ರುತಿವಚನ ಯಥಾರ್ಥವಾದುದು ಎಂದು ಭಾವ.

೩. ಚೇತನರು ಒಬ್ಬರೋ ಅಥವಾ ಅನೇಕರೋ? ಎಂದು ಶಾಂತಿಪರ್ವದಲ್ಲಿ ಒಂದು ಹಂತದಲ್ಲಿ ಜನಮೇಜಯರಾಜ ಪ್ರಶ್ನೆ ಮಾಡಿದಾಗ ವೈಶಂಪಾಯನರು ನಿಶ್ಚಿತವಾಗಿಯೂ, ಚೇತನರ ಸಂಖ್ಯೆ ಅನಂತ, ಸರ್ವಶ್ರೇಷ್ಠವಾದ ಚೇತನ ಮಾತ್ರ ಸದಾ ಒಬ್ಬನೇ, ಅವನು ಶ್ರೀಹರಿ ಎಂದು ಅವನ ಪ್ರಶ್ನೆಗೆ ಉತ್ತರರೂಪವಾಗಿ ತಿಳಿಸಿರುವುದರಿಂದ, ಭೇದವು ವ್ಯಾವಹಾರಿಕ ಎಂಬ ವಾದ ಸರಿಯಲ್ಲ ಎಂದರ್ಥ[೧].

೪. ಇಲ್ಲಿಯ ಪ್ರಶ್ನೋತ್ತರ ನಡೆದದ್ದು ಜನಮೇಜಯ–ವೈಶಂಪಾಯನರ ಮಧ್ಯೆ. ಆದರೂ, ಅದನ್ನು ಮಹಾಭಾರತದಲ್ಲಿ ತಮ್ಮ ಸಿದ್ಧಾಂತದ ವಿವರಣೆಗಾಗಿ ವೇದವ್ಯಾಸರು ಉಲ್ಲೇಖಿಸಿರುವುದರಿಂದ ಅದು ಶ್ರೀಹರಿಯಾದ ಅವರ ಅಭಿಪ್ರಾಯವೇ ಆಗುವುದು. ಆದ್ದರಿಂದ, ಸ್ವಯಮೇವ ಹರಿಃ ಅವದತ್. ಸ್ವತಃ ಶ್ರೀಹರಿಯೇ ಇದನ್ನು ತಿಳಿಸಿರುವನು ಎಂಬುದಾಗಿ ತಿಳಿಸಿರುವರು ಎಂದು ಭಾವ.

೫. ಒಟ್ಟಾಗಿ ಮಾಯಾವಾದಿಗಳು ಹೇಳುವ ಜೀವೇಶರ ಅಭೇದವಾದವು ಮಹಾಭಾರತವನ್ನು ರಚಿಸಿದ ಶ್ರೀವೇದವ್ಯಾಸರಿಗೆ ಸಮ್ಮತವಾದುದಲ್ಲ ಎಂದರ್ಥ.

**ಚತುರಾನನಪೂರ್ವವಿಮುಕ್ತಗಣಾ**
**ಹರಿಮೇತ್ಯ ತು ಪೂರ್ವವದೇವ ಸದಾ ।**

---

೧. ಬಹವಃ ಪುರುಷಾ ಬ್ರಹ್ಮನ್ನುತಾಹೋ ಏಕ ಏವ ತು ।
ಕೋ ಹ್ಯತ್ರ ಪುರುಷಶ್ರೇಷ್ಠಸ್ತಂ ಭವಾನ್ ವಕ್ತುಮರ್ಹಸಿ ॥
ನೈತದಿಚ್ಛಂತಿ ಪುರುಷಮೇಕಂ ಕುರುಕುಲೋದ್ವಹ ।
ಬಹೂನಾಂ ಪುರುಷಾಣಾಂ ಹಿ ಯಥೈಕಾ ಯೋನಿರುಚ್ಯತೇ ।
ತಥಾ ತಂ ಪುರುಷಂ ವಿಶ್ವಮಾಖ್ಯಾಸ್ಯಾಮಿ ಗುಣಾಧಿಕಮ್ ॥
– ಮಹಾಭಾರತ (ಶಾಂತಿ. ಮೋಕ್ಷಧರ್ಮಪರ್ವ)

**ನಿಯತೋಚ್ಚವಿನೀಚತಯೈವ ನಿಜಾಂ**
**ಸ್ಥಿತಿಮಾಪುರಿತಿ ಸ್ಮ ಪರಂ ವಚನಮ್ ॥ ೮ ॥**

**ಪ :** ಚತುರಾನನಪೂರ್ವವಿಮುಕ್ತಗಣಾಃ, ಹರಿಮ್, ಏತ್ಯ, ತು, ಪೂರ್ವವತ್, ಏವ, ಸದಾ, ನಿಯತೋಚ್ಚವಿನೀಚತಯಾ, ಏವ, ನಿಜಾಮ್, ಸ್ಥಿತಿಮ್, ಆಪುಃ, ಇತಿ, ಸ್ಮ, ಪರಮ್, ವಚನಮ್ ।

**ಅ :** ಚತುರಾನನಪೂರ್ವವಿಮುಕ್ತಗಣಾಃ, ಹರಿಮ್, ಏತ್ಯ, ತು, ಪೂರ್ವವತ್, ಏವ, ಸದಾ, ನಿಯತೋಚ್ಚವಿನೀಚತಯಾ, ಏವ, ನಿಜಾಮ್, ಸ್ಥಿತಿಮ್, ಆಪುಃ, ಇತಿ, ಪರಮ್, ವಚನಮ್, ಸ್ಮ ।

**ಪ್ರ.ಪ. : ಚತುರಾನನಪೂರ್ವವಿಮುಕ್ತಗಣಾಃ** – ಚತುರ್ಮುಖನಾದ ಬ್ರಹ್ಮದೇವರೇ ಮೊದಲಾದ ಮುಕ್ತರ ಗುಂಪುಗಳು; **ಹರಿಮ್** – ಶ್ರೀಹರಿಯನ್ನು; **ಏತ್ಯ ತು** – ಹೊಂದಿದ ಬಳಿಕವೂ; [೧]**ಪೂರ್ವವತ್** ಏವ – ಮುಂಚಿನಂತೆಯೇ; **ಸದಾ** – ಯಾವಾಗಲೂ; **ನಿಯತೋಚ್ಚವಿನೀಚತಯಾ** ಏವ – ನಿಯತವಾದ ತಾರತಮ್ಯಕ್ಕೆ ಅನುಗುಣವಾಗಿಯೇ; **ನಿಜಾಮ್** – ತಮ್ಮ ಸಹಜ; **ಸ್ಥಿತಿಮ್** – ಇರುವಿಕೆಯನ್ನು; **ಆಪುಃ** – ಹೊಂದಿದರು; **ಇತಿ** – ಈ ರೀತಿಯಾಗಿ; **ಪರಮ್** – ಶ್ರೇಷ್ಠವಾದ; **ವಚನಮ್ ಸ್ಮ** – ವಚನವು ಇದೆ ಅಲ್ಲವೆ?

**ಕಮಲಭವನೆ ಮುಖ್ಯವಾದ ಸರ್ವಮುಕ್ತ ಸುರಗಣ**
**ಹರಿಯಲೋಕ ಪಡೆದ ಮೇಲು ಮತ್ತೆ ಮುಂಚಿನಂತೆಯೆ ।**
**ತಾರತಮ್ಯದೊಡನೆ ಕೂಡಿ ತಮ್ಮ ಗತಿಯ ಪಡೆವುದು**
**ಎಂದು ಪರಮಶಾಸ್ತ್ರವಾಣಿ ನಿರುತದಲ್ಲಿ ಇರುವುದು ॥ ೮ ॥**

**ಅನು : ಚತುರ್ಮುಖನಾದ ಬ್ರಹ್ಮದೇವರೇ ಮೊದಲಾದ ಮುಕ್ತರ ಗುಂಪುಗಳು ಶ್ರೀಹರಿಯನ್ನು ಹೊಂದಿದ ಬಳಿಕವೂ ಮುಂಚಿನಂತೆಯೇ ನಿಯತವಾದ ತಾರತಮ್ಯಕ್ಕೆ ಅನುಗುಣವಾಗಿಯೇ ತಮ್ಮ ಇರುವಿಕೆಯನ್ನು ಹೊಂದಿರುವರು; ಈ ರೀತಿಯಾಗಿ ಶ್ರೇಷ್ಠವಾದ ವೇದವಚನ ಇದೆ ಅಲ್ಲವೇ!**

---

೧. ಶ್ರೀಬ್ರಹ್ಮಬ್ರಾಹ್ಮೀವೀಂದ್ರಾದಿತ್ರಿಕತತ್ಸ್ತ್ರೀಪುರುಷ್ಟುತಾಃ ।
ತದನ್ಯೇ ಚ ಕ್ರಮಾದೇವ ಸರ್ವೇ ಮುಕ್ತೌ ಸ್ಥಿತಾವಪಿ ।
ಹರಿಭಕ್ತೌ ಚ ತಜ್ಜ್ಞಾನ ಸುಖೇ ಚ ನಿಯಮೇನ ತು ।
ಪರತಃ ಸ್ವತಃ ಕರ್ಮತೋ ವಾ ನ ಕಥಂಚಿತ್ ತದನ್ಯಥಾ ॥ ಇತಿ ಬ್ರಹ್ಮತರ್ಕೇ ।
– ಭಾಗತಾ.ನಿ. (೭/೯/೨೭)

ವಿ : ೧. ಸಂಸಾರದಲ್ಲಿ ಚೇತನರಲ್ಲಿ ತಾರತಮ್ಯವಿದ್ದರೂ, ಅದು ಔಪಾಧಿಕ. ಮುಂದೆ ಮುಕ್ತಿಯಲ್ಲಿ ಎಲ್ಲರಲ್ಲಿ ಆನಂದಸಾಮವೇ ಇರುವುದು. ಅಲ್ಲಿ ತಾರತಮ್ಯಕ್ಕೆ ಅವಕಾಶವಿಲ್ಲ ಎಂಬ ವಿಶಿಷ್ಟಾದ್ವೈತಮತದ ವಿಮರ್ಶೆ ಈ ಶ್ಲೋಕದಲ್ಲಿ ಬಂದಿದೆ.

೨. ಸಂಸಾರಾವಸ್ಥೆಯಲ್ಲಿ ತಾರತಮ್ಯವಿರುವುದು ನಿಶ್ಚಿತ ಎಂಬುದು ಸರ್ವಾನುಭವಸಿದ್ಧವಾದ ಸಂಗತಿ. ಶ್ರುತಿಗಳು ಸಹ ಹಾಗೆಯೇ ತಿಳಿಸಿವೆ. ಅದರಂತೆ, ಮುಕ್ತಿಯಲ್ಲೂ ಸಹ ಆ ತಾರತಮ್ಯವು ಇದ್ದೇ ಇರುವುದು ಎಂದು ಭಾವ. ವಾಸ್ತವವಾಗಿ ಶ್ರುತಿವಚನ ಸಂಸಾರದಲ್ಲಿ ಮಾತ್ರವೇ ತಾರತಮ್ಯವಿದೆ ಎಂದೇನೂ ಹೇಳಿಲ್ಲ. ಅವು ಹೇಳಿರುವುದು ಮುಕ್ತಿಯಲ್ಲೂ ತಾರತಮ್ಯ ಇದ್ದೇ ಇರುವುದು ಎಂದೇ.

೩. ಸಾಧನೆಯಲ್ಲಿ ತಾರತಮ್ಯ ಇದೆ ಎಂದು ಒಪ್ಪಿದ ಮೇಲೆ, ಸಿದ್ಧಿಯಲ್ಲೂ ತಾರತಮ್ಯವಿರುವುದನ್ನು ಒಪ್ಪಲೇಬೇಕು[೧] ಎಂಬುದು ಇಲ್ಲಿಯ ಮುಖ್ಯಭಾವ. ಎಂದರೆ ಸಾಧನೆಗೆ ತಕ್ಕಂತೆ ಫಲ ಎಂಬುದು ಸಿದ್ಧಾಂತವಾಗಿರುವಾಗ, ಎಲ್ಲ ಮುಮುಕ್ಷುಗಳ ಸಾಧನೆಯಲ್ಲೂ ತಾರತಮ್ಯವಿರುವುದರಿಂದ, ಮುಕ್ತಿಯಲ್ಲೂ ಆ ತಾರತಮ್ಯ ಎಂದಿನಂತೆ ಇದ್ದೇ ಇರುವುದು ಎಂದು ತಾತ್ಪರ್ಯ.

೪. **ಯದಿನಾಮ** ಎಂಬ ಶ್ಲೋಕದಿಂದ ಪ್ರಾರಂಭಿಸಿ ಈ ಶ್ಲೋಕದವರೆಗಿನ ಒಟ್ಟು ನಾಲ್ಕು ಶ್ಲೋಕಗಳಲ್ಲಿ ಬ್ರಹ್ಮಸೂತ್ರಗಳ ಅವಿರೋಧೋಧ್ಯಾಯದ ಸಮಯಪಾದ ಎಂಬ ದ್ವಿತೀಯಪಾದದಲ್ಲಿ ಬಂದಿರುವ ವಿವರಗಳು ಅತ್ಯಂತ ಪರಿಣಾಮಕಾರಿಯಾಗಿ ಸಂಗ್ರಹೀತವಾಗಿವೆ. ಇದು ಸಮಯಪಾದದ ಅನುಸಂಧಾನವನ್ನು ಸ್ತೋತ್ರರೂಪದಲ್ಲಿ ಅಳವಡಿಸಿಕೊಳ್ಳುವ ವಿಧಾನವನ್ನು ಸಹ ತಿಳಿಸುವ ಅಪೂರ್ವ ವಿವರ.

೫. ಇಲ್ಲಿಯ **ಪರಂ ವಚನಂ** ಎಂಬುದಕ್ಕೆ ಪರವಿದ್ಯೆ ಎನ್ನಿಸಿದ ಬ್ರಹ್ಮಸೂತ್ರದ ವಚನ ಎಂದರ್ಥ. ಬ್ರಹ್ಮಸೂತ್ರಗಳು ಸರ್ವೋಚ್ಚ ನಿರ್ಣಾಯಕಶಾಸ್ತ್ರವೆನ್ನಿಸಿರುವುದರಿಂದ, ಅದರಲ್ಲಿ ಬಂದಿರುವ ವಿವರವನ್ನು ಸರ್ವರು ಮಾನ ಮಾಡಲೇಬೇಕು, ಸರ್ವೋಚ್ಚನ್ಯಾಯಾಲಯದ ತೀರ್ಪನ್ನು ಹೇಗೋ ಹಾಗೆ, ಎಂದು ಭಾವ.

**ಆನಂದತೀರ್ಥಸನ್ನಾಮ್ನಾ ಪೂರ್ಣಪ್ರಜ್ಞಾಭಿಧಾಯುಜಾ ।**
**ಕೃತಂ ಹರ್ಯಷ್ಟಕಂ ಭಕ್ತ್ಯಾ ಪಠತಃ ಪ್ರೀಯತೇ ಹರಿಃ ॥ ೯ ॥**

**॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ದ್ವಾದಶಸ್ತೋತ್ರೇ ತೃತೀಯೋಽಧ್ಯಾಯಃ ॥**

---

೧. ಸಾಧನಸ್ಯೋತ್ತಮತ್ವೇನ ಸಾಧ್ಯಂ ಚೋತ್ತಮಮಾಪ್ನುಯುಃ ಇತಿ ಬ್ರಾಹ್ಮೇ ।
– ಬ್ರ.ಸೂ.ಭಾ.(೩/೨/೨೦)

ನೃಪಾದ್ಯಾಃ ಶತಧೃತ್ಯಂತಾಃ ಮುಕ್ತಿಗಾ ಉತ್ತರೋತ್ತರಮ್ ।
ಗುಣೈಃ ಸರ್ವೈಃ ಶತಗುಣಾ ಮೋದಂತ ಇತಿ ಹಿ ಶ್ರುತಿಃ ॥ ಇತಿ ಪಾದ್ಮೇ । – ವಿಷ್ಣುತತ್ತ್ವವಿನಿರ್ಣಯ

**ಪ :** ಆನಂದತೀರ್ಥಸನ್ನಾಮ್ನಾ, ಪೂರ್ಣಪ್ರಜ್ಞಾಭಿಧಾಯುಜಾ, ಕೃತಮ್, ಹರ್ಯಷ್ಟಕಮ್, ಭಕ್ತ್ಯಾ, ಪಠತಃ, ಪ್ರೀಯತೇ, ಹರಿಃ।

**ಅ :** ಪೂರ್ಣಪ್ರಜ್ಞಾಭಿಧಾಯುಜಾ, ಆನಂದತೀರ್ಥಸನ್ನಾಮ್ನಾ, ಕೃತಮ್, ಹರ್ಯಷ್ಟಕಮ್, ಭಕ್ತ್ಯಾ, ಪಠತಃ, ಹರಿಃ, ಪ್ರೀಯತೇ।

**ಪ್ರ.ಪ. : ಪೂರ್ಣಪ್ರಜ್ಞಾಭಿಧಾಯುಜಾ** – ಪೂರ್ಣಪ್ರಜ್ಞರು ಎಂಬ ನಾಮದಿಂದ ಕೂಡಿದ; **ಆನಂದತೀರ್ಥಸನ್ನಾಮ್ನಾ** – ಆನಂದತೀರ್ಥರು ಎಂಬ ಉತ್ತಮ ಹೆಸರಿನವರಿಂದ; **ಕೃತಮ್** – ರಚಿತವಾದ; **ಹರ್ಯಷ್ಟಕಮ್** – ಈ ಶ್ರೀಹರಿಯ ಅಷ್ಟಕವನ್ನು; **ಭಕ್ತ್ಯಾ** – ಭಕ್ತಿಯಿಂದ; **ಪಠತಃ** – ಪಠಿಸುವವರಿಗೆ; **ಹರಿಃ** – ಶ್ರೀಹರಿಯು; **ಪ್ರೀಯತೇ** – ಪ್ರಸನ್ನನಾಗುವನು.

**ಮಧ್ವಮುನಿಯು ಎಂಬ ಹೆಸರ ಪೂರ್ಣಪ್ರಜ್ಞ ರಚಿಸಿದ**
**ಎಂಟು ನುಡಿಯ ಇದನು ಪಠಿಸೆ ಹರಿಯ ಒಲಿಮೆ ನಿಶ್ಚಿತ ॥ ೯ ॥**

**॥ ದ್ವಾದಶಸ್ತೋತ್ರದ ಕನ್ನಡಪದ್ಯಾನುವಾದದಲ್ಲಿ ಮೂರನೆಯ ಅಧ್ಯಾಯ ಮುಕ್ತಾಯವಾಯಿತು ॥**

**ಅನು : ಪೂರ್ಣಪ್ರಜ್ಞ ಎಂಬ ಮತ್ತೊಂದು ಹೆಸರಿನ ಆನಂದತೀರ್ಥರು ಎಂಬ ಉತ್ತಮ ಹೆಸರಿನವರಿಂದ ರಚಿತವಾದ ಈ ಶ್ರೀಹರಿಯ ಉತ್ತಮವಾದ ಅಷ್ಟಕ ಇದಾಗಿದೆ; ಇದನ್ನು ಭಕ್ತಿಯಿಂದ ಪಠಿಸುವವರಿಗೆ ಆ ಶ್ರೀಹರಿಯು ಪ್ರಸನ್ನನಾಗುವನು.**

ವಿ : ೧. ಇದನ್ನು ಬರೆದವರು ಪೂರ್ಣಪ್ರಜ್ಞರು. **ಆನಂದತೀರ್ಥ** ಎಂಬುದು ಅವರ ಮತ್ತೊಂದು ಹೆಸರು ಎಂಬುದೇ ಇದರಿಂದ ತಿಳಿಯುವುದು. ಪ್ರಮಾಣಗಳಿಂದ ತಿಳಿಯುವಂತೆ ಪೂರ್ಣಪ್ರಜ್ಞ ಎಂಬುದು ಅವರ ಆಶ್ರಮನಾಮ. ಆನಂದತೀರ್ಥ ಎಂಬುದು ಅವರ ಪೀಠಾ- ಧಿಪತ್ಯದ ನಾಮ ಎಂಬುದು ಸುಮಧ್ವವಿಜಯದಿಂದ ತಿಳಿದು ಬರುವ ಸಂಗತಿ[೧].

೨. ಈ ಸ್ತೋತ್ರದ ಹೆಸರು **ಹರ್ಯಷ್ಟಕ** ಎಂಬ ವಿವರ ಇಲ್ಲಿದೆ. **ಭಕ್ತ್ಯಾ** ಎಂಬ ಇಲ್ಲಿಯ ಪದ **ಕೃತಂ** ಹಾಗೂ **ಪಠತಃ** ಎಂಬುದಾಗಿ ಎರಡೂ ಕಡೆಯೂ ಅನ್ವಯವಾಗುವುದು. ಭಕ್ತಿಯಿಂದ ರಚಿತವಾದ ಈ ಕೃತಿಯನ್ನು ಭಕ್ತಿಯಿಂದ ಪಠಿಸುವವರಿಗೆ ಶ್ರೀಹರಿಯು ಪ್ರಸನ್ನನಾಗುವನು ಎಂದರ್ಥ.

---

೧. ಆಶ್ರಮದಾನೇ ಪದದಾನೇ ಚ ಗುರುದತ್ತಂ ವಾ ನಾಮದ್ವಯಮಾಹ।

– ಮ.ಭಾ.ತಾ.ನಿ.ಟಿಪ್ಪಣಿ.(ಜ.)

೩. **ಆನಂದತೀರ್ಥಸನ್ನಾಮ್ನಾ** ಎಂಬಲ್ಲಿನ **ಸತ್** ಎಂಬುದಕ್ಕೆ **ಸದಿತಿ ಪ್ರಾಣಃ** ಎಂಬ ಉಪನಿಷದ್ವಾಣಿಯಿಂದ ಮುಖ್ಯಪ್ರಾಣ ಎಂದು ಅರ್ಥವಾಗುವುದು. ಅದರಿಂದ **ಸನ್ನಾಮ್ನಾ** ಎಂಬುದಕ್ಕೆ ಮುಖ್ಯಪ್ರಾಣ ಎಂಬ ವಾಯುದೇವರ ಅವತಾರರಾದ ಶ್ರೀಮಧ್ವಾಚಾರ್ಯರಿಂದ ರಚಿತವಾದ ಅಷ್ಟಕ ಇದು ಎಂಬ ಅರ್ಥ ಸ್ಫುಟಪಡುವುದು.

೪. ಭಕ್ತಿಯಿಂದ ರಚಿತವಾದ ಸ್ತೋತ್ರಮಾತ್ರವೇ ಫಲದಾಯಕ. ಅದರಂತೆ ಭಕ್ತಿಯಿಂದ ಅದರ ಪಠನೆಯು ಸಹ ಫಲದಾಯಕ ಎಂಬುದು ಇಲ್ಲಿಯ ಆದೇಶ. ಆದ್ದರಿಂದ ಶಾಸ್ತ್ರೋಕ್ತವಾದ ಸ್ತೋತ್ರಕೃತಿಗಳ ಪಠನೆಯನ್ನು ಭಕ್ತಿಭಾವದಿಂದ ಪಠಿಸಿದಾಗ ಫಲ ಸಿಗುವುದು ನಿಶ್ಚಿತ ಎಂದು ತಿಳಿಯುವುದು.

೫. ಭಕ್ತಿ ಎಂಬುದಕ್ಕೆ ಅರ್ಥ ಹೀಗಿದೆ:

**ಮಾಹಾತ್ಮ್ಯಜ್ಞಾನಪೂರ್ವಸ್ತು ಸುದೃಢಃ ಸರ್ವತೋಽಧಿಕಃ।**
**ಸ್ನೇಹೋ ಭಕ್ತಿರಿತಿ ಪ್ರೋಕ್ತಸ್ತಯಾ ಮುಕ್ತಿರ್ನ ಚಾನ್ಯಥಾ ॥**

- ಮ.ಭಾ.ತಾ.ನಿ. (೧/೮೫)

೬. ನ್ಯಾಯಸುಧೆಯಲ್ಲಿ ಬಂದಿರುವ ಇದರ ವಿವರಣೆ ಹೀಗಿದೆ:

**ಪರಮೇಶ್ವರಭಕ್ತಿರ್ನಾಮ ನಿರವಧಿಕಾನಂತಾನವದ್ಯಕಲ್ಯಾಣಗುಣತ್ವಜ್ಞಾನಪೂರ್ವಕಃ ಸ್ವಾತ್ಮಾತ್ಮೀಯಸಮಸ್ತವಸ್ತುಭ್ಯೋಽನೇಕಗುಣಾಧಿಕೋಽಂತರಾಯಸಹಸ್ರೇಣಾಪ್ಯ-ಪ್ರತಿಬದ್ಧನಿರಂತರಪ್ರೇಮಪ್ರವಾಹಃ'** - **ನ್ಯಾಯಸುಧಾ (೧/೧/೧೩)**

– ಶ್ರೀಹರಿಯಲ್ಲಿ ಅವನು ಅನಂತಾನಂತಕಲ್ಯಾಣಗುಣಗಣಪರಿಪೂರ್ಣ ಎಂಬ ಜ್ಞಾನಪೂರ್ವಕವಾಗಿ, ಅತ್ಯಂತ ದೃಢವಾಗಿ, ತನ್ನ ಹಾಗೂ ತನ್ನವರ ಮೇಲಿನ ಪ್ರೀತಿಗಿಂತ ಹೆಚ್ಚಿನ ಪ್ರೀತಿಯಿಂದ ಎಷ್ಟೇ ಅಡೆತಡೆಗಳು ಬಂದರೂ ನಿಲ್ಲಿಸದೆ, ಪ್ರೀತಿಯಿಂದ ಆರಾಧಿಸುವುದು ಭಕ್ತಿ ಎನ್ನಿಸುವುದು ಎಂದರ್ಥ; ಇದಕ್ಕೆ ಪ್ರಹ್ಲಾದ ಮೊದಲಾದವರು ಉತ್ತಮ ನಿದರ್ಶನ.

೭. ಒಟ್ಟಾಗಿ ನಿರ್ಮಲವಾದ ಭಕ್ತಿಗೆ ಜ್ಞಾನವು ಮುಖ್ಯಕಾರಣ. ಅಂತಹ ಜ್ಞಾನಪ್ರಾಪ್ತಿಗೆ ಫಲಾಪೇಕ್ಷೆರಹಿತವಾದ ಕೃಷ್ಣಾರ್ಪಣಪೂರ್ವಕವಾದ, ನಿಷ್ಕಾಮಕರ್ಮದ ಅನುಷ್ಠಾನದ ಸಾಧನೆ ಎಂದು ಶಾಸ್ತ್ರಗಳು ತಿಳಿಸಿವೆ.

*****

## ೪. ಚತುರ್ಥಾಧ್ಯಾಯ (ಶ್ರೀಹರಿಸ್ತವನ)

**ನಿಜಪೂರ್ಣಸುಖಾಮಿತಬೋಧತನುಃ**
**[೧]ಪರಶಕ್ತಿರನಂತಗುಣಃ[೨] ಪರಮಃ ।**
**[೩]ಅಜರಾಮರಣಃ ಸಕಲಾರ್ತಿಹರಃ**
**ಕಮಲಾಪತಿರೀಢ್ಯತಮೋಽವತು ನಃ ॥ ೧ ॥**

**ಪ :** ನಿಜಪೂರ್ಣಸುಖಾಮಿತಬೋಧತನುಃ, ಪರಶಕ್ತಿಃ, ಅನಂತಗುಣಃ, ಪರಮಃ, ಅಜರಾಮರಣಃ, ಸಕಲಾರ್ತಿಹರಃ, ಕಮಲಾಪತಿಃ, ಈಢ್ಯತಮಃ, ಅವತು, ನಃ ।

**ಅ :** ನಿಜಪೂರ್ಣಸುಖಾಮಿತಬೋಧತನುಃ, ಪರಶಕ್ತಿಃ, ಅನಂತಗುಣಃ, ಪರಮಃ, ಅಜರಾಮರಣಃ, ಸಕಲಾರ್ತಿಹರಃ, ಈಢ್ಯತಮಃ, ಕಮಲಾಪತಿಃ, ನಃ, ಅವತು ।

**ಪ್ರ.ಪ. : ನಿಜಪೂರ್ಣಸುಖಾಮಿತಬೋಧತನುಃ[೪]** – ಸಹಜವಾದ ಪರಿಪೂರ್ಣಸುಖ ಹಾಗೂ ಮಿತಿ ಇರದ ಜ್ಞಾನದೇಹನಾದ; **ಪರಶಕ್ತಿಃ** – ಶ್ರೇಷ್ಠ ಶಕ್ತಿಶಾಲಿಯಾದ; **ಅನಂತಗುಣಃ** – ಅನಂತಗುಣಗಳಿಂದ ಕೂಡಿದ; **ಪರಮಃ** – ಸರ್ವೋತ್ತಮನಾದ; **ಅಜರಾಮರಣಃ** – ಮುಪ್ಪುಸಾವುಗಳಿರದ; **ಸಕಲಾರ್ತಿಹರಃ** – ಸಕಲ ನೋವನ್ನು ಪರಿಹರಿಸುವ; **ಈಢ್ಯತಮಃ** – ಅತ್ಯಂತ ಸ್ತುತ್ಯನಾದ; **ಕಮಲಾಪತಿಃ** – ಇಂದಿರಾಪತಿಯಾದ ಶ್ರೀಹರಿಯು; **ನಃ** – ನಮ್ಮನ್ನು; **ಅವತು** – ಪಾಲಿಸಲಿ.

**ನಿತ್ಯಸುಖದಿ ಪೂರ್ಣನಿವನು ಅಮಿತಜ್ಞಾನದೇಹನು**
**ಪೂಣಶಕ್ತ ನಿತ್ಯಗುಣನು ನಿರುತ ಸರ್ವಶ್ರೇಷ್ಠನು ।**
**ಜರೆಯು ಇರದ ಅಳಿವು ಇರದ ಸಕಲದುಃಖನಾಶಕ**
**ರಮೆಯ ಅರಸ ಪೂಜ್ಯತಮನು ಸತತ ನಮ್ಮ ಸಲಹಲಿ ॥ ೧ ॥**

---

೧. **ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ ।**
– ಶ್ವೇತಾಶ್ವತರೋಪನಿಷತ್

**ವಿಚಿತ್ರಶಕ್ತಿಃ** ಪುರುಷಃ ಪುರಾಣೋ ನ ಚಾನ್ಯೇಷಾಂ ಶಕ್ತಯಸ್ತಾದೃಶಾಃ ಸ್ಯುಃ
(ಇತಿ ಶ್ವೇತಾಶ್ವತರಶ್ರುತಿಃ) – ಬ್ರ.ಸೂ.ಭಾ.(೨/೧/೨೯)

೨. **ಅನಂತೋ** ಹುತಭುಗ್ಭೋಕ್ತಾ, ಅನಂತರೂಪೋಽನಂತಶ್ರೀಃ, – ವಿಷ್ಣುಸಹಸ್ರನಾಮ

ಅನಂತನಾಮಕತ್ವಾಚ್ಚ ಸೋಽನಂತಗುಣ ಈರಿತಃ । (ಇತಿ ಬ್ರಹ್ಮಾಂಡೇ) – ಐತರೇಯಭಾಷ್ಯ

೩. ಯ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋಽವಿಜಿಘತ್ಸೋಽಪಿಪಸಃ ಸತ್ಯಕಾಮಃ ಸತ್ಯಸಂಕಲ್ಪಃ ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ । – ಬ್ರ.ಸೂ.ಭಾ. (೧/೩/೧೪)

೪. ಪೂರ್ಣೋ ಭೂತಿವರೋಽನಂತಸುಖೋ ಯದ್ವ್ಯಾಹೃತೀರಿತಃ । – ಋಗ್ಭಾಷ್ಯ

**ಅನು : ಶ್ರೀಹರಿಯು ಸ್ವಾಭಾವಿಕವಾದ ಪರಿಪೂರ್ಣಸುಖವುಳ್ಳವನು, ಮಿತಿ ಇರದ ಜ್ಞಾನಶರೀರನು, ಮಹಾಶಕ್ತಿಶಾಲಿಯಾದವನು, ಅನಂತಗುಣಗಳಿಂದ ಕೂಡಿದವನು, ಸರ್ವೋತ್ತಮನು, ಮುಪ್ಪುಸಾವುಗಳಿರದವನು, ಸಕಲ ನೋವನ್ನು ಪರಿಹರಿಸುವವನು, ಅತ್ಯಂತ ಸ್ತುತ್ಯನಾದವನು, ಮಹಾಲಕ್ಷ್ಮಿಗೆ ಪತಿಯಾದವನು; ಅವನು ನಮ್ಮನ್ನು ಪಾಲಿಸಲಿ.**

ವಿ: ೧. ಶ್ರೀಹರಿಯು ಪರಿಪೂರ್ಣವಾದ ನಿತ್ಯಸುಖದಿಂದ ಕೂಡಿದವನು ಎಂದರೆ, ನಿತ್ಯಮುಕ್ತ ಎಂದರ್ಥ. ಪೂರ್ಣಸುಖ ಎಂದರೆ ಪರಿಪೂರ್ಣವಾದ, ಸ್ವತಂತ್ರವಾದ ಸುಖ ಎಂದರ್ಥ. ಮಹಾಲಕ್ಷ್ಮಿಯದು ಪೂರ್ಣಸುಖವಾದರೂ, ಅದು ಸ್ವತಂತ್ರವಾದುದಲ್ಲ. ಭಗವಂತನ ಅಧೀನವಾದುದು. ಶ್ರೀಹರಿಯದು ಮಾತ್ರ ಸ್ವತಂತ್ರವಾದ ಪೂರ್ಣಸುಖ ಎಂದರ್ಥ.

೨. **ನಿಜಪೂರ್ಣಸುಖಾಮಿತಬೋಧತನುಃ** ಎಂಬಲ್ಲಿ – ನಿಜಪೂರ್ಣಸುಖ ಎಂದರೆ ಸಹಜವಾದ ಪೂರ್ಣಾನಂದ ಎಂದರ್ಥ. **ಬೋಧ** ಎಂದರೆ ಜ್ಞಾನ, **ಅಮಿತಬೋಧ** ಎಂದರೆ ಪರಿಪೂರ್ಣವಾದ ಜ್ಞಾನ. ಇಲ್ಲಿ ಸುಖ ಹಾಗೂ ಬೋಧಶಬ್ದಗಳಿಂದ ಬಲ ಮೊದಲಾದ ಇತರ ಸಕಲ ಗುಣಗಳು ಸಹ ಉಪಲಕ್ಷಿತ ಎಂದು ತಿಳಿಯಬೇಕು. ಎಂದರೆ ಶ್ರೀಹರಿಯು ಜ್ಞಾನಾನಂದಮಯಶರೀರನೇ ಹೊರತು, ಸಂಸಾರಿಜೀವರಂತೆ ಲಿಂಗದೇಹ, ಪ್ರಾಕೃತದೇಹ ಮೊದಲಾದವುಗಳನ್ನು ಹೊಂದಿದವನಲ್ಲ ಎಂದರ್ಥ. ಇದರಿಂದ ಶ್ರೀಹರಿಯು ನಿರಾಕಾರ ಎಂಬ ಪದವು ಸಮಂಜಸವಲ್ಲ ಎಂದಾಗುವುದು. ಶ್ರೀಹರಿಯು ನಿರಾಕಾರ ಎಂದರೆ, ಆಕಾರವಿಲ್ಲದ ಅವನು ಸಾಕಾರವುಳ್ಳ ಜಗತ್ತನ್ನು ಹೇಗೆ ನಿರ್ಮಿಸಬಲ್ಲ ಎಂಬ ಆಕ್ಷೇಪಕ್ಕೆ ಅವಕಾಶವಿದೆ. ಸಾಕಾರ ಎಂದರೆ ನಮ್ಮಂತೆ ಪ್ರಾಕೃತಶರೀರದ ಅವನು ಹೇಗೆ ನಿತ್ಯಸುಖಿಯಾದಾನು? ಅಮರನಾದಾನು? ಎಂಬ ಆಕ್ಷೇಪಕ್ಕೂ ಅವಕಾಶವಿದೆ. ಇದೆಲ್ಲಕ್ಕೂ ಅವನದು ಜ್ಞಾನಾನಂದಮಯನಾದ ಅಪ್ರಾಕೃತಶರೀರ ಎಂಬ ಮಾತು ಉತ್ತರವಾಗಿದೆ.

೩. **ಪರಶಕ್ತಿಃ** – ಶ್ರೀಹರಿಯು ಪೂರ್ಣವಾದ ಶಕ್ತಿಯುಳ್ಳವನು ಎಂದರ್ಥ. ಪರ ಎಂಬುದಕ್ಕೆ ವಿಭಿನ್ನವಾದ, ಶ್ರೇಷ್ಠವಾದ ಎಂದೂ ಅರ್ಥ. ಹರಿರೇವ ಪರಃ ಎಂಬಲ್ಲಿ ಹೇಗೋ ಹಾಗೆ. ಇದರಿಂದ ಶ್ರೀಹರಿಯ ಶಕ್ತಿ ಇತರರ ಶಕ್ತಿಯಂತಲ್ಲ. ಅವನದು ಪರಿಪೂರ್ಣವಾದ, ನಿರವಧಿಕವಾದ, ಅನಾದಿನಿತ್ಯವಾದ, ಅಚಿಂತ್ಯಾತ್ಮಕವಾದ ಶಕ್ತಿ ಎಂದರ್ಥ. ಸರ್ವಶಕ್ತ ಎಂದು ಒಟ್ಟು ಭಾವ.

೪. **ಅನಂತಗುಣಃ** – ಅನಂತಗುಣ ಎಂದರೆ ದೇಶತಃ ಹಾಗೂ ಕಾಲತಃ ನಾಶವಾಗದ ಅನಾದಿನಿತ್ಯವಾದ, ಎಣಿಕೆಗೆ ಎಂದೂ ನಿಲುಕದ ಗುಣಗಳನ್ನು ಹೊಂದಿದವನು ಎಂದರ್ಥ. ಮೊದಲನೆಯ ಅಧ್ಯಾಯದ ಕೊನೆಯ ಶ್ಲೋಕದಲ್ಲಿ ಹೇಳಿದಂತೆ ರಮಾಬ್ರಹ್ಮಾದಿ ಸಮಸ್ತ

ದೇವತೆಗಳು ಒಟ್ಟಾಗಿ ಎಡೆಬಿಡದೆ ಸ್ತುತಿಸುತ್ತಿದ್ದರೂ, ಅವನ ಒಂದು ಗುಣವನ್ನೂ ಸಹ ಪೂರ್ಣವಾಗಿ ಎಣಿಸಲು ಸಮರ್ಥರಾಗಲಾರರು ಎಂದು ಭಾವ.

೫. **ಪರಮಃ**[೧] – ಪರಮಃ ಎಂದರೆ ಸರ್ವಶ್ರೇಷ್ಠ ಎಂದರ್ಥ. ಅದರಂತೆ **ಪರಾ ಮಾ** ಪರವಾದ ವಿದ್ಯೆ; ಬ್ರಹ್ಮಸೂತ್ರಾದಿ ಶಾಸ್ತ್ರಗಳ ರಚನೆ ಮಾಡಿದವನು ಎಂದೂ ಅರ್ಥ. **ಪರಾ ಮಾ** ಮಹಾಲಕ್ಷ್ಮಿಯು ಸರ್ವಶ್ರೇಷ್ಠಳಾಗಿರುವುದು ಇವನ ಅನುಗ್ರಹದಿಂದಾಗಿಯೇ ಎಂದೂ, ಆರಾಧಕನಾದವನಿಗೆ ಪರಿಪೂರ್ಣವಾದ ವಿದ್ಯೆ ಎಂದರೆ ಅಪರೋಕ್ಷಜ್ಞಾನವು ಲಭಿಸುವುದು ಸಹ ಅವನಿಂದಲೇ ಎಂದೂ ಅನೇಕ ಬಗೆಯ ಅರ್ಥಗಳನ್ನು ತಿಳಿಯಬೇಕು.

೬. **ಅಜರಾಮರಣಃ** – ಜರಾ ಎಂದರೆ ಮುಪ್ಪು, ಮರಣ ಎಂದರೆ ಸಾವು; ಶ್ರೀಹರಿಯು ಅಜರನು, ಅಮರನು ಆಗಿರುವನು. ಹುಟ್ಟುಸಾವುಗಳಿಲ್ಲದ ಅನಾದಿನಿತ್ಯನಾದವನು ಎಂದರ್ಥ. ಅದರಂತೆ ಇತರರು ಅಜರರು, ಅಮರರು ಆಗುವುದು ಇವನ ಅನುಗ್ರಹದಿಂದಲೇ ಎಂದರ್ಥ. ಅಜರರಾದ ದೇವತೆಗಳಿಗೆ ಅಮರಣ ಎಂದರೆ ಮುಕ್ತಿ ಲಭಿಸುವುದು ಸಹ ಇವನಿಂದಲೆ ಎಂದು ಭಾವ. ಆದ್ದರಿಂದಲೇ ಎಣಿಕೆಯಿಲ್ಲದ ಹುಟ್ಟುಗಳನ್ನು, ಅದರಂತೆ ಮುಪ್ಪನ್ನು ಸಹ ಕಾಣುವ ಜೀವರು ಸರ್ವಥಾ ಶ್ರೀಹರಿಯಿಂದ ಭಿನ್ನರು ಹಾಗೂ ಅತ್ಯಂತ ಕಡಿಮೆಯವರು ಎಂದು ಭಾವ.

೭. **ಸಕಲಾರ್ತಿಹರಃ** – ಆರ್ತಿ ಎಂದರೆ ನೋವು; ಶ್ರೀಹರಿಯು ಸಕಲರ ನೋವನ್ನು ಸಹ ಪರಿಹರಿಸುವವನು ಎಂದರ್ಥ. ಅದರಂತೆ ಸಕಲವಿಧವಾದ ಆರ್ತಿಯನ್ನು ಸಹ ಪರಿಹರಿಸುವವನು. ಆಧ್ಯಾತ್ಮಿಕ, ಆಧಿದೈವಿಕ ಹಾಗೂ ಆಧಿಭೌತಿಕ ಎಂಬ ತಾಪತ್ರಯ ಪರಿಹಾರಕ; ಒಟ್ಟಾಗಿ ಮುಕ್ತಿಪ್ರದಾಯಕ ಎಂದರ್ಥ.

ಸಕಲರ ನೋವನ್ನು ಪರಿಹರಿಸುವ ಅಪೂರ್ವತೆ ಶ್ರೀಹರಿಯದು; ಆದರೆ ಜೀವರು ಹಾಗಲ್ಲ; ಅವರಿಗೆ ಅವರಿವರ ನೋವನ್ನು ಪರಿಹರಿಸುವ ಶಕ್ತಿ ಸೀಮಿತವಾದ ಅರ್ಥದಲ್ಲಿ ಮಾತ್ರ ಇರುವುದು. ಅನೇಕ ಬಾರಿ ತನ್ನ ನೋವನ್ನೇ ಪರಿಹರಿಸಿಕೊಳ್ಳುವ ಶಕ್ತಿಯೂ ಇರುವುದಿಲ್ಲ; ಅತ್ಯಂತ ನಿಪುಣವಾದ ಕಣ್ಣಿನ ವೈದ್ಯ ತನ್ನ ಕಣ್ಣಿನ ಪೊರೆಯನ್ನೇ ತೆಗೆದುಕೊಳ್ಳಲಾರ. ಹಾಗೇನಾದರೂ ಪ್ರಯತ್ನಿಸಿದರೆ ಕಣ್ಣನ್ನೇ ಕಳೆದುಕೊಳ್ಳುವ ಅಪಾಯವು ನಿಶ್ಚಿತ. ಅದರಂತೆ ಹೃದಯತಜ್ಞ ಮೊದಲಾದವರ ಪರಿಸ್ಥಿತಿಯೂ ಸಹ. ಆದರೆ ಶ್ರೀಹರಿ ಸಕಲ ನೋವನ್ನು

೧. 'ಅಥ ಕಸ್ಮಾದುಚ್ಯತೇ ಪರಮ ಇತಿ ಪರಮಾದ್ಧ್ಯೇತೇ ನಾಮರೂಪೇ ವ್ಯಾಕ್ರಿಯೇತೇ ತಸ್ಮಾದೇನಮಾಹುಃ **ಪರಮ** ಇತಿ । ಅಥ ಕಸ್ಮಾದುಚ್ಯತೇ ಬ್ರಹ್ಮೇತಿ ಬೃಹತ್ತ್ವಾದ್ ಬೃಂಹಣತ್ವಾಚ್ಚ' ಇತ್ಯಾಗ್ನಿವೇಶ್ಯಶ್ರುತಿಃ । – ಬ್ರ.ಸೂ.ಭಾ.(೨/೪/೨೧)

'ಆತ್ಮಾ ಹಿ **ಪರಮಃ** ಸ್ವತಂತ್ರೋಽಗುಣೋ ಜೀವೋಽಲ್ಪಶಕ್ತಿರಸ್ವಾತಂತ್ರೋಽವರಃ'

– ಇತಿ ಚ ಭಾಲ್ಲವೇಯಶ್ರುತಿಃ ।

ಪರಿಹರಿಸಬಲ್ಲ ಎಂದರೆ ಅವನಿಗೆ ಯಾವ ನೋವು ಸಹ ಇರುವುದೇ ಇಲ್ಲ ಹಾಗೂ ಇತರರ ನೋವನ್ನು ಪರಿಹರಿಸಬಲ್ಲ ಎಂದರ್ಥ. ಆದರಂತೆ ವೈದ್ಯರು ಮೊದಲಾದವರು ಸಹ ತಮ್ಮ ವೃತ್ತಿ ಹಾಗೂ ಸಾಮರ್ಥ್ಯಕ್ಕೆ ತಕ್ಕಂತೆ ಇತರರ ನೋವನ್ನು ಸ್ವಲ್ಪ ಮಟ್ಟಿಗೆ ಪರಿಹರಿಸಬಲ್ಲರು. ಶಾಶ್ವತ ಪರಿಹಾರವಂತೂ ಸರ್ವಥಾ ಅಶಕ್ಯ. ಶ್ರೀಹರಿಯು ಹಾಗಲ್ಲ; ಅನಂತ ಜೀವಿಗಳ ಅನಂತ ಸಮಸ್ಯೆಗಳನ್ನು ಕೂಡಲೇ ಪೂರ್ಣವಾಗಿ ಪರಿಹರಿಸಬಲ್ಲ ಸಮರ್ಥ. ಇನ್ನು ವೈದ್ಯ ಮೊದಲಾದವರು ಎಷ್ಟೇ ತಜ್ಞರಾದರೂ ಸಕಲರ ರೋಗಗಳನ್ನು ಪರಿಹರಿಸಲಾರರು. ಅವರು ತಮ್ಮ ಶಕ್ತಿಗೆ ತಕ್ಕಂತೆ ಕೆಲವು ಕಾಲ ಮಾತ್ರ ಕೆಲವರ ಸಮಸ್ಯೆಯನ್ನು ಮಾತ್ರ ಪರಿಹರಿಸಬಲ್ಲರು. ಆದರೆ ಶ್ರೀಹರಿಯು ಹಾಗಲ್ಲ ಎಲ್ಲರ ಸಮಸ್ಯೆಯನ್ನು ಎಲ್ಲಾ ಕಾಲದಲ್ಲೂ ಶಾಶ್ವತವಾಗಿ ಪರಿಹರಿಸಬಲ್ಲ ಎಂದರ್ಥ.

೮. **ಕಮಲಾಪತಿಃ** – ಕಮಲಾ[1] ಎಂದರೆ ಮಹಾಲಕ್ಷ್ಮಿ; ಕಮಲಾಪತಿ ಎಂದರೆ ಮಹಾಲಕ್ಷ್ಮಿಯ ಪತಿ ಎಂದರ್ಥ. ಮಹಾಲಕ್ಷ್ಮಿಯು ಸಹ ಶ್ರೀಹರಿಯಂತೆ ಅಜರಾಮರಣಳು; ಅಪ್ರಾಕೃತ ದೇಹದವಳು. ಅಂತಹ ಮಹಾಲಕ್ಷ್ಮಿಗೂ ಪತಿಯಾದ ಶ್ರೀಹರಿ ಅವರಿಗಿಂತಲೂ ಮಿಗಿಲಾದ ಪುರುಷೋತ್ತಮ. ಭಗವದ್ಗೀತೆಯ ಹದಿನೈದನೆಯ ಅಧ್ಯಾಯದಲ್ಲಿ ನಿರೂಪಿತವಾಗಿರುವ ಕ್ಷರಾಕ್ಷರಪುರುಷೋತ್ತಮ ಎಂದರ್ಥ.

೯. **ಈಡ್ಯತಮಃ – ಈಡ್ಯತಮಃ** ಎಂದರೆ ಸ್ತುತಿಸಲು ಅತ್ಯಂತ ಅರ್ಹನಾದವನು ಎಂದರ್ಥ. ಸ್ತೋತ್ತಮರೆಲ್ಲರೂ ಈಡ್ಯರೇ. ಸಕಲವಿಧದಲ್ಲೂ ಈಡ್ಯರು ಎಂದರೆ ದೇವತೆಗಳು; ಮುಖ್ಯವಾಗಿ ಋಜುಗಳಾದ ಬ್ರಹ್ಮಾದಿಗಳು. ಅವರಿಗಿಂತ ಮಿಗಿಲಾದ ಮಹಾಲಕ್ಷ್ಮಿ ಈಡ್ಯತರಳು. ಅವರ ಪತಿಯಾದ ಶ್ರೀಹರಿ ಈಡ್ಯತಮ ಎಂದರ್ಥ.

**ಯದಸುಪ್ತಿಗತೋಽಪಿ ಹರಿಃ [2]ಸುಖವಾನ್**
**ಸುಖರೂಪಿಣಮಾಹುರತೋ ನಿಗಮಾಃ ।**
**ಸ್ವಮತಿಪ್ರಭವಂ[3] ಜಗದಸ್ಯ ಯತಃ**
**ಪರಬೋಧತನುಂ ಚ ತತಃ ಖಪತಿಮ್ ॥ ೨ ॥**

**ಪ :** ಯತ್, ಅಸುಪ್ತಿಗತಃ, ಅಪಿ, ಹರಿಃ, ಸುಖವಾನ್, ಸುಖರೂಪಿಣಮ್, ಆಹುಃ, ಅತಃ, ನಿಗಮಾಃ, ಸ್ವಮತಿಪ್ರಭವಮ್, ಜಗತ್, ಅಸ್ಯ, ಯತಃ, ಪರಬೋಧತನುಮ್, ಚ, ತತಃ, ಖಪತಿಮ್ ।

---

೧. ಲಕ್ಷ್ಮೀಃ ಪದ್ಮಾಲಯಾ ಪದ್ಮಾ ಕಮಲಾ ಶ್ರೀರ್ಹರಿಪ್ರಿಯಾ । – ಅಮರಕೋಶ

೨. ಜಾಗ್ರದಾದ್ಯಾಃ ಕರ್ಮ ಚೈವ ಸುಖದುಃಖೇ ಚ ತಸ್ಯ ಹಿ ।
ಜಾಗ್ರದಾದೇಃ ಪರೋ ದ್ರಷ್ಟಾ ಸುಖನಿಷ್ಠೋ ಹರಿಃ ಸ್ಮೃತಃ ॥ – ಭಾಗ.ತಾ.ನಿ. (೭/೭/೨೭)

೩. ಪ್ರಭವಃ ಪ್ರಭುರೀಶ್ವರಃ – ವಿಷ್ಣುಸಹಸ್ರನಾಮ

**ಅ :** ಯತ್, ನಿಗಮಾಃ, ಹರಿಃ, ಅಸುಪ್ತಿಗತಃ, ಅಪಿ, ಸುಖವಾನ್, ಅತಃ, ಸುಖರೂಪಿಣಮ್, ಆಹುಃ, ಯತಃ, ಜಗತ್, ಅಸ್ಯ, ಸ್ವಮತಿಪ್ರಭವಮ್, ತತಃ, ಪರಬೋಧತನುಮ್, ಖಪತಿಮ್ ಚ, ಆಹುಃ।

**ಪ್ರ.ಪ. : ಯತ್** – ಯಾವ ಕಾರಣದಿಂದ; **ನಿಗಮಾಃ** – ವೇದಗಳು; **ಹರಿಃ** – ಶ್ರೀಹರಿಯು; **ಅಸುಪ್ತಿಗತಃ ಅಪಿ** – ನಿದ್ರೆ ಇರದವನಾದರೂ; **ಸುಖವಾನ್** – ಸುಖಿಯಾಗಿರುವನೋ; **ಅತಃ**– ಆ ಕಾರಣದಿಂದ; **ಸುಖರೂಪಿಣಮ್** – ಆನಂದಸ್ವರೂಪಿಯಾದವನು; **ಆಹುಃ** – ಎಂದು ಹೇಳುವವು; **ಯತಃ** – ಯಾವ ಕಾರಣದಿಂದ; **ಜಗತ್** – ಜಗತ್ತು; **ಅಸ್ಯ** – ಅವನ; **ಸ್ವಮತಿ- ಪ್ರಭವಮ್** – ಸ್ವಂತ ಬುದ್ಧಿಯಿಂದ ಹುಟ್ಟಿರುವುದೋ; **ತತಃ** – ಆ ಕಾರಣದಿಂದ (ಅವನನ್ನು); **ಪರಬೋಧತನುಮ್** – ಶ್ರೇಷ್ಠವಾದ ಜ್ಞಾನಶರೀರನು ಹಾಗೂ; **ಖಪತಿಮ್ ಚ** – ಅವ್ಯಾಕೃತಾಕಾಶಕ್ಕೆ ಅಭಿಮಾನಿನಿಯಾದ ಮಹಾಲಕ್ಷ್ಮಿಯ ಪತಿ; **ಆಹುಃ** – ಎಂದು ಹೇಳುವವು.

**ನಿದ್ರೆ ಇರದೆ ಪೂರ್ಣಸುಖದಿ ಇಹನು ಆದ ಕಾರಣ**<br>**ಸುಖಸ್ವರೂಪಿ ಎಂದು ವೇದ ಸ್ತುತಿಸುತಿರುವುದಾತನ।**<br>**ತನ್ನ ಇಚ್ಛೆಯಂತೆ ನಿರುತ ಜಗವನೆಲ್ಲ ಸೃಜಿಸುವ**<br>**ಜ್ಞಾನದೇಹ ಇಂದ್ರಿಯೇಶ ಅಂತೆ ಇವನು ನಿತ್ಯದಿ ॥ ೨ ॥**

**ಅನು : ವೇದಗಳು ಶ್ರೀಹರಿಯು ನಿದ್ರೆ ಇರದವನಾದರೂ ಸುಖಿಯಾಗಿರುವನು, ಆದ್ದರಿಂದ ಅವನು ಆನಂದಸ್ವರೂಪಿಯಾದವನು ಎಂದು ಹೇಳುವವು, ಜಗತ್ತು ಅವನ ಸ್ವಬುದ್ಧಿಯಿಂದ ಸೃಷ್ಟಿಯಾದದ್ದು, ಅದರಿಂದ ಅವನು ಶ್ರೇಷ್ಠವಾದ ಜ್ಞಾನಶರೀರನು, ಹಾಗೂ ಅವ್ಯಾಕೃತಾಕಾಶಕ್ಕೆ ಅಭಿಮಾನಿನಿಯಾದ ಮಹಾಲಕ್ಷ್ಮಿಗೆ ಪತಿ ಎಂದು ಸಹ ಹೇಳುವವು.**

ವಿ : ೧. ಸಾಮಾನ್ಯವಾಗಿ ಜೀವಿಗಳು ಅತಿ ಹೆಚ್ಚು ಸುಖಪಡುವುದು ನಿದ್ರಾವಸ್ಥೆಯಲ್ಲಿ ಮಾತ್ರ. ಪ್ರತಿಯೊಬ್ಬನೂ ಸಹ ಅಂತಹ ಸುಖವನ್ನು ಎಚ್ಚರದ ಸ್ಥಿತಿಯಲ್ಲಿ ಪೂರ್ಣವಾಗಿ ಪಡೆಯಲಾರ. ಅದಕ್ಕಂದೇ ನಿದ್ರೆ ಬಾರದಿರುವುದು ಅತಿ ದೊಡ್ಡಸಮಸ್ಯೆಯೆಂದು, ಅದರ ಪರಿಹಾರಕ್ಕಾಗಿ ವೈದ್ಯರನ್ನು ಔಷಧಿಗಳನ್ನು ಆಶ್ರಯಿಸುವರು. ಶ್ರೀಹರಿಯು ಹಾಗಲ್ಲ ಅವನಿಗೆ ನಿದ್ರೆಯೂ ಇಲ್ಲ, ಸ್ವಪ್ನವೂ ಇಲ್ಲ. ಆದರೆ ಅವನಿಗಿರುವ ಆನಂದ ಅನಂತಾನಂತ ಇದರಿಂದಾಗಿ ಅವನು ಪರಿಪೂರ್ಣ ಸುಖಿ ಎಂದು ವೇದಗಳು ಸಾರುವವು. ಎಂತಹ ಉತ್ತಮ ಪದವಿ, ವಾರ್ತೆ, ಭೋಗ ಮೊದಲಾದವುಗಳು ಲಭಿಸಿದಾಗಲೂ ಸಹ ಕೊನೆಗೆ ನಿದ್ರೆಯನ್ನು ಮಾಡುವುದು ಸರ್ವಥಾ ತಪ್ಪದು. ಅದಕ್ಕೆ ಕಾರಣ, ಆ ಎಲ್ಲವುಗಳಿಗಿಂತಲೂ ಮಿಗಿಲಾದ

ಸುಖ ನಿದ್ರೆಯಲ್ಲಿರುವುದು. ಆದರೆ, ಶ್ರೀಹರಿ ಅಂತಹ ನಿದ್ರೆಯನ್ನು ಅನಾದ್ಯನಂತಕಾಲದಲ್ಲಿ ಒಮ್ಮೆಯೂ ಸಹ ಮಾಡದೆ, ಪರಿಪೂರ್ಣಸುಖಿಯಾಗಿರುವನು. ಆದ್ದರಿಂದಲೇ ಅವನು ಸಹಜವಾದ ನಿತ್ಯಸುಖಿ ಎಂಬ ವಿಶೇಷಾಂಶ ತಿಳಿಯುವುದು.

೨. **ಪರಶಕ್ತಿಃ** – ಶ್ರೀಹರಿಯ ಶಕ್ತಿ ಅತ್ಯಂತಪೂರ್ಣ, ಶ್ರೇಷ್ಠ ಹಾಗೂ ವಿಲಕ್ಷಣ. ಅದಕ್ಕೆ ಅವನು ಬಹುತೆರನಾದ, ಚಿತ್ರವಿಚಿತ್ರವಾದ ಈ ಜಗತ್ತನ್ನು ಸೃಷ್ಟಿಸುತ್ತಿರುವುದೇ ಕಾರಣ. ಸೃಷ್ಟಿಯ ವೈವಿಧ್ಯದೊಂದಿಗೆ, ಅದನ್ನು ಸೃಷ್ಟಿಸುವ ಶ್ರೀಹರಿಯ ಅಪಾರಶಕ್ತಿಯ ವರ್ಣನೆಯು ಇದರಲ್ಲಿ ಬಂದಿದೆ. ಶ್ರೀಹರಿಯ ಸೃಷ್ಟಿಯು ಶುದ್ಧಸೃಷ್ಟಿ, ಪರಾಧೀನವಿಶೇಷಾವಾಪ್ತಿರೂಪ ಸೃಷ್ಟಿ; ಮಿಶ್ರಸೃಷ್ಟಿ ಹಾಗೂ ಕೇವಲಸೃಷ್ಟಿ ಎಂಬುದಾಗಿ ನಾಲ್ಕು ಬಗೆ. ಇಂತಹ ನಾಲ್ಕೂ ಬಗೆಯ ಸೃಷ್ಟಿಯನ್ನು ಸಹ ಶ್ರೀಹರಿಯು ಅನಾದಿಕಾಲದಿಂದ ಅನಂತಕಾಲದವರೆಗೆ ತಾನೊಬ್ಬನೇ ಮಾಡುವನು. ಇದು ಅವನ ಸರ್ವಶ್ರೇಷ್ಠವಾದ ಶಕ್ತಿಯುಳ್ಳವನು ಎಂಬುದಕ್ಕೆ ನಿದರ್ಶನ.

೩. ಇವನು ಅತ್ಯದ್ಭುತವಾದ ಈ ಜಗತ್ತನ್ನು ಸೃಷ್ಟಿಸುವನು. ಇದಕ್ಕೆ ಅವನಿಗೆ ಇತರರ ನೆರವಿನ ಅಗತ್ಯವಿಲ್ಲ. ಆದ್ದರಿಂದಲೇ ಅವನು ಶಿಷ್ಟವಾದ ಜ್ಞಾನಮಯ ಶರೀರ ಎಂದು ಶ್ರುತಿಗಳು ಕೊಂಡಾಡಿವೆ. ರಮಾಬ್ರಹ್ಮಾದಿಗಳು ಸಹ ಈ ಸೃಷ್ಟಿಯಲ್ಲಿ ಪಾಲ್ಗೊಳ್ಳುವರಾದರೂ, ಅವರು ಹಾಗೆ ಮಾಡುವುದು ಅವನಿಗೆ ಸೇವೆಯನ್ನಾಗಿಯೇ ಹೊರತು, ಸಹಾಯವನ್ನಾಗಿ ಅಲ್ಲ. ಹಾಗೆ ಅವರು ಮಾಡುವಾಗಲೂ, ಅವರೊಳಗೆ ನಿಂತು ಮಾಡಿಸುವವನು ಸಹ ಶ್ರೀಹರಿಯೇ. ಇದರಿಂದಾಗಿ ಅವನದು ಪರಶಕ್ತಿ ಎಂಬುದು ದೃಢಪಡುವುದು.

೪. **ಖಪತಿ** ಎಂದರೆ ಖ ಎಂಬುದಕ್ಕೆ ಇಂದ್ರಿಯಗಳು ಎಂದು ಅರ್ಥವಿರುವುದರಿಂದ ಇಂದಿರೇಶ, ಹೃಷೀಕೇಶ ಎಂದು ವೇದಗಳು ಕರೆದಿವೆ. ಖ ಎಂದರೆ ಅವ್ಯಾಕೃತ ಆಕಾಶ ಎಂದೂ ಅರ್ಥ; **ಕೂಟಂ ಖಂ ವಿದಲಂ ವ್ಯೋಮ** (ಅಮರಕೋಶ) ಅವ್ಯಾಕೃತಾಕಾಶದ ಅಭಿಮಾನಿದೇವತೆ ಮಹಾಲಕ್ಷ್ಮಿ; ಆದ್ದರಿಂದ **ಖಪತಿಂ** ಎಂಬುದಕ್ಕೆ ಇಂದಿರಾಪತಿ ಎಂದರ್ಥ. ಈ ಹಿಂದೆ ತಿಳಿಸಿದಂತೆ ಲಕ್ಷ್ಮಿಗೆ ಬೇರಾವ ದೋಷಗಳಿಲ್ಲದಿದ್ದರೂ ಅಸ್ವಾತಂತ್ರ್ಯರೂಪದೋಷ-ವಿರುವುದು. ಆದ್ದರಿಂದ ಅವಳು ಸ್ವತಂತ್ರಳಲ್ಲ; ಹರಿಯೊಬ್ಬನೇ ಸ್ವತಂತ್ರ ಎಂಬುದು ಸ್ಫುಟ-ಪಡುವುದು.

**ಬಹುಚಿತ್ರಜಗದ್ಬಹುಧಾಕರಣಾತ್**
**ಪರಶಕ್ತಿರನಂತಗುಣಃ ಪರಮಃ ।**
**ಸುಖರೂಪಮಮುಷ್ಯ ಪದಂ ಪರಮಂ**
**ಸ್ಮರತಸ್ತು ಭವಿಷ್ಯತಿ ತತ್ ಸತತಮ್ ॥ ೩ ॥**

**ಪ** : ಬಹುಚಿತ್ರಜಗತ್, ಬಹುಧಾಕರಣಾತ್, ಪರಶಕ್ತಿಃ, ಅನಂತಗುಣಃ, ಪರಮಃ, ಸುಖರೂಪಮ್, ಅಮುಷ್ಯ, ಪದಮ್, ಪರಮಮ್, ಸ್ಮರತಃ, ತು, ಭವಿಷ್ಯತಿ, ತತ್, ಸತತಮ್ ।

**ಅ** : ಬಹುಚಿತ್ರಜಗತ್, ಬಹುಧಾಕರಣಾತ್, ಪರಶಕ್ತಿಃ, ಅನಂತಗುಣಃ, ಪರಮಃ, ಸತತಮ್, ಸ್ಮರತಃ, ಅಮುಷ್ಯ, ತತ್, ಸುಖರೂಪಮ್, ಪರಮಮ್, ಪದಮ್, ತು, ಭವಿಷ್ಯತಿ ।

**ಪ್ರ.ಪ** : **ಬಹುಚಿತ್ರಜಗತ್** – ಬಹು ಆಶ್ಚರ್ಯಕರವಾದ ಜಗತ್ತನ್ನು; **ಬಹುಧಾಕರಣಾತ್** – ತೆರತೆರನಾಗಿ ಸೃಷ್ಟಿಸಿರುವುದರಿಂದ ಶ್ರೀಹರಿಯು; **ಪರಶಕ್ತಿಃ** – ಶ್ರೇಷ್ಠವಾದ ಶಕ್ತಿಯುಳ್ಳವನು; **ಅನಂತಗುಣಃ** – ಅನಂತಗುಣಗಳಿಂದ ಕೂಡಿದವನು; **ಪರಮಃ** – ಸರ್ವಶ್ರೇಷ್ಠನಾದವನು; **ಸತತಮ್** – ಸದಾ; **ಸ್ಮರತಃ** – ಹೀಗೆ ಸ್ಮರಿಸುವವರಿಗೆ; **ಅಮುಷ್ಯ** – ಅವನ; **ತತ್** – ಆ; **ಸುಖರೂಪಮ್** – ಸುಖಸ್ವರೂಪದ; **ಪರಮಮ್** – ಶ್ರೇಷ್ಠವಾದ; **ಪದಮ್** – ಸ್ಥಾನವು; **ತು** – ನಿಶ್ಚಿತವಾಗಿ ; **ಭವಿಷ್ಯತಿ** – ಲಭಿಸುವುದು.

**ವಿವಿಧಬಗೆಯ ಚಿತ್ರಜಗವ ತಾನೆ ಸೃಜಿಸುತಿರುವವನು**
**ಅಂತೆ ಇವನು ಪೂರ್ಣಶಕ್ತ ಅಮಿತಗುಣನು ಶ್ರೇಷ್ಠನು ।**
**ಇವನ ನೆಲೆಯು ಕೂಡ ನಿರುತ ಪರಮಸುಖದ ಆಲಯ**
**ಸತತದಲ್ಲಿ ನೆನೆಯುವವಗೆ ಬಹುದು ಇದುವೆ ನಿಶ್ಚಯ** ॥ ೩ ॥

**ಅನು : ಬಹು ಆಶ್ಚರ್ಯಕರವಾದ ಜಗತ್ತನ್ನು ತೆರತೆರನಾಗಿ ಸೃಷ್ಟಿಸಿರುವುದರಿಂದ ಶ್ರೀಹರಿಯು ಶ್ರೇಷ್ಠವಾದ ಶಕ್ತಿಯುಳ್ಳವನು, ಅನಂತಗುಣಗಳಿಂದ ಕೂಡಿದವನು, ಸರ್ವಶ್ರೇಷ್ಠನಾದವನು, ಸದಾ ಹೀಗೆ ಸ್ಮರಿಸುವವರಿಗೆ ಸುಖಸ್ವರೂಪ ಶ್ರೇಷ್ಠವಾದ ಆ ಸ್ಥಾನವು ನಿಶ್ಚಿತವಾಗಿ ಲಭಿಸುವುದು.**

ವಿ: ೧. ಶ್ರೀಹರಿಯ ಸೃಷ್ಟಿ ಅತ್ಯಂತ ವಿಚಿತ್ರವಾದದು. ಅದನ್ನು ಪೂರ್ಣವಾಗಿ ತಿಳಿಯುವುದು ಸರ್ವಥಾ ಅಶಕ್ಯ. ಅವನಿಂದ ಸೃಷ್ಟಿಸಲ್ಪಟ್ಟ ಜಗತ್ತಿನ ಪ್ರಾಣಿಗಳ ವೈವಿಧ್ಯ, ಸಸ್ಯಗಳ ವೈವಿಧ್ಯ, ಜೀವಿಗಳ ವೈವಿಧ್ಯ ಅತ್ಯಂತ ಅಪೂರ್ವ. ಸಾಮಾನ್ಯ ಸೃಷ್ಟಿಯೇ ಅತ್ಯಂತ ಕ್ಲೇಶಕರ; ಒಂದು ಸಾಮಾನ್ಯ ಮನೆ ಅದರ ನವೀಕರಣ ಮೊದಲಾದವೂ ಸಹ ಅನೇಕ ಸಲ ದೊಡ್ಡ ಸವಾಲು ಎನಿಸುವುದು. ಆದರೆ ಶ್ರೀಹರಿಯ ಸೃಷ್ಟಿಯಲ್ಲಿ ಅನೇಕ ಬಗೆಯ ಲೋಕಗಳಿದ್ದು, ಅವುಗಳಲ್ಲಿ ಭೂಃ, ಭುವಃ ಮೊದಲಾದವು ಮೇಲಿನ ಲೋಕಗಳು. ಅತಳ, ವಿತಳ ಮೊದಲಾದ ಕೆಳಗಿನ ಲೋಕಗಳು. ಪ್ರತಿ ಲೋಕಗಳಲ್ಲೂ ಜೀವಿವೈಚಿತ್ರ, ಸಸ್ಯವೈಚಿತ್ರ ಮೊದಲಾದವು. ಇಂತಹ ಸೃಷ್ಟಿಯನ್ನು ಅನಾದಿಕಾಲದಿಂದ ಅನಂತಕಾಲದವರೆಗೂ

ಅನಾಯಾಸವಾಗಿ ಮಾಡುವ ಅವನು ಪರಶಕ್ತಿಯುಳ್ಳವನು ಎಂಬುದು ಮೇಲ್ನೋಟಕ್ಕೆ ತಿಳಿಯುವ ಸತ್ಯ ಸಂಗತಿ. ಆದ್ದರಿಂದಲೇ ಅವನು ಸರ್ವೋತ್ತಮ ಎಂಬುದು ಸಹ.

೨. ಅವನನ್ನು ಸ್ಮರಿಸುವವರಿಗೆ ಲಭಿಸುವ ಲೋಕವೂ ಸಹ ಅತ್ಯಂತ ಶ್ರೇಷ್ಠವಾದುದು ಹಾಗೂ ನಿತ್ಯವೂ ಪರಿಪೂರ್ಣವೂ ಆದ ಆನಂದದ ನೆಲೆ. ಇಂತಹ ನೆಲೆಯನ್ನು ಕರುಣಿಸುವ ಅವನ ಸಾಮರ್ಥ್ಯ ಅಪರಿಮಿತ ಹಾಗೂ ಸಹಜ ಎಂಬುದು ಸತ್ಯಸಂಗತಿ. ಹೀಗೆ ಶ್ರೀಹರಿಯು ಸರ್ವೋತ್ತಮ ದೇವತೆ ಎನ್ನಿಸುವುದು ನಿಶ್ಚಿತ ಎಂದು ಭಾವ.

೩. ಮೊದಲ ಶ್ಲೋಕದಲ್ಲಿ ನಿರೂಪಿಸಿದ ಶ್ರೀಹರಿಯು ನಿತ್ಯಸುಖಪೂರ್ಣ, ಜ್ಞಾನಮಯ-ಶರೀರ, ಪರಶಕ್ತಿಯುಳ್ಳವನು, ಅನಂತಗುಣಪರಿಪೂರ್ಣನು, ಸರ್ವಶ್ರೇಷ್ಠನು ಎಂಬ ವಿಷಯಗಳನ್ನು ಈವರೆಗಿನ ಶ್ಲೋಕಗಳಲ್ಲಿ ಕಾರಣಪೂರ್ಣವಾಗಿ ವಿವರಿಸಲಾಗಿದೆ.

**ಸ್ಮರಣೇ ಹಿ ಪರೇಶಿತುರಸ್ಯ ವಿಭೋ-**
**ರ್ಮಲಿನಾನಿ ಮನಾಂಸಿ ಕುತಃ ಕರಣಮ್ ।**
**ವಿಮಲಂ ಹಿ ಪದಂ ಪರಮಂ ಸ್ವರತಂ**
**ತರುಣಾರ್ಕಸವರ್ಣಮಜಸ್ಯ ಹರೇಃ ॥ ೪ ॥**

**ಪ:** ಸ್ಮರಣೇ, ಹಿ, ಪರೇಶಿತುಃ, ಅಸ್ಯ, ವಿಭೋಃ, ಮಲಿನಾನಿ, ಮನಾಂಸಿ, ಕುತಃ, ಕರಣಮ್, ವಿಮಲಮ್, ಹಿ, ಪದಮ್, ಪರಮಮ್, ಸ್ವರತಮ್, ತರುಣಾರ್ಕಸವರ್ಣಮ್, ಅಜಸ್ಯ, ಹರೇಃ ।

**ಅ** : ಪರೇಶಿತುಃ, ವಿಭೋಃ, ಅಸ್ಯ, ಸ್ಮರಣೇ, ಮಲಿನಾನಿ, ಮನಾಂಸಿ, ಕುತಃ, ಕರಣಮ್ ಹಿ, ಅಜಸ್ಯ, ಹರೇಃ, ಪರಮಮ್, ಪದಮ್, ವಿಮಲಮ್, ಸ್ವರತಮ್, ತರುಣಾರ್ಕಸವರ್ಣಮ್ ।

**ಪ್ರ.ಪ.** : **ಪರೇಶಿತುಃ** – ಸರ್ವೇಶ್ವರನಾದ; **ವಿಭೋಃ** – ವ್ಯಾಪ್ತನಾದ; **ಅಸ್ಯ** – ಈ ಶ್ರೀಹರಿಯ; **ಸ್ಮರಣೇ** – ಸ್ಮರಣೆ ಮಾಡಲು; **ಮಲಿನಾನಿ** – ಮಲಿನವಾದ; **ಮನಾಂಸಿ** – ಮನಸ್ಸುಗಳು; **ಕುತಃ** – ಹೇಗೆ ತಾನೆ; **ಕರಣಮ್ ಹಿ** – ಸಾಧನವಾಗಲು ಸಾಧ್ಯ ?; **ಹಿ** – ಏಕೆಂದರೆ; **ಅಜಸ್ಯ** – ಹುಟ್ಟಿಲ್ಲದ; **ಹರೇಃ** – ಶ್ರೀಹರಿಯ; **ಪರಮಮ್** – ಸರ್ವಶ್ರೇಷ್ಠವಾದ; **ಪದಮ್** – ಸ್ವರೂಪವು; **ವಿಮಲಮ್** – ಅತ್ಯಂತ ನಿರ್ಮಲವೂ; **ಸ್ವರತಮ್** – ಸ್ವರತವೂ; **ತರುಣಾರ್ಕಸವರ್ಣಮ್ ಹಿ** – ತರುಣಸೂರ್ಯನಂತೆ ತೇಜೋಯುಕ್ತವೂ ಆಗಿದೆ.

**ಸರ್ವಶ್ರೇಷ್ಠ ಸರ್ವವ್ಯಾಪ್ತ ಪೂರ್ಣಗುಣದ ಹರಿಯನು**
**ಸ್ಮರಿಸಲೆಂತು ಮನವು ತಾನು ಮಲಿನವಾಗಿ ಉಳಿವುದು ।**

**ಇವನು ನಿತ್ಯ ವಿಮಲರೂಪ ಪರಮ ಸ್ವಪ್ರಕಾಶನು**
**ಉದಿಸುವಂಥ ಸೂರ್ಯನಂಥ ಪರಮರಮ್ಯವರ್ಣನು ॥ ೪ ॥**

**ಅನು : ಶ್ರೀಹರಿಯು ಸರ್ವೇಶ್ವರನು ಹಾಗೂ ಸರ್ವತ್ರವ್ಯಾಪ್ತನು; ಅವನ ಸ್ಮರಣೆ ಮಾಡಿದ ಮೇಲೆ ಮನಸ್ಸುಗಳು ಹೇಗೆ ತಾನೆ ಮಲಿನವಾಗಿರಲು ಸಾಧ್ಯ? ಹುಟ್ಟಿಲ್ಲದ ಅವನ ಸರ್ವಶ್ರೇಷ್ಠವಾದ ಸ್ವರೂಪವು ಅತ್ಯಂತ ನಿರ್ಮಲವೂ, ಸ್ವರತವೂ, ತರುಣಸೂರ್ಯನಂತೆ ತೇಜೋಯುಕ್ತವೂ ಆಗಿದೆ.**

ವಿ : ೧. ಶ್ರೀಹರಿಯ ಸ್ಮರಣೆಗೆ ಮನಸ್ಸು ಮೊದಲಾದ ಇಂದ್ರಿಯಗಳು ಪರಿಶುದ್ಧವಾಗಿರಬೇಕು. ದೇವರ ಪೂಜೆಗೆ ಪರಿಶುದ್ಧಿ ಹೇಗೋ ಹಾಗೆ. ಇದರಿಂದ ಭಗವದ್ಭಕ್ತರು ಭಗವಂತನ ಸ್ಮರಣೆಗೆ ಅರ್ಹತೆ ಪಡೆಯಲು ಅಂತಃಕರಣಶುದ್ಧಿ ಇಂದ್ರಿಯ ಶುದ್ಧಿಯನ್ನು ಹೊಂದಿರಬೇಕು ಎಂದರ್ಥ.

೨. ಹಾಗಿದ್ದಲ್ಲಿ ಮನಶ್ಶುದ್ಧಿ ಇಲ್ಲದವರ ಗತಿಯೇನು ಎಂಬ ಪ್ರಶ್ನೆಗೂ ಸಹ ಇಲ್ಲಿ ಉತ್ತರವಿದೆ. ಸರಿಯಾದ ಮನಸ್ಸು ಇದ್ದಲ್ಲಿ ಶ್ರೀಹರಿಯ ಸ್ಮರಣೆಗೆ ಪ್ರಯತ್ನ ಮಾಡಲೇಬೇಕು. ಅದರಿಂದ ಮನಸ್ಸಿನ ದೋಷಗಳು ಪರಿಹಾರವಾಗಿ ಪೂರ್ಣಶುದ್ಧಿ ಲಭಿಸುವುದು; ಅದರಿಂದ ಇನ್ನಷ್ಟು ವಿಶೇಷವಾಗಿ ಶ್ರೀಹರಿಯ ಸ್ಮರಣೆ ಮಾಡಲು ಸಾಧ್ಯವಾಗುವುದು ಎಂದರ್ಥ.

೩. ಮೈಯಲ್ಲಿ ಕೊಳೆಯಿರಲು ಗಂಗಾದಿ ತೀರ್ಥಸ್ನಾನ ಮಾಡಿದಾಗ ದೇಹವು ಶುದ್ಧವಾಗುವಂತೆ ಶ್ರೀಹರಿಯ ಸ್ಮರಣೆಯಿಂದ ದೇಹಶುದ್ಧಿ, ಮನಃಶುದ್ಧಿ ಲಭಿಸುವುದು. ನಿರ್ವಿಘ್ನವಾಗಿ ಸಾಧನೆ ನಡೆಯುವುದು ಎಂದರ್ಥ.

೪. ಶ್ರೀಹರಿಯ ಸ್ಮರಣೆ ಗಂಗಾದಿ ತೀರ್ಥಸ್ನಾನಕ್ಕಿಂತ ತುಂಬಾ ಮಿಗಿಲಾದುದು. ಗಂಗಾದಿ ತೀರ್ಥಗಳಿಗಿಂತ ಅಧಿಕ ಶ್ರೀಹರಿಯ ನಾಮ (ಶ್ರೀಪುರಂದರದಾಸರು).

೫. ಶ್ರೀಹರಿಯ ಸ್ವರೂಪವು ಅತ್ಯಂತ ಶ್ರೇಷ್ಠವಾದುದು; ಅದು ಸ್ವತಂತ್ರವಾದ ಹಿರಿಮೆಯನ್ನು ಹೊಂದಿದೆ; ಅವನ ಪ್ರಕಾಶವಂತೂ ತರುಣ ಸೂರ್ಯನ ಕಾಂತಿಯಂತಹುದು. ಶ್ರೀಹರಿಯ ನೆಲೆಯಾದ ವೈಕುಂಠವೂ ಹಾಗೆಯೇ. ಅದರಂತಹ ಬೇರೆ ಲೋಕವೇ ಇಲ್ಲ, ಅದು ಸಹ ಸ್ವಯಂಪ್ರಕಾಶವಾದ ಲೋಕ. ಕತ್ತಲೆಯ ಹೆಸರೇ ಇಲ್ಲದ ಬೆಳಕಿನ ಲೋಕ ಆದಾಗಿದೆ. ಸೂರ್ಯನನ್ನು ನೋಡಲು ಬೇರೊಂದು ಬೆಳಕಿನ ಅಗತ್ಯ ಹೇಗಿಲ್ಲ ಹಾಗೆ. ಶ್ರೀಹರಿಯ ಹಿರಿಮೆ ಸ್ವಯಂಪ್ರಕಾಶಮಾನವಾದುದು ಎಂದರ್ಥ.

**ವಿಮಲೈಃ ಶ್ರುತಿಶಾಣನಿಶಾತತಮೈಃ**
**ಸುಮನೋಽಸಿಭಿರಾಶು ನಿಹತ್ಯ ದೃಢಮ್ ।**

**ಬಲಿನಂ ನಿಜವೈರಿಣಮಾತ್ಮತಮೋ-**
**ಭಿದಮೀಶಮನಂತಮುಪಾಸ್ವ ಹರಿಮ್ ॥ ೫ ॥**

**ಪ :** ವಿಮಲೈಃ, ಶ್ರುತಿಶಾಣನಿಶಾತತಮೈಃ, ಸುಮನೋಸಿಭಿಃ, ಆಶು, ನಿಹತ್ಯ, ದೃಢಮ್, ಬಲಿನಮ್, ನಿಜವೈರಿಣಮ್, ಆತ್ಮತಮೋಭಿದಮ್, ಈಶಮ್, ಅನಂತಮ್, ಉಪಾಸ್ವ ಹರಿಮ್ ।

**ಅ :** ವಿಮಲೈಃ, ಶ್ರುತಿಶಾಣನಿಶಾತತಮೈಃ, ಸುಮನೋಸಿಭಿಃ, ಬಲಿನಮ್, ನಿಜವೈರಿಣಮ್, ಆಶು, ನಿಹತ್ಯ, ಆತ್ಮತಮೋಭಿದಮ್, ಈಶಮ್, ಅನಂತಮ್, ಹರಿಮ್, ಉಪಾಸ್ವ ।

**ಪ್ರ.ಪ. :** **ವಿಮಲೈಃ** – ನಿರ್ಮಲವಾದ; **ಶ್ರುತಿಶಾಣನಿಶಾತತಮೈಃ** – ಶ್ರವಣದಿಂದ ಸಾಣೆ ಹಿಡಿದು ಅತ್ಯಂತ ಹರಿತವಾದ; **ಸುಮನೋಸಿಭಿಃ** – ಒಳ್ಳೆಯ ಮನಸ್ಸು ಎಂಬ ಖಡ್ಗಗಳಿಂದ; **ಬಲಿನಮ್** – ಬಲಶಾಲಿಯಾದ; **ನಿಜವೈರಿಣಮ್** – ಸಹಜವೈರಿಯನ್ನು; **ಆಶು** – ಬೇಗನೆ; **ನಿಹತ್ಯ** – ನಾಶಮಾಡಿ; **ಆತ್ಮತಮೋಭಿದಮ್** – ಮನಸ್ಸಿನ ಕತ್ತಲೆಯನ್ನು ಪರಿಹರಿಸುವ; **ಈಶಮ್** – ಸರ್ವೇಶನಾದ; **ಅನಂತಮ್** – ಅನಂತನಾದ; **ಹರಿಮ್** – ಶ್ರೀಹರಿಯನ್ನು; **ಉಪಾಸ್ವ** – ಉಪಾಸನೆ ಮಾಡು.

**ಶ್ರವಣದಿಂದ ಸಾಣೆ ಹಿಡಿದು ತುಂಬ ಹರಿತವಾಗಿಹ**
**ವಿಮಲಚಿತ್ತಖಡ್ಗದಿಂದ ತರಿದು ಬೇಗ ಅರಿಯನು ।**
**ಮನವ ಕವಿದ ತಮವನೆಲ್ಲ ಕಳೆವ ಪರಮ ಹರಿಯನು**
**ಎಣೆಯೆ ಇರದ ದೇವನನ್ನು ನಿರುತ ಭಜಿಸು ಕಾಂಬನು ॥ ೫ ॥**

**ಅನು :** **ನಿರ್ಮಲವಾದ ಶ್ರವಣದಿಂದ ಸಾಣೆ ಹಿಡಿದು ಅತ್ಯಂತ ಹರಿತವಾದ, ಒಳ್ಳೆಯ ಮನಸ್ಸು ಎಂಬ ಖಡ್ಗದಿಂದ, ಬಲಶಾಲಿಯಾದ ಸಹಜವೈರಿಯನ್ನು ಬೇಗನೇ ನಾಶಮಾಡಿ, ಮನಸ್ಸಿನ ಕತ್ತಲೆಯನ್ನು ಪರಿಹರಿಸುವ ಸರ್ವೇಶನಾದ, ಅನಂತನಾದ ಶ್ರೀಹರಿಯನ್ನು ಉಪಾಸನೆ ಮಾಡು.**

ವಿ : ೧. ಶ್ರೀಹರಿಯ ಆರಾಧನೆಗೆ ಮನಸ್ಸೇ ಪ್ರಧಾನವಾದ ಸಾಧನ. ಅಂತಹ ಮನಸ್ಸು ಖಡ್ಗವಿದ್ದಂತೆ. ಕಾಮಾದಿಗಳು ಸಾಧಕರ ಶತ್ರುಗಳು. ಶತ್ರು ಸಂಹಾರಕ್ಕೆ ಖಡ್ಗ ಹೇಗೋ, ಕಾಮಾದಿಗಳ ಮೇಲಿನ ನಿಗ್ರಹಕ್ಕೆ ಮನಸ್ಸು ಹಾಗೆ. ಆದರೆ ಖಡ್ಗವು ಶತ್ರಗಳನ್ನು ಸಂಹರಿಸಲು ನಿರ್ಮಲವಾಗಿರಬೇಕು ಹಾಗೂ ಹರಿತವಾಗಿರಬೇಕು. ಖಡ್ಗವನ್ನು ಹರಿತಗೊಳಿಸಲು ಸಾಣೆ ಹಿಡಿಯುವುದು ಅಗತ್ಯ. ಮನಸ್ಸು ಹರಿತವಾಗಲು ನಿರಂತರ ಹರಿಯ ಮಾಹಾತ್ಮ್ಯದ

ಶ್ರವಣವೇ ಸಾಣೆಯಿದ್ದಂತೆ. ಮತ್ತೆಮತ್ತೆ ಸ್ಮರಣೆ ಮಾಡುತ್ತಿದ್ದರೆ ಮನಸ್ಸು ಹರಿತವಾಗುತ್ತಾ ಹೋಗುವುದು ಎಂದರ್ಥ. ಶ್ರವಣವು ಸಹ ವೇದಾದಿ ಸಚ್ಛಾಸ್ತ್ರಗಳ ಸ್ಮರಣವೇ ಹೊರತು ಇತರ ವಿಷಯಗಳ ಬಗೆಗಿನ ಶ್ರವಣವಲ್ಲ. ವಿದ್ಯಾರ್ಥಿ ಉತ್ತೀರ್ಣನಾಗಲು ಓದಬೇಕಾದದ್ದು ಪಠ್ಯಪುಸ್ತಕಗಳನ್ನೇ ಹೊರತು ಕಥೆ, ಕಾದಂಬರಿಗಳನ್ನಲ್ಲ; ಅದರಂತೆ ಎಂದು ಇದನ್ನು ತಿಳಿಯಬೇಕು: **ಹರಿಕಥಾಶ್ರವಣ ಮಾಡೋ ನಿರಂತರ.**

೨. ನಮ್ಮ ಸಾಧನೆಗೆ ಅಡ್ಡಿಯಾಗಿರುವ ಪ್ರಬಲವೈರಿ ಎಂದರೆ ಕಾಮ. ಸಾಮಾನ್ಯವಾದ ಆಯುಧಕ್ಕಾಗಲೀ, ಸಾಮಾನ್ಯ ಯೋಧನಿಂದಾಗಲೀ, ಅವನ ನಾಶ[೧] ಅಸಾಧ್ಯ; ಅದಕ್ಕೆಂದೇ ಇಂತಹ ಕಠಿಣವಾದ ಸಾಧನೆ. ಇಂತಹ ಶ್ರೀಹರಿಯ ನಿರಂತರ ಸ್ಮರಣೆಯಿಂದ ಹರಿತಗೊಳ್ಳುವ ಮನಸ್ಸನ್ನು ಇದಕ್ಕೆ ಅಣಿ ಮಾಡಿಕೊಂಡು ಅಂತಹ ಪ್ರಬಲ ಶತ್ರುವನ್ನು ನಾಶಗೊಳಿಸಬೇಕೆಂದು ಅರ್ಥ.

೩. ಶ್ರೀಹರಿಯು ಸಾಮಾನ್ಯನಲ್ಲ. ಮನಸ್ಸನ್ನು ಕವಿದ ಕತ್ತಲೆಯನ್ನು ಸಂಪೂರ್ಣ ನಾಶಮಾಡಬಲ್ಲ ದೊಡ್ಡ ಹಿರಿಮೆ ಅವನದ್ದು. ಅವನು ಅನಂತ ಎಂದರೆ ದೇಶತಃ, ಕಾಲತಃ ಹಾಗೂ ಗುಣತಃ ಕೊನೆಯಿಲ್ಲದವನು ಎಂದರ್ಥ. ಕತ್ತಲೆಯ ಪರಿಹಾರಕ್ಕೆ ಬೆಳಕು ಹೇಗೋ ಹಾಗೆ ಈ ಸಂಸಾರದ ನೋವಿನ ಪರಿಹಾರಕ್ಕೆ ಶ್ರೀಹರಿಯ ಸ್ಮರಣೆ ಎಂಬುದು ಇದರ ಸಂದೇಶ.

೪. ಇಲ್ಲಿ **ಶ್ರುತಿ** ಎಂಬುದಕ್ಕೆ ಶ್ರವಣ ಹಾಗೂ ವೇದಾದಿಶಚ್ಛಾಸ್ತ್ರಗಳು ಎಂಬ ಎರಡು ಅರ್ಥಗಳೂ ವಿವಕ್ಷಿತ. ಶ್ರುತ್ಯಾದಿಗಳ ಶ್ರವಣದಿಂದ ಮನಸ್ಸು ಹರಿತವಾಗಿ, ಅತ್ಯಂತ ಬಲಿಷ್ಠವಾದ ಕಾಮಾದಿಶತ್ರುಗಳ ನಿಗ್ರಹಕ್ಕೆ ಸಮರ್ಥವಾಗುವುದು ಎಂದರ್ಥ.

---

೧. ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ।
ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್ ॥
ಧೂಮೇನಾವ್ರಿಯತೇ ವಹ್ನಿರ್ಯಥಾಽಽದರ್ಶೋ ಮಲೇನ ಚ।
ಯಥೋಲ್ಬೇನಾವೃತೋ ಗರ್ಭಸ್ತಥಾ ತೇನೇದಮಾವೃತಮ್ ॥
ಆವೃತಂ ಜ್ಞಾನಮೇತೇನ ಜ್ಞಾನಿನೋ ನಿತ್ಯವೈರಿಣಾ।
ಕಾಮರೂಪೇಣ ಕೌಂತೇಯ ದುಷ್ಪೂರೇಣಾನಲೇನ ಚ ॥
ಇಂದ್ರಿಯಾಣಿ ಮನೋ ಬುದ್ಧಿರಸ್ಯಾಧಿಷ್ಠಾನಮುಚ್ಯತೇ।
ಏತೈರ್ವಿಮೋಹಯತ್ಯೇಷ ಜ್ಞಾನಮಾವೃತ್ಯ ದೇಹಿನಮ್ ॥
ತಸ್ಮಾತ್ ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ।
ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನನಾಶನಮ್ ॥
ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ।
ಮನಸಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ ॥
ಏವಂ ಬುದ್ಧೇಃ ಪರಂ ಬುದ್ಧ್ವಾ ಸಂಸ್ತಭ್ಯಾತ್ಮಾನಮಾತ್ಮನಾ।
ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಮ್ ॥ – ಗೀತಾ (೩/೩೭-೪೩)

ಹಿ. ಶ್ರೀಹರಿಯ ಉಪಾಸನೆಯೇ ಸಾಧನೆಗೆ ಅಡ್ಡಿಯಾಗುವ ಶತ್ರುವಿನ ನಾಶಕ್ಕೆ ಪ್ರಮುಖವಾದ ಸಾಧನ. ಅಂತಹ ಶತ್ರುವಿನ ನಾಶಕ್ಕೆ ಅಗತ್ಯವಾದ ಖಡ್ಗ ಎಂದರೆ ಶ್ರವಣಾದಿಗಳಿಂದ ಹರಿತವಾಗುವ ಮನಸ್ಸು. ಆದರಿಂದ ಪ್ರಬಲವಾದ ಶತ್ರವನ್ನೂ ನಾಶಪಡಿಸಿ, ಶ್ರೀಹರಿಯನ್ನು ಆರಾಧಿಸುತ್ತಾ ಸಂತೃಪ್ತಿಯನ್ನು ಪಡೆಯಬೇಕು ಎಂದು ಭಾವ.

**ಸ ಹಿ ವಿಶ್ವಸೃಜೋ ವಿಭುಶಂಭುಪುರಂ-**
**ದರಸೂರ್ಯಮುಖಾನಪರಾನಮರಾನ್ ।**
**ಸೃಜತೀಡ್ಯತಮೋऽವತಿ ಹಂತಿ ನಿಜಂ**
**ಪದಮಾಪಯತಿ ಪ್ರಣತಾನ್ ಸುಧಿಯಾ ॥ ೬ ॥**

**ಪ :** ಸಃ, ಹಿ, ವಿಶ್ವಸೃಜಃ, ವಿಭುಶಂಭುಪುರಂದರಸೂರ್ಯಮುಖಾನ್, ಅಪರಾನ್, ಅಮರಾನ್, ಸೃಜತಿ, ಈಡ್ಯತಮಃ, ಅವತಿ, ಹಂತಿ, ನಿಜಮ್, ಪದಮ್, ಆಪಯತಿ, ಪ್ರಣತಾನ್, ಸುಧಿಯಾ ।

**ಅ :** ಈಡ್ಯತಮಃ, ಸಃ, ವಿಭುಶಂಭುಪುರಂದರಸೂರ್ಯಮುಖಾನ್, ವಿಶ್ವಸೃಜಃ, ಅಪರಾನ್, ಅಮರಾನ್, ಸೃಜತಿ, ಅವತಿ, ಹಂತಿ, ಸುಧಿಯಾ, ಪ್ರಣತಾನ್, ನಿಜಮ್, ಪದಮ್, ಆಪಯತಿ, ಹಿ ।

**ಪ್ರ.ಪ. : ಈಡ್ಯತಮಃ** – ಅತ್ಯಂತ ಸ್ತುತ್ಯನಾದ; **ಸಃ** – ಆ ಶ್ರೀಹರಿಯು; **ವಿಭುಶಂಭುಪುರಂದರಸೂರ್ಯಮುಖಾನ್** – ಬ್ರಹ್ಮ, ರುದ್ರ, ಇಂದ್ರ, ಸೂರ್ಯ ಮೊದಲಾದಂತಹ; **ವಿಶ್ವಸೃಜಃ** – ಜಗತ್ತನ್ನು ಸೃಷ್ಟಿಸುವವರನ್ನು; **ಅಪರಾನ್** – ಇತರ; **ಅಮರಾನ್** – ದೇವತೆಗಳನ್ನು; **ಸೃಜತಿ** – ಸೃಷ್ಟಿ ಮಾಡುವನು; **ಅವತಿ** – ಸಂರಕ್ಷಿಸುವನು; **ಹಂತಿ** – ಸಂಹರಿಸುವನು; **ಸುಧಿಯಾ** – ಒಳ್ಳೆಯ ಬುದ್ಧಿಯಿಂದ; **ಪ್ರಣತಾನ್** – ಶರಣು ಹೊಕ್ಕವರಿಗೆ; **ನಿಜಮ್** – ತನ್ನ; **ಪದಮ್** – ಸ್ಥಾನವನ್ನು; **ಆಪಯತಿ** – ಹೊಂದಿಸುವನು; **ಹಿ** – ನಿಶ್ಚಯ.

**ಸಕಲಜಗಕೆ ಕರ್ತರಾದ ನಿರುತ ವಿವಿಧರೀತಿಯ**
**ಬ್ರಹ್ಮರುದ್ರಇಂದ್ರಸೂರ್ಯಪೂರ್ವಮುಖ್ಯದಿವಿಜರ ।**
**ಸೃಜಿಸುತಿಹನು ಪೊರೆಯುತಿಹನು ಕೊನೆಗೆ ಅಂತೆ ಕೊಲ್ವನು**
**ಶುದ್ಧ ಮನದಿ ಭಜಿಪ ಜನಕೆ ನಿತ್ಯಸುಖವನೀವನು ॥ ೬ ॥**

**ಅನು : ಅತ್ಯಂತ ಸ್ತುತ್ಯನಾದ ಆ ಶ್ರೀಹರಿಯು ಬ್ರಹ್ಮ, ರುದ್ರ, ಇಂದ್ರ, ಸೂರ್ಯ ಮೊದಲಾದ ಜಗತ್ತನ್ನು ಸೃಷ್ಟಿಸುವ, ಇತರ ದೇವತೆಗಳನ್ನು ಸೃಷ್ಟಿ ಮಾಡುವವನು,**

**ಸಂರಕ್ಷಿಸುವವನು, ಸಂಹರಿಸುವವನು; ಅವನು ನಿರ್ಮಲಮನಸ್ಸಿನಿಂದ ಶರಣು ಹೊಕ್ಕವರಿಗೆ ತನ್ನ ಸ್ಥಾನವನ್ನು ಹೊಂದಿಸುವನು; ಇದು ನಿಶ್ಚಿತ.**

ವಿ: ೧. ಬ್ರಹ್ಮಸೃಷ್ಟಿಕರ್ತ, ಶಿವ ಸಂಹಾರಕರ್ತ, ಇಂದ್ರ ಸ್ವರ್ಗಾಧಿಪತಿ, ಸೂರ್ಯ ಲೋಕ ಪ್ರಕಾಶಕ ಇಂತಹ ಹಿರಿಯ ದೇವತೆಗಳನ್ನು ಸೃಷ್ಟಿಸಿ, ಸಂರಕ್ಷಿಸಿ, ಸಂಹರಿಸಿ ತನ್ನ ಲೋಕಕ್ಕೆ ಕರೆದೊಯ್ಯುವ ಸಮರ್ಥ ಶ್ರೀಹರಿ. ತನ್ನನ್ನು ಒಳ್ಳೆಯ ಮನಸ್ಸಿನಿಂದ ಆರಾಧಿಸುವವರನ್ನು ಶ್ರೀಹರಿಯು ಎಂದೂ ಕೈಬಿಡನು ಎಂದರ್ಥ.

೨. ಶ್ರೀಹರಿಯು ಹೀಗೆ ಬ್ರಹ್ಮಾದಿ ದೇವತೆಗಳಿಗೂ ಸೃಷ್ಟಿಕಾರಣನಾಗಿದ್ದು, ತನ್ನನ್ನು ಭಕ್ತಿಯಿಂದ ಆರಾಧಿಸುವವರನ್ನು ಅವನು ತಪ್ಪದೇ ಸಲಹುವನು ಎಂದು ಭಾವ.

೩. ಇದು ಎರಡನೆಯ ಅಧ್ಯಾಯದ ಮೂರನೆಯ ಶ್ಲೋಕದಲ್ಲಿ ಬಂದ **ಚಿದಚಿದ್ಭೇದ-ಮಖಿಲಂ ವಿಧಾಯಾಧಾಯ ಭುಂಜತೇ** ಎಂಬ ಮಾತಿಗೆ ವಿವರಣರೂಪವಾಗಿದೆ.

**ಪರಮೋಽಪಿ ರಮೇಶಿತುರಸ್ಯ ಸಮೋ**
**ನ ಹಿ ಕಶ್ಚಿದಭೂನ್ನ ಭವಿಷ್ಯತಿ ಚ ।**
**ಕ್ವಚಿದದ್ಯತನೋಽಪಿ ನ ಪೂರ್ಣಸದಾ-**
**ಗಣಿತೇಡ್ಯಗುಣಾನುಭವೈಕತನೋಃ ॥ ೭ ॥**

**ಪ** : ಪರಮಃ, ಅಪಿ, ರಮೇಶಿತುಃ, ಅಸ್ಯ, ಸಮಃ, ನ, ಹಿ, ಕಶ್ಚಿತ್, ಅಭೂತ್, ನ, ಭವಿಷ್ಯತಿ, ಚ, ಕ್ವಚಿತ್, ಅದ್ಯತನಃ, ಅಪಿ, ನ, ಪೂರ್ಣಸದಾಗಣಿತೇಡ್ಯಗುಣಾನುಭವೈಕ ತನೋಃ ।

**ಅ** : ಪೂರ್ಣಸದಾಗಣಿತೇಡ್ಯಗುಣಾನುಭವೈಕತನೋಃ, ರಮೇಶಿತುಃ, ಅಸ್ಯ, ಪರಮಃ, ಸಮಃ, ಅಪಿ, ಕಶ್ಚಿತ್, ನ, ಅಭೂತ್, ನ, ಭವಿಷ್ಯತಿ, ಅದ್ಯತನಃ, ಅಪಿ, ಚ, ಕ್ವಚಿತ್, ನ, ಹಿ ।

ಪ್ರ.ಪ. : **ಪೂರ್ಣಸದಾಗಣಿತೇಡ್ಯಗುಣಾನುಭವೈಕತನೋಃ** – ಪರಿಪೂರ್ಣವಾದ ಸದಾ ಎಣಿಕೆ ಮಾಡಲಾಗದ, ಸ್ತುತ್ಯವಾದ ಗುಣಸ್ವರೂಪವೇ ದೇಹವಾಗಿ ಉಳ್ಳ; **ರಮೇಶಿತುಃ** – ರಮಾಪತಿಯಾದ; **ಅಸ್ಯ** – ಈ ಶ್ರೀಹರಿಗಿಂತ; **ಪರಮಃ** – ಶ್ರೇಷ್ಠನಾದವನು; **ಸಮಃ** – ಸಮನಾದವನೂ; **ಅಪಿ** – ಸಹ; **ಕಶ್ಚಿತ್** – ಯಾರೂ; **ನ ಅಭೂತ್** – ಹಿಂದೆ ಆಗಿಲ್ಲ; **ನ ಭವಿಷ್ಯತಿ** – ಮುಂದೆ ಆಗುವುದಿಲ್ಲ; **ಅದ್ಯತನಃ ಅಪಿ ಚ** – ಈಗಿನವನು ಸಹ ; **ಕ್ವಚಿತ್** – ಎಲ್ಲೂ; **ನ** – ಇಲ್ಲ; **ಹಿ** – ನಿಶ್ಚಿತ.

**ರಮೆಯ ಅರಸನಾದ ಹರಿಯ ಮೀರುವವನು ಇಲ್ಲವೊ**
**ಸಮನು ಕೂಡ ಎಲ್ಲು ಇಲ್ಲ ಮುಂದೆ ಕೂಡ ಬಾರನು ।**

**ಇಂದು ಕೂಡ ಎಲ್ಲು ಇಲ್ಲ ಅವನು ನಿತ್ಯಪೂರ್ಣನು**
**ಎಣಿಕೆಯಿರದ ಪೂರ್ಣಗುಣದ ಸತ್ಯಜ್ಞಾನದೇಹನು** ॥ ೭ ॥

**ಅನು : ಶ್ರೀಹರಿಯು ಪರಿಪೂರ್ಣನು, ಸರ್ವಶ್ರೇಷ್ಠನಾದವನು, ಸ್ತುತ್ಯನು, ಅನಂತಗುಣಮಯದೇಹನು, ರಮಾಪತಿಯಾದ, ಅವನಿಗಿಂತ ಶ್ರೇಷ್ಠನಾದವನು, ಸಮನಾದವನು ಸಹ ಯಾರೂ ಹಿಂದೆ ಆಗಿಲ್ಲ, ಮುಂದೆ ಆಗುವುದೂ ಇಲ್ಲ, ಈಗಲೂ ಸಹ ಎಲ್ಲೂ ಇಲ್ಲ, ಇದು ನಿಶ್ಚಿತ.**

ವಿ : ೧. ಶ್ರೀಹರಿಯು ಇಷ್ಟು ಶ್ರೇಷ್ಠನಾಗಿದ್ದರೂ, ಅವನಿಗಿಂತ ಮಿಗಿಲಾದವನು ಇರಬಹುದಲ್ಲವೇ. ಅಥವಾ ಸಮಾನವಾಗಿರುವವನು ಇರಬಹುದಲ್ಲವೇ ಎಂಬ ಪ್ರಶ್ನೆಗೆ ಇಲ್ಲಿ ಉತ್ತರವಿದೆ. ಶ್ರೀಹರಿಗೆ ಸಮಾನನಾದವನು ಈಗಿಲ್ಲ, ಹಿಂದೆಯೂ ಇರಲಿಲ್ಲ, ಮುಂದೆಯೂ ಇರಲು ಸಾಧ್ಯವಿಲ್ಲ ಎಂದರ್ಥ.

೨. ಹೀಗೆ ಎಂದೂ ಸಮಾನರಾದವರಾಗಲೀ, ಮಿಗಿಲಾದವರಾಗಲೀ ಸರ್ವಥಾ ಇರದ ಶ್ರೀಹರಿಯೇ ಸರ್ವೋತ್ತಮನು ಎಂದು ಭಾವ. ಅವನಂತೆ ಪೂರ್ಣನೂ, ಅನಂತನೂ ಆಗಿರುವಂತಹ ಇನ್ನೊಬ್ಬನು ಬರಲು ಸಾಧ್ಯವಿಲ್ಲ. ಆಕಾಶವು ಸದಾ ಒಂದೇ ಆಗಿದ್ದು ಅನಾದಿ ಹಾಗೂ ನಿತ್ಯ ಆಗಿರುವುದು ಹೇಗೋ ಹಾಗೆ.

೩. ಇದು ನಖಸ್ತುತಿಯ ಎರಡನೆಯ ಪದ್ಯದ ಸಾರರೂಪವಾದ ಶ್ಲೋಕ:
**ಲಕ್ಷ್ಮೀಕಾಂತ ಸಮಂತತೋ ವಿಕಲಯನ್ನೈವೇಶಿತುಸ್ತೇ ಸಮಂ**
**ಪಶ್ಯಾಮ್ಯುತ್ತಮವಸ್ತು ದೂರತರತೋಽಪಾಸ್ತಂ ರಸೋ ಯೋಽಷ್ಟಮಃ। ...**

**ಇತಿ ದೇವವರಸ್ಯ ಹರೇಃ ಸ್ತವನಂ**
**ಕೃತವಾನ್ ಮುನಿರುತ್ತಮಮಾದರತಃ।**
**ಸುಖತೀರ್ಥಪದಾಭಿಹಿತಃ ಪಠತ-**
**ಸ್ತದಿದಂ ಭವತಿ ಧ್ರುವಮುಚ್ಚಸುಖಮ್** ॥ ೮ ॥

**॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ದ್ವಾದಶಸ್ತೋತ್ರೇ ಚತುರ್ಥೋಽಧ್ಯಾಯಃ ॥**

**ಪ** : ಇತಿ, ದೇವವರಸ್ಯ, ಹರೇಃ, ಸ್ತವನಮ್, ಕೃತವಾನ್, ಮುನಿಃ, ಉತ್ತಮಮ್, ಆದರತಃ, ಸುಖತೀರ್ಥಪದಾಭಿಹಿತಃ, ಪಠತಃ, ತತ್, ಇದಮ್, ಭವತಿ, ಧ್ರುವಮ್, ಉಚ್ಚಸುಖಮ್।

**ಅ** : ಇತಿ, ದೇವವರಸ್ಯ, ಹರೇಃ, ಉತ್ತಮಮ್, ಸ್ತವನಮ್, ಸುಖತೀರ್ಥಪದಾಭಿಹಿತಃ, ಮುನಿಃ, ಆದರತಃ, ಕೃತವಾನ್, ತತ್, ಇದಮ್, ಪಠತಃ, ಉಚ್ಚಸುಖಮ್, ಧ್ರುವಮ್, ಭವತಿ।

ಪ್ರ.ಪ. : **ಇತಿ** – ಹೀಗೆ; **ದೇವವರಸ್ಯ** – ದೇವಶ್ರೇಷ್ಠನಾದ; **ಹರೇಃ** – ಶ್ರೀಹರಿಯ; **ಉತ್ತಮಮ್** – ಉತ್ತಮವಾದ; **ಸ್ತವನಮ್** – ಸ್ತೋತ್ರವನ್ನು; **ಸುಖತೀರ್ಥಪದಾಭಿಹಿತಃ** – ಆನಂದತೀರ್ಥ ಎಂಬ ಹೆಸರಿನ; **ಮುನಿಃ** – ಮುನಿಯು; **ಆದರತಃ** – ಭಕ್ತಿಯಿಂದ; **ಕೃತವಾನ್** – ರಚಿಸಿದರು; **ತತ್ ಇದಮ್** – ಆ ಇದನ್ನು; **ಪಠತಃ** – ಪಠಿಸುವವನಿಗೆ; **ಉಚ್ಚಸುಖಮ್** – ಉನ್ನತವಾದ ಸುಖವು; **ಧ್ರುವಮ್** – ನಿಶ್ಚಿತವಾಗಿ; **ಭವತಿ** – ಲಭಿಸುವುದು.

**ಇನಿತು ಇರುವ ದೇವಶ್ರೇಷ್ಠ ಹರಿಯ ದಿವ್ಯಸ್ತೋತ್ರವ**
**ನಲಿವನೀವ ಶಾಸ್ತ್ರ ಒರೆದ ಮಧ್ವಮುನಿಯು ಬರೆದರು ।**
**ಉತ್ತಮಾರ್ಥಯುಕ್ತವಾದ ಇದನು ನಿರುತ ಪಠಿಸಲು**
**ಎಂದು ಕೂಡ ಅಳಿವೆ ಇರದ ಪೂರ್ಣಸುಖವು ದೊರೆವುದು ॥ ೮ ॥**

**॥ ದ್ವಾದಶಸ್ತೋತ್ರದ ಕನ್ನಡಪದ್ಯಾನುವಾದದಲ್ಲಿ ನಾಲ್ಕನೆಯ ಅಧ್ಯಾಯ ಮುಕ್ತಾಯವಾಯಿತು ॥**

**ಅನು : ಹೀಗೆ ದೇವಶ್ರೇಷ್ಠನಾದ ಶ್ರೀಹರಿಯ ಉತ್ತಮವಾದ ಸ್ತೋತ್ರವನ್ನು ಆನಂದತೀರ್ಥ ಎಂಬ ಹೆಸರಿನ ಮುನಿಯು ಭಕ್ತಿಯಿಂದ ರಚಿಸಿದರು; ಇದನ್ನು ಪಠಿಸುವವನಿಗೆ ಉನ್ನತವಾದ ಸುಖವು ನಿಶ್ಚಿತವಾಗಿ ಲಭಿಸುವುದು.**

ವಿ : ೧. ಈ ಸ್ತೋತ್ರವು ಆನಂದತೀರ್ಥರೆಂಬ ಮುನಿಗಳಿಂದ ರಚಿತವಾದ ಶ್ರೇಷ್ಠ ಕೃತಿ; ಇದನ್ನು ಪಠಿಸುವವರಿಗೆ ಮುಕ್ತಿ ಲಭಿಸುವುದು ನಿಶ್ಚಯ ಎಂದರ್ಥ.

೨. ಇದು ಈ ಸ್ತೋತ್ರದ ಫಲಶ್ರುತಿ ಮಾತ್ರವಲ್ಲದೆ ಅವರಿಂದ ರಚಿತವಾದ ಇತರ ಸಕಲ ಸ್ತೋತ್ರಗಳಿಗೂ ಅನ್ವಯಿಸುವುದು.

೩. ಶ್ರೀಹರಿಯು ದೇವಶ್ರೇಷ್ಠನಾದ ಸರ್ವೋತ್ತಮ; ಅವನ ಅದ್ಭುತವಾದ ಸ್ತುತಿಯನ್ನು ರಚಿಸಿದವರು ಜೀವಶ್ರೇಷ್ಠರಾದ ವಾಯುದೇವರು. ಇದನ್ನು ಅವರು ರಚಿಸಲು ಅವನ ಮೇಲಿನ ಭಕ್ತಿ ಕಾರಣವಾದರೆ, ಶಿಷ್ಯರ ಮೇಲಿನ ಪ್ರೀತಿ ಮತ್ತೊಂದು ಕಾರಣ.

೪. ಇಲ್ಲಿ ಮುನಿ ಎಂಬುದಕ್ಕೆ ಮನನಶೀಲರು, ಸದಾ ಹರಿತತ್ತ್ವವನ್ನು ಮನನ ಮಾಡುವವರು ಎಂಬುದು ಒಂದು ಬಗೆಯ ಅರ್ಥ. ಅದರಂತೆ ಮಾಂಡೂಕೋಪನಿಷತ್ತಿನ ಕೊನೆಯಲ್ಲಿ ಬಂದಿರುವಂತೆ ಓಂಕಾರವನ್ನು ಸಮಗ್ರವಾಗಿ ತಿಳಿದವರು ಎಂಬುದು ಇನ್ನೊಂದು ಅರ್ಥ: '**ಓಂಕಾರೋ ವಿದಿತೋ ಯೇನ ಸ ಮುನಿರ್ನೇತರೋ ಜನಃ**' (ಮಾಂಡೂಕೋಪನಿಷತ್).

೫. ಇಲ್ಲಿ ಓಂಕಾರವನ್ನು ತಿಳಿದವರು ಎಂದರೆ, ಓಂಕಾರವು ಅ, ಉ, ಮ ಎಂಬ ಮೂರು ಅಕ್ಷರಗಳನ್ನು ಹೊಂದಿದ್ದು, ಅದಕ್ಕಿಂತ ಮಿಗಿಲಾಗಿ, ಆ ಮೂರರೊಂದಿಗೆ ನಾದ,

ಬಿಂದು, ಘೋಷ, ಶಾಂತ ಹಾಗೂ ಅತಿಶಾಂತ ಎಂಬ ಇತರ ಐದು ಅಕ್ಷರಗಳು ಸೇರಿ ಒಟ್ಟು ಎಂಟು ಅಕ್ಷರಗಳನ್ನು ಹೊಂದಿರುವುದು. ಅದರಂತೆ, ಸಕಲ ವೇದಾದಿಶಾಸ್ತ್ರಗಳ ಸಾರರೂಪವಾಗಿರುವುದು, ಸೃಷ್ಟ್ಯಾದ್ಯಷ್ಟಕರ್ತೃವಾದ ಶ್ರೀಹರಿಯನ್ನು ಪ್ರತಿಪಾದಿಸುವುದು, ಮೊದಲಾದ ಅನೇಕ ಅರ್ಥಗಳನ್ನು ತಿಳಿಯಬೇಕು:

**ಅನಂತಮಾತ್ರಾಂತಮುದಾಹರಂತಿ ಯಂ**
**ತ್ರಿಮಾತ್ರಪೂರ್ವಂ ಪ್ರಣವೋಚ್ಚಯಂ ಬುಧಾಃ ।**

**- ಮಧ್ವವಿಜಯ (೪/೩೨)**

ಶ್ರೀಮದಾಚಾರ್ಯರು ತಂತ್ರಸಾರಸಂಗ್ರಹದಲ್ಲಿ ಓಂಕಾರದಿಂದ ಇಡೀ ಶಾಸ್ತ್ರಪ್ರಪಂಚ ಅನಾವರಣಗೊಂಡ ವಿವರವನ್ನು ಅತ್ಯಂತ ವಿಶದವಾಗಿ ತಿಳಿಸಿರುವರು.

೬. '**ಆದರ**' ಎಂದರೆ ಭಕ್ತಿ ಎಂದರ್ಥ ('**ಆದರೋ ಭಜನಂ ಭಕ್ತಿಃ**'); '**ಪರಮಾದರತಃ**' ಎಂದರೆ ಪರಮಭಕ್ತಿಯಿಂದ ಎಂದರ್ಥ; ಶ್ರೀಮದಾಚಾರ್ಯರು ಈ ಕೃತಿಯನ್ನು ಪರಮಭಕ್ತಿಯಿಂದ ರಚಿಸಿರುವರು. ಆದ್ದರಿಂದ ಇದನ್ನು ಪಠಿಸುವವರು ಸಹ ಪರಮಾದರ-ದಿಂದಲೇ ಪಠಿಸಬೇಕು. ಹಾಗೆ ಪಠಿಸುವವರಿಗೆ ನಿತ್ಯಸುಖ ಎಂದರೆ, ನಿತ್ಯವೂ, ಪೂರ್ಣವೂ ಆದ ಸುಖದ ನೆಲೆ ಎನ್ನಿಸಿದ ಮುಕ್ತಿಯು ಖಚಿತವಾಗಿ ಲಭಿಸುವುದು ಎಂದು ಭಾವ.

೭. ಇಲ್ಲಿಯ **ಆದರತಃ, ಪರಮಾದರತಃ** ಮೊದಲಾದ ವಿವರಗಳು ಅವರ ಇತರ ಸಮಸ್ತ ಕೃತಿಗಳಿಗೂ ಸಹ ಅನ್ವಯಿಸುವವು. ಅದರಂತೆ ಪಠಿಸುವವರಿಗೆ ದೊರೆಯುವ ಫಲಶ್ರುತಿಯೂ ಸಹ ಎಂದು ತಿಳಿಯಬೇಕು.

★★★★★

## ೫. ಪಂಚಮಾಧ್ಯಾಯ (ಹರಿಗೀತಿ-ಕೇಶವಾದಿದ್ವಾದಶರೂಪಸ್ತೋತ್ರ)

**ವಾಸುದೇವಾಪರಿಮೇಯಸುಧಾಮನ್[೧]**
**ಶುದ್ಧಸದೋದಿತ ಸುಂದರಿಕಾಂತ ।**
**ಧರಾಧರಧಾರಿಣವೇಧುರಧರ್ತಃ**
**ಸೌಧೃತಿದೀಧಿತಿವೇಧೃವಿಧಾತಃ ॥ ೧ ॥**

**ಪ :** ವಾಸುದೇವ, ಅಪರಿಮೇಯ, ಸುಧಾಮನ್, ಶುದ್ಧ ಸದೋದಿತ, ಸುಂದರಿಕಾಂತ, ಧರಾಧರಧಾರಿಣವೇಧುರಧರ್ತಃ, ಸೌಧೃತಿದೀಧಿತಿವೇಧೃವಿಧಾತಃ ।

**ಅ :** ವಾಸುದೇವ, ಅಪರಿಮೇಯ, ಸುಧಾಮನ್, ಶುದ್ಧ ಸದೋದಿತ, ಸುಂದರಿಕಾಂತ, ಧರಾಧರಧಾರಿಣವೇಧುರಧರ್ತಃ, ಸೌಧೃತಿದೀಧಿತಿವೇಧೃವಿಧಾತಃ ।

**ಪ್ರ.ಪ. : ವಾಸುದೇವ** - ಹೇ ವಾಸುದೇವನೇ!; **ಅಪರಿಮೇಯ** - ಅಪ್ರಮೇಯನೇ!; **ಸುಧಾಮನ್** - ಶ್ರೇಷ್ಠನೆಲೆ ಉಳ್ಳವನೇ!; **ಶುದ್ಧ** - ಶುದ್ಧನಾದವನೇ!; **ಸದೋದಿತ** - ಸದಾ ಪ್ರಕಟಿತನೇ!; **ಸುಂದರಿಕಾಂತ** - ಮಹಾಲಕ್ಷ್ಮಿಯ ಪತಿಯೇ!; **ಧರಾಧರಧಾರಿಣವೇಧುರಧರ್ತಃ** - ಭೂಮಿಯನ್ನು ಧರಿಸಿದವನೇ ಹಾಗೂ ಭೂಮಿಯನ್ನು ಧರಿಸಿರುವ ಮೇರು ಮೊದಲಾದವುಗಳನ್ನು ಭೇದಿಸುವವನೇ!; **ಸೌಧೃತಿದೀಧಿತಿವೇಧೃವಿಧಾತಃ** - ಶ್ರೇಷ್ಠವಾದ ಧೈರ್ಯದಿಂದ ಕೂಡಿದ ದೀಪ್ತಿಯುಳ್ಳ ರುದ್ರಾದಿಗಳಿಗೂ ಮಿಗಿಲಾದ ಬ್ರಹ್ಮದೇವರನ್ನು ಸೃಷ್ಟಿಸಿದವನೇ!

**ವಾಸುದೇವನೆ ಅಪ್ರಮೇಯನೆ ನಿತ್ಯ ನಿರ್ಮಲರೂಪನೆ**
**ದೋಷರಹಿತನೆ ಸುಪ್ರಕಾಶನೆ ಲೋಕಸುಂದರಿಯರಸನೆ ।**
**ಗಿರಿಯ ಹೊತ್ತಿಹ ಭೂಮಿರಮಣನೆ ಶೇಷನಿಗು ನೆಲೆಯಾದನೆ**
**ನಿತ್ಯಕಾಂತಿಯ ಹೊತ್ತ ಅಮರರ ಪೆತ್ತ ಬ್ರಹ್ಮನ ಜನಕನೆ ॥ ೧ ॥**

**ಅನು : ಹೇ ವಾಸುದೇವನೇ! ಅಪ್ರಮೇಯನೇ! ಶ್ರೇಷ್ಠನೆಲೆ ಉಳ್ಳವನೇ! ಶುದ್ಧನಾದವನೇ! ಸದಾ ಪ್ರಕಾಶಿಸುವವನೇ! ಮಹಾಲಕ್ಷ್ಮಿಗೆ ಪತಿಯೇ! ಭೂಮಿಯನ್ನು ಧರಿಸಿದವನೇ! ಹಾಗೂ ಭೂಮಿಯನ್ನು ಧರಿಸಿರುವ ಮೇರು ಮೊದಲಾದ ಪರ್ವತಗಳನ್ನು ಭೇದಿಸುವವನೇ! ಶ್ರೇಷ್ಠವಾದ ಧೃತಿಯಿಂದ ಕೂಡಿದ ದೀಪ್ತಿಯುಳ್ಳ ರುದ್ರಾದಿಗಳಿಗೂ ಮಿಗಿಲಾದ ಬ್ರಹ್ಮದೇವರನ್ನು ಸೃಷ್ಟಿಸಿದವನೇ! (ನಿನಗೆ ವಂದನೆ).**

---

೧. 'ಕಲ್ಯಾಣಗುಣೈಕಧಾಮ್ನೇ' -ಸುಮಧ್ವವಿಜಯ (೧/೧)

ವಿ : ೧. ಇದು ಶ್ರೀಹರಿಯ ದ್ವಾದಶರೂಪಗಳ ಸ್ತುತಿಯಾಗಿದ್ದು, ಮೊದಲಿಗೆ ಮುಕ್ತಿದಾಯಕವಾದ ವಾಸುದೇವರೂಪದ ಸ್ತುತಿ ಬಂದಿದೆ.

೨. ಶ್ರೀಹರಿಯು ಅಪ್ರಮೇಯ; ಅವನ ನೆಲೆಯಾದ ವೈಕುಂಠವು ಬ್ರಹ್ಮಾದಿದೇವತೆಗಳ ಲೋಕಗಳಿಗಿಂತ ತುಂಬಾ ಮಿಗಿಲಾದುದು; ಏಕೆಂದರೆ ಅದೆಲ್ಲ ಪ್ರಾಕೃತ; ವೈಕುಂಠವು ಅಪ್ರಾಕೃತ; ಇತರ ಲೋಕಗಳಿಗೆ ಪ್ರಳಯಕಾಲದಲ್ಲಿ ಅಳಿವು ಇದೆ; ವಿಷ್ಣು ಲೋಕ ಹಾಗಲ್ಲ; ಅದು ಯಾವಾಗಲೂ ಒಂದೇ ತೆರನಾಗಿ ಶೋಭಿಸುತ್ತಲೇ ಇರುವುದು[೧]. ಅದಕ್ಕೆ ಅದು '**ಸುಧಾಮ**'ವೆನ್ನಿಸಿದೆ. ಅಂತಹ ವಿಶಿಷ್ಟಧಾಮವನ್ನು ಹೊಂದಿರುವ ಹಿರಿಮೆ ಶ್ರೀಹರಿಯದು ಎಂದರ್ಥ.

೩. ಶ್ರೀಹರಿಯ ಮುಖ್ಯಧಾಮ ಶ್ರೀವಾಯುದೇವರು – **ಪ್ರಧಾನಂ ಧಾಮ ವಿಷ್ಣೋಸ್ತು ಪ್ರಾಣ ಏವ ಪ್ರಕೀರ್ತಿತಃ** (ಅಥರ್ವಣಭಾಷ್ಯ). ವಾಯುದೇವರು ಪರಿಶುದ್ಧಭಾಗವತ-ಧರ್ಮರತರಾದ್ದರಿಂದ ಶ್ರೀಹರಿಯ ಮುಖ್ಯಪ್ರತೀಕ ಎನ್ನಿಸಿರುವರು: **ವಾಯೌ ಮುಖ್ಯ-ಧಿಯಾ** (ಭಾಗವತ). ಆದ್ದರಿಂದ ಶ್ರೀಹರಿಯನ್ನು ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಎಂಬುದಾಗಿಯೇ ಆರಾಧಿಸುವ ವಿಧಿ ಶಾಸ್ತ್ರಗಳಲ್ಲಿ ನಿರೂಪಿತವಾಗಿದೆ.

೪. '**ಧಾಮ**' ಎಂಬುದಕ್ಕೆ ತೇಜಸ್ಸು, ಮಹಿಮೆ ಮೊದಲಾದ ಅನೇಕ ಅರ್ಥಗಳಿವೆ[೨]. ಆ ಎಲ್ಲ ಅರ್ಥಗಳಲ್ಲಿಯೂ ಶ್ರೀಹರಿಯು ಸುಧಾಮ ಎನ್ನಿಸುವನು ಎಂಬುದು ವಿಶೇಷ.

೫. ಇದನ್ನು **ವಾಸುದೇವ, ಅಪರಿಮೇಯಸುಧಾಮನ್** ಎಂದೂ ಸಹ ವಿಭಾಗ ಮಾಡಬಹುದು. ಆಗ ವೈಕುಂಠಲೋಕವೂ ಸಹ ಪೂರ್ಣವಾಗಿ ತಿಳಿಯಲಾಗದಷ್ಟು ಅಪೂರ್ವಲೋಕ ಎಂಬ ವಿಶೇಷಾರ್ಥ ಲಭಿಸುವುದು. ಇದರಿಂದ ರುದ್ರಾದಿದೇವತೆಗಳಿಗೂ ಅಗಮ್ಯಮಹಿಮರಾದ ವಾಯುದೇವರು ಶ್ರೀಹರಿಯ ಮುಖ್ಯಪ್ರತೀಕವಾಗಿರುವರು ಎಂದು ಅರ್ಥವಾಗುವುದು.

೬. ಶ್ರೀಹರಿಯು **ಶುದ್ಧ** ಎಂದರೆ ಪರಿಶುದ್ಧವಾದ ಆನಂದಾದಿಕಲ್ಯಾಣಗುಣ-ಗಣಪೂರ್ಣನಾದ ಅಪ್ರಾಕೃತಶರೀರನು ಎಂದು ಅರ್ಥವಾಗುವುದು: **ಶುದ್ಧಾನಂದೋರುಸಂವಿದ್ದ್ಯುತಿಬಲಬಹುಲೌದಾರ್ಯವೀರ್ಯಾದಿದೇಹಂ** (ತತ್ತ್ವಪ್ರಕಾಶಿಕಾ).

---

೧. ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ।
ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ॥ – ಗೀತಾ. (೧೫/೬)
'ಅನಂತಾಸನವೈಕುಂಠನಾರಾಯಣಪುರಾಣಿ ತು।
ತ್ರೀಣಿ ಧಾಮಾನಿ ವೈ ವಿಷ್ಣೋಸ್ತ್ರಿಲೋಕಾದ್ಬಹಿರೇವ ಹಿ। – ಭಾಗ.ತಾ.ನಿ.(೨/೬/೨೧)

೨. 'ಧಿಷ್ಣ್ಯಂ ತೇಜಶ್ಚ ಸಾಮರ್ಥ್ಯಂ ಮಹಿಮಾ ಧಾಮ ಚೋಚ್ಯತೇ' ಇತ್ಯಭಿಧಾನಮ್॥
– ಭಾಗ.ತಾ.ನಿ.(೪/೨೦/೨೯)

೭. **ಸದೋದಿತ** ಎಂದರೆ ಸದಾ ಅಭಿವ್ಯಕ್ತವಾದ ಸ್ವರೂಪನು, ನಿತ್ಯಮುಕ್ತನು ಎಂದರ್ಥ.

೮. **ಸುಂದರಿಕಾಂತ** – ಸಕಲಸಲ್ಲಕ್ಷಣೋಪೇತಳಾದ ಕಾರಣದಿಂದ ಪರಮಸುಂದರಿ ಎನ್ನಿಸಿದ ಲಕ್ಷ್ಮೀದೇವಿಗೂ ಕಾಂತ – ಪತಿ ಎನ್ನಿಸಿದವನು ಶ್ರೀಹರಿ ಎಂದರ್ಥ. ರೂಪವು ಸ್ತ್ರೀಯರ ಹಿರಿಮೆಗೆ ಮುಖ್ಯಕಾರಣ ಎಂಬ ವಚನದ ಹಿನ್ನೆಲೆಯಲ್ಲಿ ಇಲ್ಲಿನ 'ಸುಂದರಿ'ಕಾಂತ ಎಂಬುದರ ಸ್ವಾರಸ್ಯ ಅರ್ಥವಾಗುವುದು: **ಯತ್ರ ರೂಪಂ ತತ್ರ ಗುಣಾಃ**. ಇತರ ಸಮಸ್ತದೇವತೆಗಳಿಗಿಂತಲೂ ಮಿಗಿಲಾದ ಮಹಲಕ್ಷ್ಮಿಯ ಪತಿಯಾದ ಶ್ರೀಹರಿ ಎಂದರ್ಥ. 'ಕ್ಷರಾಕ್ಷರಪುರುಷೋತ್ತಮ' ಎಂದು ಒಟ್ಟು ಭಾವ. **ಸುಂದರಿಕಾಂತ** ಎಂಬುದಕ್ಕೆ ಪರಮಸುಂದರಿಯಾದ ಮಹಾಲಕ್ಷ್ಮಿಗಿಂತಲೂ ಮನೋಹರನಾದವನು ಶ್ರೀಹರಿ ಎಂದು ಸಹ ಅರ್ಥವಾಗುವುದು.

೯. **ಶುದ್ಧಸದೋದಿತಸುಂದರಿಕಾಂತ** ಎಂಬುದಾಗಿ ಒಂದೇ ಪದವನ್ನಾಗಿ ಓದಿಕೊಂಡಾಗ, ಶುದ್ಧಳೂ, ನಿತ್ಯಾಭಿವ್ಯಕ್ತಸ್ವರೂಪಳೂ ಆದ ಪರಮಸುಂದರ ಲಕ್ಷ್ಮಿಗೆ ಪತಿ ಹಾಗೂ ಅವಳಿಗಿಂತ ಸುಂದರ ಎಂದು ಅರ್ಥವಾಗುವುದು.

೧೦. ಪರ್ವತಶ್ರೇಷ್ಠವಾದ ಮೇರುವಿಗೂ ನಿಯಾಮಕ, ಕ್ಷರಪುರುಷರಲ್ಲಿ ಶ್ರೇಷ್ಠರಾದ ಬ್ರಹ್ಮದೇವರಿಗೂ ಸೃಷ್ಟಿಕರ್ತ ಎಂಬುದು ಈ ಶ್ಲೋಕದ ಉತ್ತರಾರ್ಧದ ಭಾವ.

### ಕೇಶವಸ್ತುತಿ

**ಅಧಿಕ ಬಂಧಂ ರಂಧಯ ಬೋಧಾ-**
**ಚ್ಛಿಂಧಿ ಪಿಧಾನಂ ಬಂಧುರಮದ್ಧಾ ।**
**[೧]ಕೇಶವ ಕೇಶವ ಶಾಸಕ ವಂದೇ**
**ಪಾಶಧರಾರ್ಚಿತ ಶೂರವರೇಶ ॥ ೨ ॥**

**ಪ**: ಅಧಿಕ, ಬಂಧಮ್, ರಂಧಯ, ಬೋಧಾತ್, ಛಿಂಧಿ, ಪಿಧಾನಮ್, ಬಂಧುರಮ್, ಅದ್ಧಾ, ಕೇಶವ, ಕೇಶವ, ಶಾಸಕ, ವಂದೇ, ಪಾಶಧರಾರ್ಚಿತ, ಶೂರವರೇಶ ।

**ಅ** : ಅಧಿಕ, ಕೇಶವ, ಕೇಶವ, ಶಾಸಕ, ಪಾಶಧರಾರ್ಚಿತ, ಶೂರವರೇಶ, ವಂದೇ, ಬೋಧಾತ್, ಬಂಧಂ, ರಂಧಯ, ಬಂಧುರಮ್, ಪಿಧಾನಮ್, ಅದ್ಧಾ ಛಿಂಧಿ ।

**ಪ್ರ.ಪ.** : **ಅಧಿಕ** – ಸರ್ವೋತ್ತಮನೇ; **ಕೇಶವ** – ಬ್ರಹ್ಮರುದ್ರಾದಿ ಪ್ರವರ್ತಕನೇ!; **ಕೇಶವ** – ಶುಕ್ಲಕೇಶ–ಕೃಷ್ಣಕೇಶರೂಪಗಳಿಂದ ಅವತರಿಸಿ ಲೋಕಗಳನ್ನು ಸಲಹಿದವನೇ; **ಶಾಸಕ** – ಶಾಸನ ಮಾಡುವವನೇ!; **ಪಾಶಧರಾರ್ಚಿತ** – ಪಾಶಧರನಾದ ವರುಣನಿಂದ ಪೂಜಿತನೇ!;

---

೧. ತ್ರಿಲೋಕೇಶಃ **ಕೇಶವಃ** ಕೇಶಿಹಾ ಹರಿಃ, ನಾರಸಿಂಹವಪುಃ ಶ್ರೀಮಾನ್ **ಕೇಶವಃ** –ವಿಷ್ಣುಸಹಸ್ರನಾಮ

**ಶೂರವರೇಶ** – ಶೂರಶ್ರೇಷ್ಠರಿಗೂ ಒಡೆಯನಾದವನೇ!; **ವಂದೇ** – ವಂದಿಸುವೆನು; **ಬೋಧಾತ್** – ಜ್ಞಾನ ನೀಡುವ ಮೂಲಕ; **ಬಂಧಂ** – ಸಂಸಾರಬಂಧನವನ್ನು; **ರಂಧಯ** – ಬಿಡುಗಡೆ ಮಾಡು; **ಬಂಧುರಮ್** – ಗಾಢವಾಗಿ ಬಿಗಿದಿರುವ; **ಪಿಧಾನಮ್** – (ಅವಿದ್ಯೆಯೆಂಬ)ತೆರೆಯನ್ನು; **ಅದ್ಧಾ** – ಚೆನ್ನಾಗಿ; **ಛಿಂಧಿ** – ಕತ್ತರಿಸಿ ಹಾಕು.

**ಸರ್ವಶ್ರೇಷ್ಠನೆ ದಹಿಸು ಬಂಧವ ಪರಮ ಜ್ಞಾನವನೀಯುತ**<br>
**ಎಂದೊ ಬಿಗಿದಿಹ ಕರ್ಮಬಂಧದ ದುಷ್ಟತೆರೆಯನು ನಾಶಿಸು ।**<br>
**ಬ್ರಹ್ಮರುದ್ರರಿಗೊಡೆಯ ಕೇಶವ ಸರ್ವಶಾಸಕನೆನಿಸಿಹೆ**<br>
**ವರುಣಪೂಜಿತ ದಿವ್ಯಪಾದನೆ ಶೂರವರ್ಯರ ಸ್ವಾಮಿಯೆ ॥ ೨ ॥**

**ಅನು : ಸರ್ವೋತ್ತಮನೇ! ಬ್ರಹ್ಮರುದ್ರಾದಿ ಪ್ರವರ್ತಕನೇ! ಶುಕ್ಲಕೇಶ-ಕೃಷ್ಣಕೇಶ ರೂಪಗಳಿಂದ ಅವತರಿಸಿ ಲೋಕಗಳನ್ನು ಸಲುಹಿದವನೇ! ಶಾಸನ ಮಾಡುವವನೇ! ಪಾಶಧರನಾದ ವರುಣನಿಂದ ಪೂಜಿತನೇ! ಶೂರಶ್ರೇಷ್ಠರಿಗೂ ಒಡೆಯನಾದವನೇ! ನಿನಗೆ ವಂದಿಸುವೆನು, ಸಂಸಾರಬಂಧನವನ್ನು ಜ್ಞಾನದ ಮೂಲಕ ಬಿಡುಗಡೆ ಮಾಡು, ಗಾಢವಾಗಿ ಬಿಗಿದಿರುವ (ಅವಿದ್ಯೆಯ)ತೆರೆಯನ್ನು ಪೂರ್ಣವಾಗಿ ಕತ್ತರಿಸಿಹಾಕು.**

ವಿ : ೧. ಶ್ರೀಹರಿಯನ್ನು ಪ್ರಾರ್ಥಿಸಿಕೊಳ್ಳಬೇಕಾದದ್ದು ಈ ಸಂಸಾರಬಂಧನದಿಂದ ಬಿಡುಗಡೆಯನ್ನು; ಆದರೆ ಸಾಮಾನ್ಯವಾಗಿ ಜನರು ಬೇಡಿಕೊಳ್ಳುವುದು ಪುತ್ರಪೌತ್ರಾದಿ ಸಂಪತ್ತನ್ನು; ಎಂದರೆ ಪುನಃ ಸಂಸಾರವನ್ನೇ; ಆದರೆ ವಿವೇಕಿಗಳಾದವರು ಬೇಡಿಕೊಳ್ಳುವುದು ಸಂಸಾರದಿಂದ ಬಿಡುಗಡೆಯೊಂದನ್ನೇ.

೨. ಸಂಸಾರವನ್ನು ಪಾಶ ಎಂದು ಕರೆಯುವುದುಂಟು. ಆದರೆ ಪಾಶವನ್ನು ಆಯುಧವನ್ನಾಗಿ ಹಿಡಿದ ದಿಕ್ಪಾಲಕ ವರುಣ. ಅಂತಹ ವರುಣನಿಂದ ಪೂಜಿತನಾದವನು ಶ್ರೀಹರಿ; ಇನ್ನೂ ಮಿಗಿಲಾಗಿ ಬ್ರಹ್ಮ ರುದ್ರಾದಿಗಳಿಂದಲೂ ಪೂಜಿತನು; ಶೂರರಿಗಿಂತಲೂ ಮಹಾಶೂರನು; ಸಕಲರಿಗೂ ಪೂಜ್ಯನು; ಅಂತಹ ಶ್ರೀಹರಿಯು ನಮ್ಮನ್ನು ಬಂಧಿಸಿರುವ ಈ ಸಂಸಾರಪಾಶದಿಂದ ಬಿಡುಗಡೆ ಮಾಡಬೇಕೆಂಬುದು ಇಲ್ಲಿಯ ಬೇಡಿಕೆ.

೩. **ಕೇಶವ ಕೇಶವ** ಎಂಬುದು ಪುನರುಕ್ತಿಯಂತೆ ಕಾಣುವುದು. ಪ್ರಾರ್ಥನೆಯಲ್ಲಿ ಪುನರುಕ್ತಿ ದೋಷವಲ್ಲ ಎಂಬುದು ಪ್ರಸಿದ್ಧ; ಆದ್ದರಿಂದ ಅದು ದೋಷಣ ಎನ್ನಿಸದೆ ಭೂಷಣ ಎನ್ನಿಸುವುದು; ಅಲ್ಲದೆ ಮುಖ್ಯವಾಗಿ ಇವಕ್ಕೆ ಅರ್ಥಾಂತರವಿರುವುದರಿಂದ ಪುನರುಕ್ತಿಯ ಪ್ರಸಕ್ತಿಯೇ ಒದಗದು. ಇದರಂತೆ ಇಂತಹ ಎಲ್ಲವನ್ನೂ ಅರ್ಥಮಾಡಿಕೊಳ್ಳಬೇಕು.

೪. ಈ ಶ್ಲೋಕದಲ್ಲಿ ಮಾರ್ಗಶಿರಮಾಸದ ನಿಯಾಮಕ ರೂಪವಾದ ಕೇಶವನ ಸ್ತುತಿಯಿದೆ; **ಅಧಿಕ** ಎಂಬ ಪದದಿಂದ ಅಧಿಕಮಾಸದ ಪುರುಷೋತ್ತಮನೂ ಗೃಹೀತ.

೫. '**ಕೇಶವ**' ಎಂದರೆ ಬ್ರಹ್ಮರುದ್ರಾದಿಪ್ರವರ್ತಕ ಎಂದರ್ಥ: '**ಹಿರಣ್ಯಗರ್ಭಃ ಕಃ ಪ್ರೋಕ್ತಃ ಈಶಃ ಶಂಕರ ಏವ ಚ । ಸೃಷ್ಟ್ಯಾದಿನಾ ವರ್ತಯತಿ ತೌ ಯತಃ ಕೇಶವೋ ಭವಾನ್**' (ಗೀತಾಭಾಷ್ಯ ೨/೫೪).

೬. **ಛಿಂದಿ ಪಿಧಾನಂ** ಎಂಬ ಇಲ್ಲಿಯ ಮಾತು ಒಂದುರೀತಿಯಲ್ಲಿ ಈ ಕೆಳಗಿನ ಈಶಾವಾಸ್ಯೋಪನಿಷತ್ ಹಾಗೂ ಅದರ ಭಾಷ್ಯದ ಭಾವವಾಗಿದೆ:

> **ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಮ್ ।**
> **ತತ್ ತ್ವಂ ಪೂಷನ್ನಪಾವೃಣು ಸತ್ಯಧರ್ಮಾಯ ದೃಷ್ಟಯೇ ॥**
> **- ಈಶಾವಾಸ್ಯೋಪನಿಷತ್**

> **"ಪಾತ್ರಂ ಹಿರಣ್ಮಯಂ ಸೂರ್ಯಮಂಡಲಂ ಸಮುದಾಹೃತಮ್ ।**
> **ವಿಷ್ಣೋಃ ಸತ್ಯಸ್ಯ ತೇನೈವ ಸರ್ವದಾಽಪಿಹಿತಂ ಮುಖಮ್ ॥**
> **ತತ್ತು ಪೂರ್ಣತ್ವತಃ ಪೂಷಾ ವಿಷ್ಣುರ್ದರ್ಶಯತಿ ಸ್ವಯಮ್ । - ಈಶಾವಾಸ್ಯಭಾಷ್ಯ**

### ನಾರಾಯಣ-ಮಾಧವ

**ನಾರಾಯಣಾಮಲಕಾರಣ[1] ವಂದೇ**
**ಕಾರಣಕಾರಣ ಪೂರ್ಣವರೇಣ್ಯ ।**
**ಮಾಧವ ಮಾಧವ [2]ಸಾಧಕ ವಂದೇ**
**ಬಾಧಕ ಬೋಧಕ ಶುದ್ಧಸಮಾಧೇ ॥ ೩ ॥**

**ಪ** : ನಾರಾಯಣ, ಅಮಲ, ಕಾರಣ, ವಂದೇ, ಕಾರಣಕಾರಣ, ಪೂರ್ಣ, ವರೇಣ್ಯ, ಮಾಧವ, ಮಾಧವ, ಸಾಧಕ, ವಂದೇ, ಬಾಧಕ, ಬೋಧಕ, ಶುದ್ಧಸಮಾಧೇ ।

**ಅ** : ನಾರಾಯಣ, ಅಮಲ, ಕಾರಣ, ಕಾರಣಕಾರಣ, ಪೂರ್ಣ, ವರೇಣ್ಯ, ವಂದೇ, ಮಾಧವ, ಮಾಧವ, ಸಾಧಕ, ಬಾಧಕ, ಬೋಧಕ, ಶುದ್ಧಸಮಾಧೇ, ವಂದೇ ।

ಪ್ರ.ಪ.: **ನಾರಾಯಣ** – ನಾರಾಯಣನೇ!; **ಅಮಲ** – ನಿರ್ದೋಷನೇ!; **ಕಾರಣ** – ಸಕಲಕ್ಕೂ ಕಾರಣನೇ!; **ಕಾರಣಕಾರಣ** – ಇತರ ಸಕಲಕಾರಣಗಳಿಗೂ ಕಾರಣನೇ!; **ಪೂರ್ಣ**– ಪರಿಪೂರ್ಣನಾದವನೇ!; **ವರೇಣ್ಯ** – ಭಜನೀಯನಾದವನೇ; **ವಂದೇ** –

---

೧. ಕರಣಂ ಕಾರಣಂ ಕರ್ತಾ - ವಿಷ್ಣುಸಹಸ್ರನಾಮ

೨. ಸಾಧಿತಾಖಿಲಸತ್ತತ್ತ್ವಂ ಬಾಧಿತಾಖಿಲದುರ್ಮತಮ್ ।
ಬೋಧಿತಾಖಿಲಸನ್ಮಾರ್ಗಂ ಮಾಧವಾಖ್ಯಗುರುಂ ಭಜೇ ॥
– ಎಂಬ ಶ್ರೀಮಾಧವತೀರ್ಥರನ್ನು ಕುರಿತ ಚರಮಶ್ಲೋಕದಲ್ಲಿ ಇಲ್ಲಿಯ ಸಾಧಕ, ಬಾಧಕ, ಬೋಧಕ ಎಂಬ ಪದಗಳ ನೇರಪ್ರಭಾವವನ್ನು ಕಾಣಬಹುದು.

ನಿನಗೆ ವಂದಿಸುವೆನು; **ಮಾಧವ** – ಲಕ್ಷ್ಮೀಪತಿಯೇ; **ಮಾಧವ** – ಮಾಧವನೇ; **ಸಾಧಕ** – ಸರ್ವವನ್ನೂ ಸಾಧಿಸುವವನೇ!; **ಬಾಧಕ** – ದುಷ್ಟರನ್ನು ಬಾಧಿಸುವವನೇ!; **ಬೋಧಕ** – ಸಜ್ಜನರಿಗೆ ಜ್ಞಾನ ನೀಡುವವನೇ!; **ಶುದ್ಧಸಮಾಧೇ** – ಶುದ್ಧವಾದ ಶಾಂತಿಯನ್ನು ನೀಡುವವನೇ!; **ವಂದೇ** – ವಂದಿಸುವೆನು.

**ಶ್ರೀಶ ನಾರಾಯಣನೆ ನಮಿಸುವೆ ನಿತ್ಯನಿರ್ಮಲಕಾರಣ**
**ಸಕಲಕಾರಣಗಳಿಗು ಕಾರಣ ಪೂರ್ಣನೇ ವರಣೀಯನೆ ।**
**ಭಕ್ತವೃಂದದ ಇಷ್ಟಸಾಧಕ ಶ್ರೀಶ ಮಾಧವ ನಮಿಸುವೆ**
**ದುಷ್ಟಬಾಧಕ ಶಿಷ್ಟಬೋಧಕ ಶುದ್ಧಧ್ಯಾನಪ್ರದಾಯಕ ॥ ೩ ॥**

**ಅನು : ನಾರಾಯಣನೇ! ನಿರ್ದೋಷನೇ! ಸಕಲಕ್ಕೂ ಕಾರಣನೇ! ಇತರ ಸಕಲ ಕಾರಣಗಳಿಗೂ ಕಾರಣನೇ! ಪರಿಪೂರ್ಣನಾದವನೇ! ಭಜನೀಯನಾದವನೇ! ವಂದಿಸುವೆನು, ಲಕ್ಷ್ಮೀಪತಿಯೇ! ಮಾಧವನೇ! ಸರ್ವವನ್ನೂ ಸಾಧಿಸುವವನೇ! ದುಷ್ಟರನ್ನು ಬಾಧಿಸುವವನೇ! ಸಜ್ಜನರಿಗೆ ಜ್ಞಾನ ನೀಡುವವನೇ! ಶುದ್ಧವಾದ ಶಾಂತಿಯನ್ನು ನೀಡುವವನೇ! ನಿನಗೆ ವಂದಿಸುವೆನು.**

ವಿ : ೧. ಈ ಶ್ಲೋಕದ ಪೂರ್ವಾರ್ಧದಲ್ಲಿ ಪುಷ್ಯಮಾಸ ನಿಯಾಮಕವಾದ ಶ್ರೀಹರಿಯ ನಾರಾಯಣರೂಪದ ಹಾಗೂ ಉತ್ತರಾರ್ಧದಲ್ಲಿ ಮಾಧವ ಎಂಬ ಮಾಘಮಾಸದ ನಿಯಾಮಕ ರೂಪದ ವಿವರಣೆ ಬಂದಿದೆ.

೨. **ನಾರಾಯಣನು ಅಮಲಕಾರಣ** ಎಂದರೆ ವಿಕಾರ ಹೊಂದದ ಸಾಧನ. ಉಪಾದಾನ ಕಾರಣವು ಜಡವಾದ್ದರಿಂದ, ಅದಕ್ಕೂ ಕಾರಣನಾದ ನಿಮಿತ್ತಕಾರಣನೆ ಎಂದರ್ಥ. ಶ್ರೀಹರಿಯು ಜಗತ್ತಿಗೆ ಕಾರಣ ಮಾತ್ರವಲ್ಲದೆ ಇತರ ಸಕಲಕಾರ್ಯಗಳಿಗೂ ಕಾರಣನಾದ ಮೂಲಕಾರಣ ಎಂದರ್ಥ.

೩. **ಕಾರಣಕಾರಣ** – ಬ್ರಹ್ಮಾದಿದೇವತೆಗಳು ಸೃಷ್ಟಿ ಮೊದಲಾದ ಕಾರ್ಯಗಳಿಗೆ ಕಾರಣರು; ಆದರೆ ಅವರಿಗೂ ಕಾರಣಪುರುಷನಾದವನು ಶ್ರೀಹರಿ ಎಂದು ಭಾವ. ಅದರಂತೆ ಕಾರಣದಲ್ಲಿರುವ ಕಾರಣತ್ವಕ್ಕೂ ಅವನೇ ಕಾರಣ ಎಂದರ್ಥ. ಜಲಗಳಿಗೂ ಅವುಗಳಲ್ಲಿನ ರಸಕ್ಕೂ, ಸೂರ್ಯಚಂದ್ರರಿಗೂ ಅವರಲ್ಲಿನ ಪ್ರಭೆಗೂ ಪ್ರತ್ಯೇಕವಾಗಿ ಕಾರಣನಾಗಿರುವನು ಎಂದು ತಿಳಿಯಬೇಕು. ಇತರಸಕಲವೂ ಅವಾಂತರಕಾರಣವಾಗಿದ್ದು, ಶ್ರೀಹರಿಯು ಪ್ರಧಾನಕಾರಣ ಎಂದು ತಾತ್ಪರ್ಯ:

**ಸ ಕಾರಣಂ ಕಾರಣತಸ್ತತೋಽಪಿ ತಸ್ಯಾಪಿ ಹೇತುಃ ಪರಹೇತುಹೇತುಃ ।**
**ಕಾರ್ಯೇಷು ಚೈವಂ ಸ ಹಿ ಕರ್ಮಕರ್ತೃರೂಪೈರಶೇಷೈರವತೀಹ ಸರ್ವಮ್ ॥**

– ಬ್ರಹ್ಮಪಾರಸ್ತೋತ್ರ

೪. **ಪೂರ್ಣ** – ಅವನು ಪೂರ್ಣ ಎಂದರೆ ದೇಶತಃ, ಕಾಲತಃ, ಹಾಗೂ ಗುಣತಃ ಪರಿಪೂರ್ಣ ಎಂದರ್ಥ; ಸಕಲಗುಣಪರಿಪೂರ್ಣ, ಅವನ ಪ್ರತಿಯೊಂದು ಗುಣವೂ ಪರಿಪೂರ್ಣ ಎಂದು ಭಾವ :

**'ಪ್ರತ್ಯೇಕಶೋ ಗುಣಾನಾಂ ತು ನಿಃಸೀಮತ್ವಮುದೀರ್ಯತೇ ।**
**ತದಾನಂತ್ಯಂ ತು ಗುಣತಸ್ತೇ ಚಾನಂತಾ ಹಿ ಸಂಖ್ಯಯಾ ।**
**ಅತೋಽನಂತಗುಣೋ ವಿಷ್ಣುರ್ಗುಣತೋಽನಂತ ಏವ ಚ' ॥**

**– ಇತಿ ತಂತ್ರಭಾಗವತೇ । ಭಾಗ.ತಾ.ನಿ.(೬/೪/೪೮)**

೫. **ಮಾಧವ** ಎಂದರೆ ರಮಾಧವ ಎಂದರ್ಥ. '**ಮಾ**' ಎಂದರೆ ರಮಾ ಎಂದೇ ಅರ್ಥವಿರುವುದರಿಂದ ಎಂದು ತಿಳಿಯಬೇಕು.

೬. ಅವನು ಭಕ್ತರ ಪಾಲಿಗೆ ಸಕಲ ಪುರುಷಾರ್ಥವೂ ಆಗಿರುವವನು; ಅವನು ಸಕಲಕಾರ್ಯಸಾಧಕನೂ, ದುರ್ಜನಬಾಧಕನೂ ಆಗಿರುವನು. ಅದರಂತೆ ಸಜ್ಜನರಿಗೆ ಬೋಧಕನೂ ಅಗಿರುವ ಸರ್ವಸ್ವಾಮಿ ಎಂದು ಭಾವ. ಇದು ಒಂದು ರೀತಿಯಲ್ಲಿ '**ಪರಿತ್ರಾಣಾಯ ಸಾಧೂನಾಂ**' ಎಂಬ ಗೀತಾಶ್ಲೋಕದ ಭಾವವೂ ಆಗಿದೆ.

೭. **ಶುದ್ಧಸಮಾಧೇ** – ಶ್ರೀಹರಿಯದು ಪರಿಶುದ್ಧಚಿಂತನೆಯೇ ಹೊರತು ಕುಹಕದ ಚಿಂತನೆಯಲ್ಲ, ಮಿಥ್ಯಾಚಿಂತನೆಯೂ ಅಲ್ಲ ಎಂದರ್ಥ:

**ಯಚ್ಚಿಕೇತ ಸತ್ಯಮಿತ್ ತನ್ನ ಮೋಘಂ ವಸು ಸ್ಪಾರ್ಹಮುತ ಜೇತೋತ ದಾತಾ ॥**

**– ಋಗ್ವೇದ (೮/೩/೪)**

**ಗೋವಿಂದ-ವಿಷ್ಣು**

**ಗೋವಿಂದ ಗೋವಿಂದ ಪುರಂದರ ವಂದೇ**
**ಸ್ಕಂದಸನಂದನವಂದಿತಪಾದ ।**
**ವಿಷ್ಣೋ ಸೃಜಿಷ್ಣೋ ಗ್ರಸಿಷ್ಣೋ ವಿವಂದೇ**
**ಕೃಷ್ಣ ಸದುಷ್ಣವಧಿಷ್ಣೋ ಸುಧೃಷ್ಣೋ ॥ ೪ ॥**

**ಪ** : ಗೋವಿಂದ, ಗೋವಿಂದ, ಪುರಂದರ, ವಂದೇ, ಸ್ಕಂದಸನಂದನವಂದಿತಪಾದ, ವಿಷ್ಣೋ, ಸೃಜಿಷ್ಣೋ, ಗ್ರಸಿಷ್ಣೋ, ವಿವಂದೇ, ಕೃಷ್ಣ, ಸದುಷ್ಣವಧಿಷ್ಣೋ, ಸುಧೃಷ್ಣೋ ।

**ಅ** : ಸ್ಕಂದಸನಂದನವಂದಿತಪಾದ, ಗೋವಿಂದ, ಗೋವಿಂದ, ಪುರಂದರ, ವಂದೇ, ಸೃಜಿಷ್ಣೋ, ಗ್ರಸಿಷ್ಣೋ, ಕೃಷ್ಣ, ಸದುಷ್ಣವಧಿಷ್ಣೋ, ಸುಧೃಷ್ಣೋ, ವಿಷ್ಣೋ, ವಿವಂದೇ ।

**ಪ್ರ.ಪ.** : **ಸ್ಕಂದಸನಂದನವಂದಿತಪಾದ** – ಸ್ಕಂದ ಹಾಗೂ ಸನಂದನರಿಂದ ವಂದಿತ ಪಾದನೇ!; [೧]**ಗೋವಿಂದ** – ವೇದಗಳಿಂದ ತಿಳಿಯಲ್ಪಡುವವನೇ!; **ಗೋವಿಂದ** –

---

೧. ಗೌರೇಷಾ ತು ತಥಾ ವಾಣೀ ತಾಂ ತು ವಿಂದಯತೇ ಭವಾನ್ ।
**ಗೋವಿಂದಸ್ತು** ತತೋ ದೇವ ಮುನಿಭಿಃ ಕಥ್ಯತೇ ಭವಾನ್ ॥ – ಹರಿವಂಶ

ಗೋವಿಂದನೇ!; **ಪುರಂದರ** - ಲಿಂಗದೇಹವನ್ನು ಭಂಗಮಾಡುವವನೇ!; **ವಂದೇ** - ವಂದಿಸುವೆನು; **ಸೃಜಿಷ್ಣೋ** - ಸೃಷ್ಟಿಮಾಡುವವನೇ!; **ಗ್ರಸಿಷ್ಣೋ** - ಸಂಹಾರ ಮಾಡುವವನೇ!; **ಕೃಷ್ಣ** - ಕೃಷ್ಣನೇ; **ಸದುಷ್ಣವಧಿಷ್ಣೋ** - ಸಜ್ಜನರ ನೋವನ್ನು ಪರಿಹರಿಸುವವನೇ!; **ಸುಧೃಷ್ಣೋ** - ಚೆನ್ನಾಗಿ ಸಂರಕ್ಷಿಸುವವನೇ!; **ವಿಷ್ಣೋ** - ವಿಷ್ಣುವೇ!; **ವಿವಂದೇ** - ವಿಶೇಷವಾಗಿ ವಂದಿಸುವೆನು.

**ವೇದವೇದ್ಯನೆ ಶತ್ರುನಾಶಕ ವಂದಿಪೆನು ಗೋವಿಂದನೆ**
**ಸ್ಕಂದಪಿತಶ್ರೀರುದ್ರವಂದಿತ ಸರ್ವವಂದಿತಪಾದನೆ ।**
**ವಿಶ್ವಸರ್ಜಕ ವಿಶ್ವನಾಶಕ ವಿಷ್ಣುವೆ ನಾ ನಮಿಸುವೆ**
**ನೀಲವರ್ಣನೆ ದೈತ್ಯನಾಶಕ ವೇದಧರ್ಮಸುಪಾಲಕ ॥ ೪ ॥**

**ಅನು : ಸ್ಕಂದ ಹಾಗೂ ಸನಂದನರಿಂದ ವಂದಿತಪಾದನೇ! ವೇದಗಳಿಂದ ತಿಳಿಯಲ್ಪಡುವವನೇ! ಗೋವಿಂದನೇ! ಲಿಂಗದೇಹವನ್ನು ಭಂಗಮಾಡುವವನೇ! ನಿನಗೆ ವಂದಿಸುವೆನು, ಸೃಷ್ಟಿ ಮಾಡುವವನೇ! ಸಂಹಾರ ಮಾಡುವವನೇ! ಕೃಷ್ಣನೇ! ಸಜ್ಜನರ ನೋವನ್ನು ಪರಿಹರಿಸುವವನೇ! ಚೆನ್ನಾಗಿ ಸಂರಕ್ಷಿಸುವವನೇ! ವಿಷ್ಣುವೇ! ವಿಶೇಷವಾಗಿ ನಿನಗೆ ವಂದಿಸುವೆನು.**

ವಿ : ೧. ಫಾಲ್ಗುಣಮಾಸದ ನಿಯಾಮಕವಾದ ಶ್ರೀಹರಿಯ ಗೋವಿಂದ ರೂಪದ ಸ್ತೋತ್ರವು ಈ ಶ್ಲೋಕದ ಪೂರ್ವಾರ್ಧದಲ್ಲೂ, ಚೈತ್ರಮಾಸದ ನಿಯಾಮಕವಾದ ವಿಷ್ಣುರೂಪದ ಸ್ತೋತ್ರವು ಉತ್ತರಾರ್ಧದಲ್ಲೂ ಬಂದಿದೆ.

೨. '**ಗೋವಿಂದ**' ಎಂಬ ನಾಮವು ವಿಷ್ಣುಸಹಸ್ರನಾಮದಲ್ಲಿ[೧] ಎರಡು ಬಾರಿ ಬಂದಿದ್ದು ಇಲ್ಲಿಯ ಪುನರುಕ್ತಿ ಆ ವಿವರದ ಸೂಚನೆಯಂತಿರುವುದು ಗಮನಾರ್ಹ. ಗೋವಿಂದ ಎಂದರೆ ಶಾಸ್ತ್ರಗಳಿಂದ ಮಾತ್ರವೇ ತಿಳಿಯಲ್ಪಡುವವನು ಹಾಗೂ ವೇದಾದಿ ಸಕಲಶಾಸ್ತ್ರಗಳಿಂದ ಪ್ರತಿಪಾದಿತನಾದವನು ಎಂದರ್ಥ; ಪುರಂದರ ಎಂದರೆ ಶತ್ರುಗಳ ಪಟ್ಟಣಗಳನ್ನು ನಾಶಮಾಡುವವನು ಹಾಗೂ ಲಿಂಗದೇಹದ ನಾಶವನ್ನು ಮಾಡಿ ಮೋಕ್ಷನೀಡುವವನು ಎಂದರ್ಥ; ಇದು ಬ್ರಹ್ಮಸೂತ್ರಗಳ **ಶಾಸ್ತ್ರಯೋನಿತ್ವಾತ್** ಹಾಗೂ **ಗತಿಸಾಮಾನ್ಯಾತ್** ಸೂತ್ರಗಳ ವಿವರಣ ರೂಪವಾಗಿದೆ.

೩.. **ಸ್ಕಂದ** ತಾರತಮ್ಯದಲ್ಲಿ ಇಂದ್ರನಿಗೆ ಸಮನೆನ್ನಿಸುವ ದೇವತೆ. **ಸನಂದನ** ಬ್ರಹ್ಮದೇವರ ಮಾನಸಪುತ್ರರಾದ ಸನಕ, ಸನಂದನ, ಸನತ್ಕುಮಾರ ಹಾಗೂ ಸನತ್ಸುಜಾತ ಎಂಬ ನಾಲ್ವರಲ್ಲಿ

---

೧. ಅನಿರುದ್ಧಃ ಸದಾನಂದೋ **ಗೋವಿಂದಃ**, ಮಹಾವರಾಹೋ **ಗೋವಿಂದಃ**. - ವಿಷ್ಣುಸಹಸ್ರನಾಮ

ಒಬ್ಬರು; ಇವರಿಬ್ಬರಿಂದ ಹಾಗೂ ಸಕಲ ದೇವಮುನಿಗಳಿಂದ ವಂದಿತನಾದವನು ಶ್ರೀಹರಿ ಎಂದರ್ಥ.

೪. ಜಗತ್ತನ್ನು ಸೃಷ್ಟಿ ಮಾಡುವವನು ಹಾಗೂ ನಾಶ ಮಾಡುವವನು ಆಗಿರುವನು ಎಂದರೆ ಬ್ರಹ್ಮದೇವರಲ್ಲಿ ಬ್ರಹ್ಮ ಎಂಬ ರೂಪದಿಂದಿದ್ದು, ರುದ್ರದೇವರಲ್ಲಿ ರುದ್ರ ಎಂಬ ರೂಪದಿಂದಿದ್ದು ಮಾಡುವವನು ಶ್ರೀಹರಿಯೇ ಆಗಿರುವನು ಎಂದರ್ಥ. ಅದರಂತೆ ಸ್ವಯಂ ವಿಷ್ಣುರೂಪದಿಂದ ಸಮಸ್ತ ವಿಶ್ವವನ್ನು ಪಾಲಿಸುವ ದೇವತೆಯೂ ಆಗಿರುವನು ಎಂದರ್ಥ. '**ಬ್ರಹ್ಮಣಿ ಬ್ರಹ್ಮರೂಪೋಽಸೌ ಶಿವರೂಪೀ ಶಿವೇ ಸ್ಥಿತಃ**' ಎಂದರ್ಥ.

೫. ಇದರೊಂದಿಗೆ ಸಜ್ಜನರಿಗಾಗುವ ನೋವನ್ನು ಸಂಪೂರ್ಣವಾಗಿ ಪರಿಹರಿಸುವವನು ಸಹ ಈತನು; ಎಂದರೆ ಕೃಷ್ಣೆ ಎಂದರೆ ದ್ರೌಪದಿ ಎಂದರ್ಥ; ಕೌರವರ ಸಭೆಯಲ್ಲಿ ಒದಗಿದ ಅತ್ಯಂತ ಅಪಾಯದ ಸನ್ನಿವೇಶದಲ್ಲಿ ದ್ರೌಪದಿಗೆ ಅಕ್ಷಯವಸ್ತ್ರವನ್ನು ನೀಡಿ ಪಾಲಿಸಿದವನು ಎಂದರ್ಥ.

೬. ಇದನ್ನು[೧]**ಸ್ಕಂದ, ಸನಂದನ, ವಂದಿತ, ಪಾದ** ಎಂಬುದಾಗಿ ವಿಭಿನ್ನಪದಗಳನ್ನಾಗಿಯೂ ಅರ್ಥಮಾಡಿಕೊಳ್ಳಬಹುದು. ಆಗ ಅವೆಲ್ಲವೂ ಶ್ರೀಹರಿಯ ನಾಮಗಳೇ ಆಗುವವು.

### ಮಧುಸೂದನ-ತ್ರಿವಿಕ್ರಮ

**ಮಧುಸೂದನ ದಾನವಸಾದನ ವಂದೇ**
**ದೈವತಮೋದನ ವೇದಿತಪಾದ ।**
**ತ್ರಿವಿಕ್ರಮ[೨] ನಿಷ್ಕ್ರಮ ವಿಕ್ರಮ ವಂದೇ**
**ಸುಕ್ರಮ ಸಂಕ್ರಮಹುಂಕೃತವಕ್ತ್ರ ॥ ೫ ॥**

**ಪ :** ಮಧುಸೂದನ, ದಾನವಸಾದನ, ವಂದೇ, ದೈವತಮೋದನ, ವೇದಿತಪಾದ, ತ್ರಿವಿಕ್ರಮ, ನಿಷ್ಕ್ರಮ, ವಿಕ್ರಮ, ವಂದೇ, ಸುಕ್ರಮ, ಸಂಕ್ರಮಹುಂಕೃತವಕ್ತ್ರ ।

**ಅ :** ದಾನವಸಾದನ, ದೈವತಮೋದನ, ವೇದಿತಪಾದ, ಮಧುಸೂದನ, ವಂದೇ, ನಿಷ್ಕ್ರಮ, ವಿಕ್ರಮ, ಸುಕ್ರಮ, ಸಂಕ್ರಮಹುಂಕೃತವಕ್ತ್ರ, ತ್ರಿವಿಕ್ರಮ, ವಂದೇ ।

**ಪ್ರ.ಪ. : ದಾನವಸಾದನ** – ದಾನವರನ್ನು ಸದೆಬಡಿದವನೇ!; **ದೈವತಮೋದನ** – ದೇವತೆಗಳಿಗೆ ಆನಂದ ನೀಡಿದವನೇ!; **ವೇದಿತಪಾದ** – ಯೋಗ್ಯರಿಗೆ ನಿನ್ನ ಸ್ವರೂಪವನ್ನು

---

೧. **ಸ್ಕಂದೋ** ಜಗತಃ ಸ್ಕಂದನಾತ್ । (ವಿಭೂತಿತತ್ತ್ವೇ) – ಗೀ.ತಾ.(೧೦/೧೧-೨೭)

೨. ವೇದಾನ್ ಕಾಲಾನ್ ಗುಣಾನ್ ಲೋಕಾನ್ ದೇವಮಾನುಷದಾನವಾನ್ ।
ಚೇತನಾಚೇತನಾನ್ ಮಿಶ್ರಾನ್ ತ್ರೀಣಿ ಪದಾ ವಿಚಕ್ರಮೇ ॥ – ಋಗ್ಭಾಷ್ಯ (೨/೩೫)

ತಿಳಿಸಿದವನೇ!; **ಮಧುಸೂದನ** – ಮಧುಸೂದನನೇ!; **ವಂದೇ** – ವಂದಿಸುವೆನು; **ನಿಷ್ಕ್ರಮ** – ಕ್ರಮರಹಿತನಾದವನೇ!; **ವಿಕ್ರಮ** – ವಿಶಿಷ್ಟಕ್ರಮ ಉಳ್ಳವನೇ!; **ಸುಕ್ರಮ** – ಶ್ರೇಷ್ಠಕ್ರಮ ಉಳ್ಳವನೇ!; **ಸಂಕ್ರಮ** – ಉತ್ತಮ ಕ್ರಮ ಉಳ್ಳವನೇ! ; **ಹುಂಕೃತವಕ್ತ್ರ** – ಹೂಂಕಾರಮಾಡುವ ಮುಖ ಉಳ್ಳವನೇ!; **ತ್ರಿವಿಕ್ರಮ** – ತ್ರಿವಿಕ್ರಮನೇ!; **ವಂದೇ** – ವಂದಿಸುವೆನು.

**ಸರ್ವದಾನವವೃಂದನಾಶನ ವಂದಿಪೆನು ಮಧುಸೂದನ**
**ದಿವಿಜವೃಂದಸುಮೋದದಾಯಕ ನಿಗಮವೃಂದಸುವೇದ್ಯನೆ ।**
**ಸರ್ವಬಂಧವಿಹೀನರೂಪನೆ ವಿಕ್ರಮನೆ ನಾ ನಮಿಪೆನು**
**ವಿಮಲವಿಕ್ರಮ ಹೇ ತ್ರಿವಿಕ್ರಮ ಲಯದಿ ಹುಂಕೃತವದನನೆ ॥ ೫ ॥**

**ಅನು : ದಾನವರನ್ನು ಸದೆಬಡಿದವನೇ! ದೇವತೆಗಳಿಗೆ ಆನಂದ ನೀಡಿದವನೇ! ಯೋಗ್ಯರಿಗೆ ನಿನ್ನ ಸ್ವರೂಪವನ್ನು ತಿಳಿಸಿದವನೇ! ಮಧುಸೂದನನೇ! ವಂದಿಸುವೆನು, ಕ್ರಮರಹಿತನಾದವನೇ! ವಿಶಿಷ್ಟಕ್ರಮ ಉಳ್ಳವನೇ! ಶ್ರೇಷ್ಠಕ್ರಮ ಉಳ್ಳವನೇ! ಉತ್ತಮ ಕ್ರಮ ಉಳ್ಳವನೇ! ಹೂಂಕಾರ ಮಾಡುವ ಮುಖ ಉಳ್ಳವನೇ! ತ್ರಿವಿಕ್ರಮನೇ! ವಂದಿಸುವೆನು.**

ವಿ : ೧. ಈ ಶ್ಲೋಕದಲ್ಲಿ ಶ್ರೀಹರಿಯ ಮಧುಸೂದನ ಹಾಗೂ ತ್ರಿವಿಕ್ರಮ ಎಂಬ ಎರಡು ರೂಪಗಳ ಸ್ತುತಿ ಬಂದಿದೆ; ಇವೆರಡೂ ಕ್ರಮವಾಗಿ ವೈಶಾಖ ಹಾಗೂ ಜ್ಯೇಷ್ಠ ಮಾಸಗಳ ನಿಯಾಮಕ ರೂಪಗಳು.

೨. **ಮಧು** ಎಂಬವನು ಒಬ್ಬ ಅಸುರ; ಕೈಟಭ ಅವನ ಸಹೋದರ. ಇಲ್ಲಿಯ ಮಧುವಿನ ಉಲ್ಲೇಖ ಕೈಟಭನಿಗೂ ಅನ್ವಯಿಸುವುದು. ಅವರಿಬ್ಬರನ್ನೂ ಸಂಹರಿಸಿದ್ದು ಶ್ರೀಹರಿಯೇ. ಮಧುವಿನ ಶರೀರದ ಮೇದಸ್ಸಿನಿಂದ ಈ ಭೂಮಿಯ ನಿರ್ಮಾಣವಾದ್ದರಿಂದ ಇದಕ್ಕೆ ಮೇದಿನೀ ಎಂಬ ಹೆಸರೂ ಇದೆ.

೩. ಶ್ರೀಹರಿಯು ಈ ಆದಿದೈತ್ಯರನ್ನಲ್ಲದೆ ಇತರ ಸಕಲದೈತರನ್ನು ಸಂಹರಿಸಿದವನು. ಇತರರಿಗೂ ಅವಕಾಶ ನೀಡಿ ಅವರ ಮೂಲಕವೂ ದೈತ್ಯವಧೆ ಮಾಡಿಸಿದವನು ಇದನ್ನು '**ದಾನವಸಾದನ**' ಎಂಬ ಪದದಿಂದ ಸೂಚಿಸಿರುವರು.

೪. ಶ್ರೀಹರಿಯ ಅವತಾರದ ಒಂದು ಪ್ರಯೋಜನ ದೈತ್ಯರ ಸಂಹಾರವಾದರೆ ಮತ್ತೊಂದು ಉದ್ದೇಶ ದೇವತೆಗಳ ಉದ್ಧಾರ; ಇದನ್ನು '**ದೈವತಮೋದನ**' ಎಂಬ ಪದದಿಂದ ಸೂಚಿಸಿರುವರು.

೫. ಶ್ರೀಹರಿಯು ಸ್ವರೂಪತಃ ಅವ್ಯಕ್ತನಾದವನು; ಆದರೂ ಭಕ್ತರ ಮೇಲಿನ ಅನುಕಂಪದಿಂದಾಗಿ ತನ್ನ ಸ್ವರೂಪವನ್ನು ಅವರ ಯೋಗ್ಯತೆಗೆ ಅನುಗುಣವಾಗಿ ತೋರುವನು; ಇದು ಅವನ ವಿಶೇಷವಾದ ಸಾಮರ್ಥ್ಯಕ್ಕೆ ಸೂಚಕ.

೬. **ತ್ರಿವಿಕ್ರಮ** – ವಿಕ್ರಮ ಎಂದರೆ ಹೆಜ್ಜೆ; ತ್ರಿವಿಕ್ರಮ ಎಂಬುದಕ್ಕೆ ಮೂರು ವಿಶೇಷವಾದ ಹೆಜ್ಜೆ ಇರಿಸಿದವನು ಎಂದು ಅರ್ಥ. ಅವುಗಳಲ್ಲಿ ಒಂದು ಹೆಜ್ಜೆಯಿಂದ ಸಕಲ ಊರ್ಧ್ವ ಲೋಕಗಳನ್ನು, ಇನ್ನೊಂದು ಹೆಜ್ಜೆಯಿಂದ ಸಕಲ ಭೂಲೋಕಗಳನ್ನು ಪಡೆದವನು; ಮೂರನೆ ಹೆಜ್ಜೆಯನ್ನು ನೀಡಲಾಗದೆ ಬಲಿಚಕ್ರವರ್ತಿ ತಲೆಬಾಗಿಸುವಂತಾಯಿತು. ಹೀಗೆ ತನ್ನ ವಿಶಿಷ್ಟವಾದ ಮೂರು ಹೆಜ್ಜೆಗಳಿಂದ ಬಲಿಚಕ್ರವರ್ತಿಯನ್ನು ಬಲಿಹಾಕಿದ್ದರಿಂದ ತ್ರಿವಿಕ್ರಮ ಎಂಬ ಹೆಸರು ಲೋಕಮಾನ್ಯವಾಯಿತು ಎಂದರ್ಥ.

೭. **ನಿಷ್ಕ್ರಮ** ಎಂದರೆ ಸ್ವತಂತ್ರ ಎಂದರ್ಥ; ಆದ್ದರಿಂದ ಅವನಿಗೆ ಇಂತಹದ್ದೇ ಕ್ರಮವನ್ನು ಅನುಸರಿಸಬೇಕೆಂಬ ನಿರ್ಬಂಧಲ್ಲ ಎಂದು ಭಾವ; ಇತರರಾರೂ ಹೀಗೆ ಕ್ರಮಾತೀತರಾಗಿಲ್ಲ ಎಂದು ಭಾವ.

೮. **ವಿಕ್ರಮ** ಎಂದರೆ ವಿಶಿಷ್ಟವಾದ ಕ್ರಮವುಳ್ಳವನು. ಎಂದರೆ ತನ್ನದೇ ಆದ ಕ್ರಮವನ್ನು ಅಳವಡಿಸಿಕೊಂಡಿರುವವನು ಎಂದರ್ಥ. 'ಆನೆ ನಡೆದದ್ದೇ ಹಾದಿ' ಎನ್ನುವಂತೆ.

೯. ಅವನ ಕ್ರಮ ಏನೇ ಇದ್ದರೂ ಅದು ಅತ್ಯಂತಶ್ಲಾಘ್ಯವಾಗಿದ್ದು ಬಹುಮುಖವಾದ ಹಿರಿಮೆಯನ್ನು ಹೊಂದಿರುವುದು ಎಂದು ಭಾವ. ಗುಣನಿಧಿಯೂ, ದೋಷದೂರನೂ ಆದ ಅವನ ಪ್ರತಿಯೊಂದು ಕ್ರಮವೂ ಸಹ ಅತ್ಯಂತ ಶ್ರೇಷ್ಠ ಎಂದರ್ಥ.

೧೦. **ಸಂಕ್ರಮ** ಎಂದರೆ ಮಹಾಪ್ರಳಯ ಕಾಲ. ಎಲ್ಲವೂ ನಾಶಕ್ಕೊಳಗಾಗುವ ಸಮಯದಲ್ಲಿ ಶ್ರೀಹರಿಯೊಬ್ಬನೇ ಸ್ವತಂತ್ರನಾಗಿ ಕೇವಲ ಹುಂಕಾರದಿಂದ ಜಗತ್ತನ್ನು ನುಂಗಿಹಾಕುವವನು ಎಂದು ಭಾವ.

### ವಾಮನ-ಶ್ರೀಧರ

**ವಾಮನ ವಾಮನ ಭಾಮನ ವಂದೇ**
**ಸಾಮನ ಸೀಮನ ಶಾಮನ ಸಾನೋ ।**
**ಶ್ರೀಧರ ಶ್ರೀಧರ ಶಂಧರ ವಂದೇ**
**ಭೂಧರ ವಾರ್ಧರ ಕಂಧರಧಾರಿನ್ ॥ ೬ ॥**

**ಪ :** ವಾಮನ, ವಾಮನ, ಭಾಮನ, ವಂದೇ, ಸಾಮನ, ಸೀಮನ, ಶಾಮನ, ಸಾನೋ, ಶ್ರೀಧರ, ಶ್ರೀಧರ, ಶಂಧರ, ವಂದೇ, ಭೂಧರ, ವಾರ್ಧರ, ಕಂಧರಧಾರಿನ್ ।

**ಅ**: ಭಾಮನ, ಸಾಮನ, ಸೀಮನ, ಶಾಮನ, ಸಾನೋ, ವಾಮನ, ವಾಮನ, ವಂದೇ, ಶಂಧರ, ಭೂಧರ, ವಾರ್ಧರ, ಕಂಧರಧಾರಿನ್, ಶ್ರೀಧರ, ಶ್ರೀಧರ, ವಂದೇ।

**ಪ್ರ.ಪ. : ಭಾಮನ** – ಭಕ್ತರಿಗೆ ಜ್ಞಾನಪ್ರಕಾಶ ನೀಡುವವನೇ!; **ಸಾಮನ** – ಎಲ್ಲರಲ್ಲೂ ಸಮನಾಗಿ ವರ್ತಿಸುವವನೇ!; **ಸೀಮನ** – ಧರ್ಮದ ಮರ್ಯಾದೆಯನ್ನು ಪಾಲಿಸುವವನೇ!; **ಶಾಮನ** – ಶಾಂತಿ ನೀಡುವವನೇ!; **ಸಾನೋ** – ಶಿಖರಪ್ರಾಯನೇ!; **ವಾಮನ** – ಒಳಿತು ಕೆಡುಕುಗಳನ್ನು ಶಿಷ್ಟರಿಗೂ, ದುಷ್ಟರಿಗೂ ಯಥಾಯೋಗ್ಯವಾಗಿ ನೀಡುವವನೇ!; **ವಾಮನ** – ವಾಮನನೇ!; **ವಂದೇ** – ವಂದಿಸುವೆನು; **ಶಂಧರ** – ಅಲೌಕಿಕ ಆನಂದಪೂರ್ಣನೇ!; **ಭೂಧರ** – ಭೂಮಿಯನ್ನು ಧರಿಸಿದವನೇ!; **ವಾರ್ಧರ** – ಪರ್ವತಗಳನ್ನು ಧರಿಸಿದವನೇ!; **ಕಂಧರಧಾರಿನ್** – ಪ್ರಳಯಜಲವನ್ನು ಧರಿಸಿದವನೇ!; **ಶ್ರೀಧರ** – ಶ್ರೀದೇವಿ, ಭೂದೇವಿಯರ ಪತಿಯೇ!; **ಶ್ರೀಧರ** – ಶ್ರೀಧರನೇ!; **ವಂದೇ** – ವಂದಿಸುವೆನು.

**ಸರ್ವಸುಂದರ ಸ್ವಾಮಿವಾಮನ ಜ್ಞಾನದಾಯಕ ವಂದಿಪೆ**
**ಸಾಮಗೀತನೆ ಧರ್ಮರಕ್ಷಕ ಶಾಂತಿದಾಯಕ ಧಾರಕ।**
**ನಿತ್ಯಸುಖನೆ ಲಕುಮಿಪತಿಯೆ ದೇವಶ್ರೀಧರ ವಂದಿಪೆ**
**ಭೂಮಿಧಾರಕ ವಾರಿಧಾರಕ ಮುಕ್ತವೃಂದಸುಧಾರಕ** ॥ ೬ ॥

**ಅನು : ಭಕ್ತರಿಗೆ ಜ್ಞಾನಪ್ರಕಾಶ ನೀಡುವವನೇ! ಎಲ್ಲರಲ್ಲೂ ಸಮನಾಗಿ ವರ್ತಿಸುವವನೇ! ಧರ್ಮದ ಕಟ್ಟಳೆಯನ್ನು ಪಾಲಿಸುವವನೇ! ಶಾಂತಿ ನೀಡುವವನೇ! ಶಿಖರಪ್ರಾಯನೇ! ಒಳಿತು ಕೆಡುಕುಗಳನ್ನು ಶಿಷ್ಟರಿಗೂ, ದುಷ್ಟರಿಗೂ ಯಥಾಯೋಗ್ಯವಾಗಿ ನೀಡುವವನೇ! ವಾಮನನೇ! ವಂದಿಸುವೆನು, ಅಲೌಕಿಕವಾದ ಆನಂದದಿಂದ ತುಂಬಿದವನೆ! ಭೂಮಿಯನ್ನು ಧರಿಸಿದವನೇ! ಪರ್ವತಗಳನ್ನು ಧರಿಸಿದವನೇ! ಪ್ರಳಯಜಲವನ್ನು ಧರಿಸಿದವನೇ! ಶ್ರೀದೇವಿ ಭೂದೇವಿಯರ ಪತಿಯೇ! ಶ್ರೀಧರನೇ! ವಂದಿಸುವೆನು.**

ವಿ : ೧. ಬ್ರಹ್ಮಸೂತ್ರಗಳಲ್ಲಿ ವಿವರಿಸಲ್ಪಟ್ಟಿರುವ **ವಾಮನ**, **ಭಾಮನ** ಎಂಬ ನಾಮಸಹಿತವಾಗಿ ಶ್ರೀವಾಮನರೂಪಿ ಹರಿಯನ್ನು ಇಲ್ಲಿ ಸ್ತುತಿಸಲಾಗಿದೆ. ಇದು ಆಷಾಢ ಮಾಸದ ನಿಯಾಮಕ.

೨. **ಶ್ರೀಧರ** ಎಂಬುದು ಶ್ರಾವಣ ಮಾಸದ ನಿಯಾಮಕ ರೂಪ. **ಶ್ರೀ** ಹಾಗೂ **ಧರ** ಎಂಬ ಮಹಾಲಕ್ಷ್ಮಿಯ ರೂಪಗಳನ್ನು ಧರಿಸಿದವನೂ ಎಂದರ್ಥ; ಭೂಮಿಯನ್ನು ಧರಿಸಿ **ಭೂಧರ** ಎನ್ನಿಸಿರುವನು; ನೆಲದೊಂದಿಗೆ ಜಲವನ್ನು ಧರಿಸಿದವನು.

### ಹೃಷೀಕೇಶ-ಪದ್ಮನಾಭ-ದಾಮೋದರ

**ಹೃಷೀಕೇಶ ಸುಕೇಶ ಪರೇಶ ವಿವಂದೇ**
**ಶರಣೇಶ ಕಲೇಶ ಬಲೇಶ ಸುಖೇಶ ।**
**ಪದ್ಮನಾಭ ಶುಭೋದ್ಭವ ವಂದೇ**
**ಸಂಭೃತಲೋಕಭರಾಭರ ಭೂರೇ ।**
**ದಾಮೋದರ ದೂರತರಾಂತರ ವಂದೇ**
**ದಾರಿತಪಾರಗಪಾರ ಪರಸ್ಮಾತ್ ॥ ೭ ॥**

**ಪ :** ಹೃಷೀಕೇಶ, ಸುಕೇಶ, ಪರೇಶ, ವಿವಂದೇ, ಶರಣೇಶ, ಕಲೇಶ, ಬಲೇಶ, ಸುಖೇಶ, ಪದ್ಮನಾಭ, ಶುಭೋದ್ಭವ, ವಂದೇ, ಸಂಭೃತಲೋಕಭರಾಭರ, ಭೂರೇ, ದಾಮೋದರ, ದೂರತರಾಂತರ, ವಂದೇ, ದಾರಿತಪಾರಗಪಾರ, ಪರಸ್ಮಾತ್ ।

**ಅ :** ಶರಣೇಶ, ಕಲೇಶ, ಬಲೇಶ, ಸುಖೇಶ, ಸುಕೇಶ, ಪರೇಶ, ಹೃಷೀಕೇಶ, ವಿವಂದೇ, ಶುಭೋದ್ಭವ, ಸಂಭೃತಲೋಕಭರಾಭರ, ಭೂರೇ, ಪದ್ಮನಾಭ, ವಂದೇ, ದೂರತರಾಂತರ, ದಾರಿತಪಾರಗಪಾರ, ಪರಸ್ಮಾತ್, ದಾಮೋದರ, ವಂದೇ ।

**ಪ್ರ.ಪ. : ಶರಣೇಶ** – ಶರಣು ಬಂದವರಿಗೆ ಸ್ವಾಮಿಯೇ!; **ಕಲೇಶ** – ಮತ್ಸ್ಯಕೂರ್ಮಾದಿ ರೂಪಗಳನ್ನು ಧರಿಸಿದ ಸ್ವಾಮಿಯೇ !; **ಬಲೇಶ** – ಬಲಕ್ಕೆ ಒಡೆಯನೇ!; **ಸುಖೇಶ** – ಸುಖದ ಸ್ವಾಮಿಯೇ!; **ಸುಕೇಶ** – ಉತ್ತಮವಾದ ಕೇಶಾದಿ ಅವಯವಗಳುಳ್ಳವನೇ!; **ಪರೇಶ** – ಶ್ರೇಷ್ಠನಾದ ಸ್ವಾಮಿಯೇ; **ಹೃಷೀಕೇಶ** – ಹೃಷೀಕೇಶನೇ; **ವಿವಂದೇ** – ವಿಶೇಷವಾಗಿ ವಂದಿಸುವೆನು; **ಶುಭೋದ್ಭವ** –ಮಂಗಳಕರನೇ! ; **ಸಂಭೃತಲೋಕಭರ** - ಲೋಕಗಳ ಭಾರವನ್ನು ಹೊತ್ತವನೆ; **ಆಭರ** – ನನ್ನನ್ನು ಧರಿಸು; **ಭೂರೇ** – ಪೂರ್ಣನಾದವನೇ; **ಪದ್ಮನಾಭ** – ಪದ್ಮನಾಭನೇ!; **ವಂದೇ** – ವಂದಿಸುವೆ; **ದೂರತರ** – ಅತ್ಯಂತ ದೂರವಿರುವವನೇ!; **ಅಂತರ** – ಒಳಗೂ ಇರುವವನೇ!; **ದಾರಿತಪಾರಗಪಾರ** – ಬ್ರಹ್ಮಾದಿಗಳಿಂದ ಹತರಾಗದವರನ್ನು ಸಂಹರಿಸಿದವನೇ!; **ಪರಸ್ಮಾತ್** – ಶ್ರೇಷ್ಠವಾದ ಜ್ಞಾನ ನೀಡುವವನೇ!; **ದಾಮೋದರ** – ದಾಮೋದರನೇ!; **ವಂದೇ** – ವಂದಿಸುವೆನು.

**ರಮ್ಯಕೇಶನೆ ದಿವಿಜರೊಡೆಯನೆ ಇಂದ್ರಿಯೇಶನೆ ವಂದನೆ**
**ರಕ್ಷಕೇಶನೆ ಕಲೆಗಳೀಶನೆ ಸುಬಲನೆ ಸುಖರೂಪನೆ ।**
**ಸರ್ವಮಂಗಲಮೂಲಕಾರಣ ಪದ್ಮನಾಭನೆ ವಂದನೆ**
**ಸರ್ವಲೋಕದ ಭಾರ ಪೊತ್ತಿಹ ದಿವ್ಯ ಅದ್ಭುತರೂಪನೆ ।**
**ಕುಜನದೂರನೆ ಸರ್ವವ್ಯಾಪ್ತನೆ ವಂದಿಪೆನು ದಾಮೋದರ**
**ಭವವ ದಾಟದ ಮುಕ್ತರಾಶ್ರಯ ದುಷ್ಟಪಕ್ಷವಿನಾಶನ । ॥ ೭ ॥**

**ಅನು : ಶರಣು ಬಂದವರಿಗೆ ಸ್ವಾಮಿಯೇ! ಮತ್ಸ್ಯಕೂರ್ಮಾದಿಗಳನ್ನು ಧರಿಸಿದ ಸ್ವಾಮಿಯೇ! ಬಲಕ್ಕೆ ಒಡೆಯನೇ! ಸುಖದ ಸ್ವಾಮಿಯೇ! ಉತ್ತಮವಾದ ಕೇಶಾದಿ ಅವಯವಗಳುಳ್ಳವನೇ! ಶ್ರೇಷ್ಠನಾದ ಸ್ವಾಮಿಯೇ! ಹೃಷೀಕೇಶನೇ! ವಿಶೇಷವಾಗಿ ವಂದಿಸುವೆನು, ಮಂಗಳಕರನೇ! ಲೋಕಗಳ ಭಾರವನ್ನು ಹೊತ್ತವನೆ, ನನಗೆ ಆಧಾರವಾಗು, ಪೂರ್ಣನಾದವನೇ! ಪದ್ಮನಾಭನೇ! ವಂದಿಸುವೆ, ಅತ್ಯಂತ ದೂರವಿರುವವನೇ! ಒಳಗೂ ಇರುವವನೇ! ಬ್ರಹ್ಮಾದಿಗಳಿಂದ ಹತರಾಗದವರನ್ನು ಸಂಹರಿಸಿದವನೇ! ಶ್ರೇಷ್ಠವಾದ ಜ್ಞಾನ ನೀಡುವವನೇ! ದಾಮೋದರನೇ! ವಂದಿಸುವೆನು.**

ವಿ : ೧. ಶ್ರೀಹರಿಯು ಸಕಲ ಜೀವಿಗಳ ಸಕಲ ಇಂದ್ರಿಯಗಳಿಗೂ ಒಡೆಯ; ಅದಕ್ಕೆ ಆವನಿಗೆ ಹೃಷೀಕೇಶ ಎಂದು ಹೆಸರು; ಕೇಶಾದಿಗಳನ್ನು ಹೊಂದಿರುವ ಸುಂದರ, ಪರಿಪೂರ್ಣನಾದವನು; ಶ್ರೇಷ್ಠ ದೇವತೆಗಳಿಗೂ ಆಶ್ರಯ ನೀಡುವವನು.

೨. **ಹೃಷೀಕೇಶ** ಎಂಬುದು ಭಾದ್ರಪದಮಾಸದ ನಿಯಾಮಕ ರೂಪ.

೩. **ಶುಭೋದ್ಭವ** – ಶ್ರೀಹರಿಯ ಪ್ರಾದುರ್ಭಾವವು ಅತ್ಯಂತ ಮಂಗಳಕರವಾದುದು. ಎಂದರೆ ಪ್ರಾಕೃತಗುಣಗಳ ಸಂಬಂಧ ಹೊಂದದ, ಮಂಗಳಕರವಾದ ಹಿರಿಮೆಯನ್ನು ಹೊಂದಿರುವಂತಹುದು. ಶ್ರೀಹರಿಯ ಯಾವ ರೂಪಕ್ಕೂ ಹುಟ್ಟು ಸಾವುಗಳಿಲ್ಲ, ಆಧಿ ವ್ಯಾಧಿಗಳಾಗಲಿ, ಲಾಭನಷ್ಟ ಮೊದಲಾದವುಗಳಾಗಲೀ ಸರ್ವಥಾ ಇಲ್ಲ ಎಂದು ಭಾವ.

೪. **ಲೋಕಭರಾಭರ** – ಲೋಕಭರ ಹಾಗೂ ಅಭರ ಎಂದರೆ ಸಕಲಲೋಕಗಳ ಸಕಲಭಾರವನ್ನೂ ಸಹ ಅನಾಯಾಸವಾಗಿ ಧರಿಸಿದವನು ಎಂದು ಭಾವ.

೫. **ಪದ್ಮನಾಭ** – ಕೇವಲ ತನ್ನ ನಾಭಿಯಿಂದಲೇ ಕಮಲವನ್ನು ಹುಟ್ಟಿಸಿ, ಆ ಕಮಲದ ಮೂಲಕವೇ [೧]ಸಕಲಲೋಕಗಳ ಸೃಷ್ಟಿ ಮಾಡಿದವನು.

**ಆನಂದತೀರ್ಥಮುನೀಂದ್ರಕೃತಾ**
**ಹರಿಗೀತಿರಿಯಂ ಪರಮಾದರತಃ ।**
**ಪರಲೋಕವಿಲೋಕನಸೂರ್ಯನಿಭಾ**
**ಹರಿಭಕ್ತಿವಿವರ್ಧನಶೌಂಡತಮಾ ॥ ೮ ॥**

**॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ದ್ವಾದಶಸ್ತೋತ್ರೇ ಪಂಚಮೋऽಧ್ಯಾಯಃ ॥**

---

೧. 'ಅಜಸ್ಯ ನಾಭಾವಿತಿ ಯಸ್ಯ ನಾಭೇರಭೂಚ್ಚುತೇಃ ಪುಷ್ಕರಂ ಲೋಕಸಾರಮ್ ।
ತಸ್ಮೈ ನಮೋ ವ್ಯಸ್ತಸಮಸ್ತವಿಶ್ವವಿಭೂತಯೇ ವಿಷ್ಣವೇ ಲೋಕಕರ್ತ್ರೇ' ಇತಿ ಸ್ಕಾಂದೇ ॥
– ಬ್ರ.ಸೂ.ಭಾ.(೧/೧/೧)

**ಪ** : ಆನಂದತೀರ್ಥಮುನೀಂದ್ರಕೃತಾ, ಹರಿಗೀತಿಃ, ಇಯಮ್, ಪರಮಾದರತಃ, ಪರಲೋಕವಿಲೋಕನಸೂರ್ಯನಿಭಾ, ಹರಿಭಕ್ತಿವಿವರ್ಧನಶೌಂಡತಮಾ ।

**ಅ** : ಪರಮಾದರತಃ, ಆನಂದತೀರ್ಥಮುನೀಂದ್ರಕೃತಾ, ಇಯಮ್, ಹರಿಗೀತಿಃ, ಪರಲೋಕವಿಲೋಕನಸೂರ್ಯನಿಭಾ, ಹರಿಭಕ್ತಿವಿವರ್ಧನಶೌಂಡತಮಾ ।

**ಪ್ರ.ಪ.** : **ಪರಮಾದರತಃ** – ಪರಮಭಕ್ತಿಯಿಂದ; **ಆನಂದತೀರ್ಥಮುನೀಂದ್ರಕೃತಾ** – ಆನಂದತೀರ್ಥ ಎಂಬ ಮುನಿಶ್ರೇಷ್ಠರಿಂದ ರಚಿತವಾದ; **ಇಯಮ್** – ಈ; **ಹರಿಗೀತಿಃ** – ಹರಿಸ್ತೋತ್ರವು; **ಪರಲೋಕವಿಲೋಕನಸೂರ್ಯನಿಭಾ** – ಪರಲೋಕವನ್ನು ಕಾಣಿಸಿ-ಕೊಡುವಲ್ಲಿ ಸೂರ್ಯನಂತಹುದು; **ಹರಿಭಕ್ತಿವಿವರ್ಧನಶೌಂಡತಮಾ** – ಹರಿಭಕ್ತಿಯನ್ನು ಬಹಳವಾಗಿ ಹೆಚ್ಚಿಸುವಲ್ಲಿ ಅತ್ಯಂತ ಸಮರ್ಥವಾದುದು.

**ನಂದಿತೀರ್ಥರು ಎಂಬ ಮುನಿವರ ಬರೆದ ಶ್ರೀಹರಿಗೀತೆಯು ।**
**ಹರಿಯ ತತ್ತ್ವವ ತೋರ್ವ ಭಾಸ್ಕರ ಭಕ್ತಿ ಬೆಳೆಸುವ ಸಾಧನ ॥ ೮ ॥**

**॥ ದ್ವಾದಶಸ್ತೋತ್ರದ ಕನ್ನಡಪದ್ಯಾನುವಾದದಲ್ಲಿ ಐದನೆಯ ಅಧ್ಯಾಯ ಮುಕ್ತಾಯವಾಯಿತು ॥**

**ಅನು : ಆನಂದತೀರ್ಥ ಎಂಬ ಮುನಿಶ್ರೇಷ್ಠರಿಂದ ಪರಮಭಕ್ತಿಯಿಂದ ರಚಿತವಾದ ಈ ಹರಿಸ್ತೋತ್ರವು ಪರಲೋಕವನ್ನು ಕಾಣಿಸಿಕೊಡುವಲ್ಲಿ ಸೂರ್ಯನಂತಹುದು; ಹರಿಭಕ್ತಿಯನ್ನು ಬಹಳವಾಗಿ ಹೆಚ್ಚಿಸುವಲ್ಲಿ ಅತ್ಯಂತ ಸಮರ್ಥವಾದುದು.**

ವಿ : ೧. ಇದನ್ನು ಬರೆದವರು **ಆನಂದತೀರ್ಥರು** ಎಂಬ ಶ್ರೇಷ್ಠಮುನಿಗಳು. ಶ್ರೀಹರಿಯ ಮೇಲಿನ ಶ್ರೇಷ್ಠಭಕ್ತಿಯಿಂದ ಅದನ್ನು ಇವರು ರಚಿಸಿರುವರು; ಇದು ಶ್ರೀಹರಿಯನ್ನು ಕೊಂಡಾಡುವ ಒಂದು ಹಾಡು. ಭಕ್ತಿಯಿಂದ ಇದನ್ನು ಪಠಿಸಿದಾಗ ಪರಮಶ್ರೇಷ್ಠವಾದ ವೈಕುಂಠ ಲೋಕವು ಕಣ್ಣ ಮುಂದೆ ನಿಲ್ಲುವುದು. ಇದನ್ನು ಭಕ್ತಿಯಿಂದ ಪಠಿಸಿದರೆ ಶ್ರೀಹರಿಯಲ್ಲಿ ಭಕ್ತಿಯು ಬಹಳವಾಗಿ ಹೆಚ್ಚುವುದು. ಹಾಗೆ ಮಾಡುವ ಸಾಮರ್ಥ್ಯ ಇದಕ್ಕಿದೆ ಎಂದರ್ಥ.

೨. **ಮುನಿ** ಎಂದರೆ ಹಿಂದೆ ತಿಳಿಸಿದಂತೆ ಓಂಕಾರವನ್ನು ಸರಿಯಾಗಿ ಅರ್ಥಮಾಡಿಕೊಂಡು ಭಗವಂತನನ್ನು ಪರಿಪೂರ್ಣವಾಗಿ ಆರಾಧಿಸಿರುವವರು ಎಂದರ್ಥ. ಪ್ರಸ್ತುತ ಶ್ರೀಮದಾನಂದತೀರ್ಥರು ಇಂತಹ ಸಕಲಮುನಿಗಳಲ್ಲೂ ಶ್ರೇಷ್ಠರೆನಿಸಿದವರು; ಎಂದರೆ ಪರಮಭಾಗವತಶಿರೋಮಣಿಗಳು ಎಂದರ್ಥ.

೩. ಇದನ್ನು ಭಕ್ತಿಯಿಂದ ಪಠಿಸಿದವರಿಗೆ ವೈಕುಂಠ ಪ್ರಾಪ್ತಿಯಾಗುವುದು ನಿಶ್ಚಿತ. ಶ್ರೀಹರಿಯಲ್ಲಿ ಭಕ್ತಿಯು ಬಹಳವಾಗಿ ಹೆಚ್ಚುವುದು ಎಂದೂ ಭಾವ.

೪. **ಲೋಕ** ಎಂದರೆ ಶಾಸ್ತ್ರ; ಪರಲೋಕ ಎಂದರೆ ಪರವಿದ್ಯೆ ಎನ್ನಿಸಿದ ಬ್ರಹ್ಮಸೂತ್ರ ಎಂದರ್ಥ. ಆದರ '**ವಿಲೋಕನ**' ಎಂದರೆ ಆದರ ಅವಲೋಕನಕ್ಕೆ ಸೂರ್ಯನಂತೆ ಉಪಕಾರಕವಾದ ಕೃತಿ ಎಂದು ಭಾವ. ಈ ಸ್ತೋತ್ರದ ಪಠನೆಯಿಂದ ಮುಂದೆ, ಸೂತ್ರಪ್ರಸ್ಥಾನ ಹಾಗೂ ಆದರ ಮೇಲೆ ರಚಿತವಾದ ಭಾಷ್ಯಾದಿಕೃತಿಗಳನ್ನುಸರಿಯಾಗಿ ಅರ್ಥಮಾಡಿಕೊಳ್ಳುವ ಅರ್ಹತೆ ಲಭಿಸುವುದು ಎಂದರ್ಥ.

*****

## ೬. ಷಷ್ಠಾಧ್ಯಾಯ (ದಶಾವತಾರಹರಿಗಾಥಾ)

**ದೇವಕಿನಂದನ ನಂದಕುಮಾರ**
**ವೃಂದಾವನಾಂಚನ ಗೋಕುಲಚಂದ್ರ ।**
**ಕಂದಫಲಾಶನ ಸುಂದರರೂಪ**
**ನಂದಿತಗೋಕುಲವಂದಿತಪಾದ ॥ ೧ ॥**

**ಪ :** ದೇವಕಿನಂದನ, ನಂದಕುಮಾರ, ವೃಂದಾವನಾಂಚನ, ಗೋಕುಲಚಂದ್ರ, ಕಂದಫಲಾಶನ, ಸುಂದರರೂಪ, ನಂದಿತಗೋಕುಲವಂದಿತಪಾದ ।

**ಅ :** ದೇವಕಿನಂದನ, ನಂದಕುಮಾರ, ವೃಂದಾವನಾಂಚನ, ಗೋಕುಲಚಂದ್ರ, ಕಂದಫಲಾಶನ, ಸುಂದರರೂಪ, ನಂದಿತಗೋಕುಲವಂದಿತಪಾದ ।

**ಪ್ರ.ಪ. : ದೇವಕಿನಂದನ** – ದೇವಕೀನಂದನನೇ!; **ನಂದಕುಮಾರ** – ನಂದನಿಗೆ ಕುಮಾರನೇ!; **ವೃಂದಾವನಾಂಚನ** – ವೃಂದಾವನದಲ್ಲಿ ಸಂಚರಿಸಿದವನೇ!; **ಗೋಕುಲಚಂದ್ರ** – ಗೋಕುಲಕ್ಕೆ ಚಂದ್ರಪ್ರಾಯನೇ!; **ಕಂದಫಲಾಶನ** – ಕಂದಫಲಗಳನ್ನು ಸ್ವೀಕರಿಸಿದವನೇ!; **ಸುಂದರರೂಪ** – ಸುಂದರರೂಪನೇ!; [೧]**ನಂದಿತಗೋಕುಲವಂದಿತಪಾದ**– ಆನಂದ ಹೊಂದಿದ ಗೋಕುಲದಿಂದ ವಂದಿತವಾದ ಪಾದನೇ!

**ದೇವಕಿಗೆ ಆನಂದ ನೀಡಿದ ನಂದಗೋಪಕುಮಾರನೆ**
**ವೃಂದವನದೊಳು ಚರಿಸಿದವನೆ ಗೋಸಮೂಹಕೆ ಚಂದ್ರನೆ ।**
**ಕಂದಫಲವನು ಮೆದ್ದ ದೇವನೆ ಲೋಕಸುಂದರವಿಗ್ರಹ**
**ಗೋಪವೃಂದಕೆ ಹರುಷ ಸುರಿಸಿದ ಸಕಲದೈವತವಂದಿತ ॥ ೧ ॥**

**ಅನು : ದೇವಕೀನಂದನನೇ! ನಂದನಿಗೆ ಕುಮಾರನೇ! ವೃಂದಾವನದಲ್ಲಿ ಸಂಚರಿಸಿದವನೇ! ಗೋಕುಲಕ್ಕೆ ಚಂದ್ರಪ್ರಾಯನೇ! ಕಂದಫಲಗಳನ್ನು ಸ್ವೀಕರಿಸಿದವನೇ! ಸುಂದರರೂಪನೇ! ಆನಂದ ಹೊಂದಿದ ಗೋಕುಲದಿಂದ ವಂದಿತವಾದ ಪಾದಗಳುಳ್ಳವನೇ!**

ವಿ : ೧. ದ್ವಾದಶಸ್ತೋತ್ರದ ಮೊದಲ ಐದು ಅಧ್ಯಾಯಗಳು ಮುಗಿಯುವ ವೇಳೆಗೆ ಅಲ್ಲಿಯ ಸಮುದ್ರದಲ್ಲಿ ಮುಳುಗುತ್ತಿದ್ದ ಹಡಗನ್ನು ಶ್ರೀಮಧ್ವಾಚಾರ್ಯರು ಸಂರಕ್ಷಿಸಿದ

---

೧. ಕೃಷ್ಣೋಽಪಿ ಲೀಲಾ ಲಲಿತಾಃ ಪ್ರದರ್ಶಯನ್ ಬಲದ್ವಿತೀಯೋ **ರಮಯಾಮಾಸ ಗೋಷ್ಠಮ್** ।
– ಮ.ಭಾ.ತಾನಿ. (೧೨/೧೧೩)

ಪ್ರಸಂಗ ನಡೆಯಿತು. ಆಗ ಆ ಹಡಗಿನ ಒಡೆಯನು ಅವರಿಗೆ ಸಮರ್ಪಿಸಿದ ಗೋಪೀಚಂದನ ಗಡ್ಡೆಯಿಂದ ಶ್ರೀಕೃಷ್ಣ ಕಾಣಿಸಿಕೊಂಡ; ಆಗ ಅವನನ್ನು ಭಕ್ತಿಭಾವದಿಂದ ಕೊಂಡಾಡಿದ ಸ್ತುತಿ ಇದಾಗಿದೆ.

೨. ಅದರ ರಚನೆ ಅರ್ಧ ಪೂರೈಸುವ ಮುನ್ನವೇ ಶ್ರೀಕೃಷ್ಣ ದರ್ಶನವಿತ್ತು ಅನುಗ್ರಹಿಸಿದ ಅಪೂರ್ವ ಸಿದ್ಧಿ ಈ ದ್ವಾದಶಸ್ತೋತ್ರದ್ದು; ಎಂದರೆ ಇದನ್ನು ಪಠಿಸತೊಡಗಿದಾಗಲೆ, ಶ್ರೀಕೃಷ್ಣ ಅಲ್ಲಿಗೆ ಕೂಡಲೇ ಧಾವಿಸಿ ಬರುವನು ಎಂದರ್ಥ; **ಪ್ರಾರಂಭಮಾತ್ರಮಿಚ್ಛಾ ವಾ ವಿಷ್ಣುಧರ್ಮೇಣ ನಿಷ್ಫಲಾ** ಎಂಬುದಕ್ಕೆ ಇದು ಅತ್ಯುತ್ತಮ ನಿದರ್ಶನವೆನ್ನಿಸುವ ಸಂಗತಿ.

೩. ಇದು ದಶಾವತಾರ ಸ್ತೋತ್ರ ರೂಪವಾದ ಸ್ತುತಿ. ಆ ವೇಳೆಗೆ ಅಲ್ಲಿಗೆ ಸಾಕ್ಷಾತ್ ಶ್ರೀಕೃಷ್ಣನೇ ಆಗಮಿಸಿದ್ದರಿಂದ ಅವನನ್ನು ಈ ಅಧ್ಯಾಯದ ಮೊದಲ ಎರಡೂವರೆ ಸ್ತೋತ್ರದಲ್ಲಿ ಹೀಗೆ ಸ್ತುತಿಸಿ ಮುಂದೆ ದಶಾವತಾರ ಸ್ತುತಿಯನ್ನು ಪ್ರಾರಂಭಿಸಿದರು ಎಂಬ ವಿಶೇಷಾಂಶ ಶ್ರೀವಿಶ್ವಪತಿತೀರ್ಥರ ವ್ಯಾಖ್ಯಾನದಲ್ಲಿದೆ[1].

೪. ಇದರ ಪ್ರಾರಂಭದ ಶ್ಲೋಕದಲ್ಲಿ ಶ್ರೀಕೃಷ್ಣನು ದೇವಕಿಗೆ ನಲಿವಿತ್ತವನು ನಂದನಪುತ್ರ ಮುಂತಾದ ಅನೇಕ ಬಗೆಯ ವರ್ಣನೆ ಬಂದಿದೆ.

೫. **ದೇವಕಿನಂದನ** ಎಂಬುದಕ್ಕೆ ದೇವಕಿಯ ಪುತ್ರ ಎಂಬುದು ಸಾಮಾನ್ಯವಾದ ಅರ್ಥ. ಆದರೆ, ಮೂಲತಃ ಅದಿತಿಯಾದ ಅವಳು ಪೃಶ್ನಿ ಎಂಬ ರೂಪದಿಂದ ಮಾಡಿದ ಅಗಾಧವಾದ ತಪಸ್ಸಿಗೆ ಮೆಚ್ಚಿ, ಅವಳ ಪುತ್ರತ್ವೇನ ಅವತರಿಸಿ, ಆನಂದ ನೀಡಿದವನು ಎಂಬುದು ಅದರ ಹಿನ್ನೆಲೆ.

---

೧. 'ಏನಾಂ ಕಾರ್ಷ್ಣೀಂ ಕಥಾಂ ಪಠತ್ಯೆವಾಚಾರ್ಯೇಣ ರೂಪ್ಯಪೀಠಾಧಿವಾಸಃ ಶ್ರೀಕೃಷ್ಣಃ ಸಮುದ್ರಜಠರಾದಾನೀತಃ' ಇತಿ ಆಭಾಣಕಮಾಭಣಂತಿ ಸಂಪ್ರದಾಯವಿದಃ । ಅತ ಏವ ಅಸ್ಮಿನ್ ಸ್ತೋತ್ರೇ 'ದೇವಕಿನಂದನ ನಂದಕುಮಾರ' ಇತ್ಯಾರಭ್ಯ 'ಆನಂದಸುಪೂರ್ಣ' ಇತ್ಯಂತಂ ಪ್ರಥಮತ ಏವ ಮೂಲಕೋಶೇಷು ಪಠ್ಯತೇ । ತತ್ರ ಚೇತ್ಥಮಾಭಾಣಕಂ ವರ್ಣಯಂತಿ । ರೂಪ್ಯಪೀಠಪುರಾತ್ ಶ್ರೀಕೃಷ್ಣಾನಯನಾರ್ಥಂ ಪಶ್ಚಿಮಸಮುದ್ರಂ ಪ್ರತಿ ಗಮನಸಮಯೇ 'ವಂದೇ ವಂದ್ಯಮ್' ಇತ್ಯಾದಿನಾ ಭಗವಂತಂ ಸ್ತುವನ್ನೇವ ಗತಃ ಶ್ರೀಮದಾನಂದತೀರ್ಥಮುನಿಃ ಸಮುದ್ರತೀರಂ ಗತಃ ಸನ್ ದ್ವಾರಕಾತಃ ಸಮಾಗತಂ ಶ್ರೀಕೃಷ್ಣಂ ದೃಷ್ಟ್ವಾ ಸಮನಂತರಮೇವ 'ದೇವಕಿನಂದನ' ಇತ್ಯಾದಿನಾ 'ಆನಂದಸುಪೂರ್ಣ' ಇತ್ಯಂತೇನ ಶ್ರೀಕೃಷ್ಣಂ ಸ್ತುತ್ವಾ ಅನಂತರಂ ಚ 'ಮತ್ಸ್ಯಕರೂಪ' ಇತ್ಯಾದಿನಾ ದಶಾವತಾರಾತ್ಮಕತಯಾ ಚ ತಮೇವ ಸ್ತುತವಾನಿತಿ । ಅತ ಏವ 'ರಾಘವ ರಾಘವ' 'ಪಾಂಡವಬಂಧೋ' 'ದೈತ್ಯವಿಮೋಹಕ' ಇತ್ಯಾದಿರೂಪೇಣ ದಶಾವತಾರಕ್ರಮೇಣ ಕೃಷ್ಣಸ್ತುತಿಃ ಪೃಥಕ್ ಚ ಮೂಲಗ್ರಂಥೇಷು ಪಠ್ಯತೇ ॥

- ಶ್ರೀವಿಶ್ವಪತಿತೀರ್ಥಕೃತ ದ್ವಾದಶಸ್ತೋತ್ರವ್ಯಾಖ್ಯಾನ (೬/೮)

೬. **ನಂದಕುಮಾರ** – ನಂದನು ಶೂರರಾಜನಿಗೆ ವೈಶ್ಯಪತ್ನಿಯಲ್ಲಿ ಜನಿಸಿದ ಪುತ್ರ. ಅವನು ದ್ರೋಣ ಎಂಬ ವಸುವಿನ ಅವತಾರ. ಅವನೂ ಸಹ ತನ್ನ ಪತ್ನಿ ಧರೆ ಎಂಬವಳೊಂದಿಗೆ ಶ್ರೀಕೃಷ್ಣನನ್ನು ಪುತ್ರನನ್ನಾಗಿ ಪಡೆಯುವ ವಿಶೇಷ ತಪಸ್ಸನ್ನಾಚರಿಸಿದ್ದ. ಅದಕ್ಕಾಗಿ ಶ್ರೀಹರಿ ಅವನಿಗೆ ಪುತ್ರತ್ವೇನ ಲಭಿಸಿ, ಆನಂದ ನೀಡಿದ ಎಂದರ್ಥ. ಇದನ್ನು ನಂದ, ಕುಮಾರ ಎಂಬುದಾಗಿ ವಿಭಾಗ ಮಾಡಿಯೂ ಓದಿಕೊಳ್ಳಬಹುದು. ನಂದ ಎಂಬುದು ಹಿಂದೆ ತಿಳಿಸಿದಂತೆ ವಿಷ್ಣುಸಹಸ್ರನಾಮದ ಪದ. ಆಗ ಅದು ನೇರವಾಗಿ ಶ್ರೀಕೃಷ್ಣನಿಗೆ ಸಂಬೋಧನೆಯಾಗುವುದು. ಕುಮಾರ ಎಂಬುದಕ್ಕೆ ಕುತ್ಸಿತಮಾರಕ ಎಂಬುದು ಕರ್ಮನಿರ್ಣಯದಲ್ಲಿ ನಿರೂಪಿತವಾಗಿರುವ ಅರ್ಥ[೧]. **ದುಷ್ಟಸಂಹಾರಕ** ಎಂಬುದು ಅದರ ಒಟ್ಟು ಭಾವ.

೭. **ವೃಂದಾವನಾಂಚನ** – ವೃಂದಾವನದಲ್ಲಿ ಸಂಚರಿಸುವವನು ಎಂದರ್ಥ. ಇಲ್ಲಿ ವೃಂದ ಎಂಬುದಕ್ಕೆ ಸಜ್ಜನವೃಂದ, ಗೋಪವೃಂದ, ಗೋವೃಂದ ಮೊದಲಾಗಿ ಅನೇಕ ಅರ್ಥಗಳು. ಶ್ರೀಹರಿಯು ಸಜ್ಜನರು ಇರುವ ಸ್ಥಳದಲ್ಲಿ ವಿಶೇಷ ಸನ್ನಿಧಿಯನ್ನು ವ್ಯಕ್ತಮಾಡುವವನು ಎಂಬುದು ಇದರ ಭಾವ: **ವಸಂತಿ ವೈಷ್ಣವಾ ಯತ್ರ ತತ್ರ ಸನ್ನಿಹಿತೋ ಹರಿಃ.**

೮. **ಗೋಕುಲಚಂದ್ರ** – ಗೋಕುಲಕ್ಕೆ ಚಂದ್ರ, ಗೋಸಮುದಾಯಕ್ಕೆ ಚಂದ್ರನಂತೆ ಆಹ್ಲಾದಕರ ಎಂದೂ ಅರ್ಥ. **ಗೋ** ಎಂಬುದಕ್ಕೆ ಶಾಸ್ತ್ರ ಎಂಬ ಅರ್ಥವೂ ಇದೆ. ಅದರಂತೆ ಸ್ವರ್ಗ ಇತ್ಯಾದಿ ಅನೇಕ ಅರ್ಥಗಳು ಸಹ: **ಅನಾಕುಲಂ ಗೋಕುಲಮುಲ್ಲಲಾಸ** (ಮಧ್ವವಿಜಯ. ೧/೨) ಎಂಬಲ್ಲಿ ಹೇಗೋ ಹಾಗೆ. ಗೋಸಮುದಾಯಕ್ಕೆ ಹಾಗೂ ಶಾಸ್ತ್ರಸಮುದಾಯಕ್ಕೆ ವಿಶೇಷವಾದ ರಕ್ಷಣೆ ಮೊದಲಾದವುಗಳನ್ನು ನೀಡುವ ಮೂಲಕ ಚಂದ್ರನಂತೆ ಆನಂದ ನೀಡಿದವನು ಎಂದು ಭಾವ. ಇದು ಕೃಷ್ಣರೂಪದೊಂದಿಗೆ ವ್ಯಾಸರೂಪಕ್ಕೂ ಅನ್ವಯಿಸುವ ವಿಶೇಷಣವಾಗಿದೆ.

೯. **ಕಂದಫಲಾಶನ** – ಗಡ್ಡೆ ಹಣ್ಣುಗಳನ್ನು ಆಹಾರವಾಗಿ ಸ್ವೀಕರಿಸಿದವನು ಎಂದರ್ಥ. ಮುಖ್ಯವಾಗಿ ಗೋಕುಲದಲ್ಲಿ ನೆಲೆಸಿ ಶ್ರೀಕೃಷ್ಣ, ಅಲ್ಲಿಯ ಜನರಿಗೆ ಪ್ರಿಯವಾದ ಆಹಾರವನ್ನೇ ತಾನೂ ಸ್ವೀಕರಿಸಿದ ಎಂದೂ ಭಾವ. ಇದರಿಂದ ಶ್ರೀಹರಿಯು ವಾಸ್ತವವಾಗಿ ಶುಭಭೋಕ್ತೃವೇ ಹೊರತು, ಅಶುಭಭೋಕ್ತೃವಲ್ಲ. ಯಾವುದೇ ವಸ್ತುವನ್ನು ಅವನಿಗೆ ಸಮರ್ಪಿಸಿದಾಗ, ಅದನ್ನು ಸ್ವೀಕರಿಸುವುದು, ಅದರ ಸಾರರೂಪವಾಗಿ ಅದರಲ್ಲಿ ನೆಲೆಸಿರುವ ತನ್ನ ರೂಪವನ್ನೇ ಎಂಬುದು ಇದರ ತಾತ್ಪರ್ಯ.

೧೦. **ಸುಂದರರೂಪ** – ಶ್ರೀಹರಿಯ ಸೌಂದರ್ಯ ಅನಂತಾನಂತಲಕ್ಷಣದಿಂದ ಕೂಡಿ ಅತ್ಯಂತ ಮನೋಹರವಾದುದು. ಶ್ರೀಮದ್ಭಾಗವತದಲ್ಲಿ ನಿರೂಪಿತವಾಗಿರುವಂತೆ ಅವನು

---

೧. 'ಕುಮಾರಃ ಕುತ್ಸಿತಮಾರಕಃ' – ಕರ್ಮನಿರ್ಣಯ (೯)

**ಸಾಕ್ಷಾನ್ ಮನ್ಮಥಮನ್ಮಥಃ** ಜ್ಞಾನಾನಂದಮಯದೇಹನಾದ ಅವನ ಸೊಬಗಿಗೆ ಸಾಟಿಯೇ ಇಲ್ಲ ಎಂಬುದು ಇದರ ಮುಖ್ಯಭಾವ.

೧೧. **ನಂದಿತಗೋಕುಲವಂದಿತಪಾದ** – ಶ್ರೀಕೃಷ್ಣನಿಂದ ಬಗೆಬಗೆಯ ರೀತಿಯಲ್ಲಿ ನಲಿವನ್ನು ಕಂಡ ಗೋಕುಲವು ಶ್ರೀಕೃಷ್ಣನನ್ನು ವಿಶೇಷರೀತಿಯಲ್ಲಿ ಕೊಂಡಾಡಿ ಸ್ತುತಿಸಿತು ಎಂದರ್ಥ. ಇಲ್ಲಿ ಪಾದ ಎಂಬುದಕ್ಕೆ ಪಾದ ಹಾಗೂ ಸ್ವರೂಪ ಎಂಬುದಾಗಿ ಎರಡೂ ವಿವಕ್ಷಿತ. ಶ್ರೀಕೃಷ್ಣ ಅನೇಕ ಬಗೆಯಲ್ಲಿ ಗೋಕುಲವನ್ನು ರಕ್ಷಿಸಿದ ವಿವರ ಗೋಪೀಗೀತೆಯಲ್ಲಿ ಬಂದಿದೆ:

**ವಿಷಜಲಾಶಯಾದ್ ವ್ಯಾಲರಾಕ್ಷಸಾದ್ ವರ್ಷಮಾರುತಾದ್ ವೈದ್ಯುತಾನಲಾತ್ ।**
**ವೃಷಮಯಾದ್ ಭಯಾದ್ ವಿಶ್ವತೋಮುಖಾದ್ ವೃಷಭ ತೇ ವಯಂ ರಕ್ಷಿತಾ ಮುಹುಃ ॥**
**– ಗೋಪೀಗೀತ**

೧೨. ಗೋಕುಲದಿಂದ ಎಂಬುದಕ್ಕೆ ಗೋವೃಂದದಿಂದ ಎಂದೂ, ಅಲ್ಲಿಯ ಪ್ರದೇಶದ ಅಭಿಮಾನಿದೇವತೆಗಳಿಂದ ಎಂದೂ, ವೇದಾದಿಶಾಸ್ತ್ರಗಳ ಅಭಿಮಾನಿದೇವತೆಗಳಿಂದ ಎಂದೂ, ಅನೇಕ ಬಗೆಯ ಅರ್ಥಗಳು ವಿವಕ್ಷಿತ. ಶ್ರೀಹರಿಯು ಸರ್ವವಂದ್ಯ ಎಂಬುದು ಒಟ್ಟು ಭಾವ.

**ಇಂದ್ರಸುತಾವಕ ನಂದಕಹಸ್ತ**
**ಚಂದನಚರ್ಚಿತ ಸುಂದರಿನಾಥ ।**
**ಇಂದಿವರೋದರದಲನಯನ**
**ಮಂದರಧಾರಿನ್ ಗೋವಿಂದ ವಂದೇ ॥ ೨ ॥**

**ಪ** : ಇಂದ್ರಸುತಾವಕ, ನಂದಕಹಸ್ತ, ಚಂದನಚರ್ಚಿತ, ಸುಂದರಿನಾಥ, ಇಂದೀವರೋ–ದರದಲನಯನ, ಮಂದರಧಾರಿನ್, ಗೋವಿಂದ, ವಂದೇ ।

**ಅ** : ಇಂದ್ರಸುತಾವಕ, ನಂದಕಹಸ್ತ, ಚಂದನಚರ್ಚಿತ, ಸುಂದರಿನಾಥ, ಇಂದೀವರೋದರದಲನಯನ, ಮಂದರಧಾರಿನ್, ಗೋವಿಂದ, ವಂದೇ ।

**ಪ್ರ.ಪ. : ಇಂದ್ರಸುತಾವಕ** – ಇಂದ್ರಸುತನಾದ ಅರ್ಜುನನನ್ನು ಪಾಲಿಸಿದವನೇ!; **ನಂದಕಹಸ್ತ** – ನಂದಕ ಎಂಬ ಖಡ್ಗವನ್ನು ಕೈಯಲ್ಲಿ ಹಿಡಿದವನೇ!; **ಚಂದನಚರ್ಚಿತ** – ಶ್ರೀಗಂಧದಿಂದ ಲೇಪಿತನಾದವನೇ!; **ಸುಂದರಿನಾಥ** – ಪರಮಸುಂದರಿಯಾದ ಲಕ್ಷ್ಮಿಗೆ ಪತಿಯೇ!; **ಇಂದೀವರೋದರದಲನಯನ** – ಕನ್ನೈದಿಲೆಯ ಒಡಲಿನಂತಹ ಕಣ್ಣುಗಳುಳ್ಳವನೇ!; **ಮಂದರಧಾರಿನ್** – ಮಂದರಪರ್ವತವನ್ನು ಧರಿಸಿದವನೇ!; **ಗೋವಿಂದ** – ಗೋವಿಂದನೇ!; **ವಂದೇ** – ನಿನಗೆ ವಂದಿಸುವೆನು.

**ಇಂದ್ರಸುತನನು ಪೊರೆದ ದೇವನೆ ನಂದಕಾಸಿಯ ಪಿಡಿದನೆ**
**ಗಂಧಪೂಸಿದ ದಿವ್ಯದೇಹನೆ ವಿಶ್ವಸುಂದರಿನಾಥನೆ।**
**ನೀಲಕಮಲದ ಸೊಬಗ ಪೋಲುವ ಹೊಳೆವ ಆಯತಲೋಚನ**
**ಮಂದರಾದ್ರಿಯ ಪೊತ್ತ ಬೆನ್ನಲಿ ವೇದರಾಶಿಯ ಹೃದಯನೆ ॥ ೨ ॥**

**ಅನು : ಇಂದ್ರಸುತನಾದ ಅರ್ಜುನನನ್ನು ಪಾಲಿಸಿದವನೇ! ನಂದಕ ಎಂಬ ಖಡ್ಗವನ್ನು ಕೈಯಲ್ಲಿ ಹಿಡಿದವನೇ! ಶ್ರೀಗಂಧದಿಂದ ಲೇಪಿತನಾದವನೇ! ಪರಮ-ಸುಂದರಿಯಾದ ಲಕ್ಷ್ಮಿಗೆ ಪತಿಯೇ! ಕನ್ನೈದಿಲೆಯ ಒಡಲಿನಂತಹ ಕಣ್ಣುಗಳುಳ್ಳವನೇ! ಮಂದರಪರ್ವತವನ್ನು ಧರಿಸಿದವನೇ! ಗೋವಿಂದನೇ! ನಿನಗೆ ವಂದಿಸುವೆನು.**

ವಿ : ೧. ಇಂದ್ರಾವತಾರನಾದ ಅರ್ಜುನನನ್ನು ಗೀತೋಪದೇಶದ ಮೂಲಕ ಯುದ್ಧಕ್ಕೆ ಅಣಿಗೊಳಿಸಿ, ರಕ್ಷಿಸಿದ ಹಾಗೂ ಯುದ್ಧ ಮೊದಲಾದ ಅನೇಕ ಪ್ರಸಂಗಗಳಲ್ಲಿ ಭಗದತ್ತ ಪ್ರಯೋಗಿಸಿದ [೧]ವೈಷ್ಣವಾಸ್ತ್ರ ಕರ್ಣ ಪ್ರಯೋಗಿಸಿದ ಅತಿವೇಗದ [೨]ಬ್ರಹ್ಮಾಸ್ತ್ರ ಮೊದಲಾದವುಗಳಿಂದ ಸಂರಕ್ಷಿಸಿದ ಎಂದರ್ಥ.

೨. **ನಂದಕಹಸ್ತ** – **ನಂದಕ** ಎಂಬುದು ಶ್ರೀಹರಿಯ ಖಡ್ಗದ ಹೆಸರು. ಅದಕ್ಕೆ ಅಭಿಮಾನಿದೇವತೆ ಸಾಕ್ಷಾತ್ ಮಹಾಲಕ್ಷ್ಮೀ; ಆದ್ದರಿಂದ ನಂದಕವನ್ನು ಕೈಯಲ್ಲಿ ಹಿಡಿದವನು ಎಂದರೆ, ಮಹಾಲಕ್ಷ್ಮೀ ಮೊದಲಾಗಿ ಸಕಲರೂ ಅವನ ಅಧೀನದಲ್ಲಿ ಸದಾ ಇರುವರು ಎಂದರ್ಥ. ಇದನ್ನು **ಹೇ ನಂದ ಕಹಸ್ತ** ಎಂದೂ ಸಹ ಪದವಿಭಾಗ ಮಾಡಬಹುದು. **ನಂದ** ಎಂಬುದು ವಿಷ್ಣುಸಹಸ್ರನಾಮದ **ಆನಂದೋ ನಂದನೋ ನಂದ** ಎಂಬ ಪದ. ಕ ಎಂದರೆ ಕ ಶಬ್ದವಾಚ್ಯರಾದ ಬ್ರಹ್ಮವಾಯುಗಳನ್ನು ಅಧೀನದಲ್ಲಿಟ್ಟುಕೊಂಡವನು ಎಂದು ಅರ್ಥವಾಗುವುದು.

೩. **ಚಂದನಚರ್ಚಿತ** – ಚಂದನ ಎಂದರೆ ಶ್ರೀಗಂಧ, ಶ್ರೀಗಂಧದಿಂದ ಲೇಪಿತನಾದವನು. ಹಾಗೆ ಶ್ರೀಗಂಧವನ್ನು ಅಸಂಖ್ಯ ಗೋಪಿಕಾಸ್ತ್ರೀಯರು ಶ್ರೀಕೃಷ್ಣನ ಮೈಗೆ ಲೇಪಿಸಿದರು. ಅದೇ

---

೧. ತಸ್ಮಿನ್ನಸ್ತ್ರೇ ತೇನ ತದಾ ಪ್ರಯುಕ್ತೇ ದಧಾರ ತದ್ ವಾಸುದೇವೋಽಮಿತೌಜಾಃ।
ತದಂಸದೇಶೇಽಸ್ಯ ತು ವೈಜಯಂತೀ ಬಭೂವ ಮಾಲಾಽಖಿಲಲೋಕಕರ್ತುಃ॥
– ಮ.ಭಾ.ತಾ.ನಿ. (೨೬/೨೬)

೨. ತಂ ವಾಸುದೇವೋ ರಥಮಾನಮಯ್ಯ ಮೋಘಂ ಚಕಾರಾರ್ಜುನತಃ ಕಿರೀಟಮ್।
ಚೂರ್ಣೀಕೃತಂ ತೇನ ಸುರೇಂದ್ರಸೂನೋರ್ದಿವಂ ಯಯೌ ಬಾಣಗತಶ್ಚ ನಾಗಃ॥
ನಮಿತೇ ವಾಸುದೇವೇನ ರಥೇ ಪಂಚಾಗುಲಂ ಭುವಿ।
ಅಪಾಂಗದೇಶಮುದ್ದಿಶ್ಯ ಮುಕ್ತೇ ನಾಗೇ ಕಿರೀಟಿನಃ॥ ... – ಮ.ಭಾ.ತಾ.ನಿ. (೨೭/೧೭೮)

ಗೋಪಿಚಂದನ ಎಂಬುದಾಗಿ ಇಂದು ಸುಪ್ರಸಿದ್ಧ ವೈಷ್ಣವ ಲಾಂಛನ ಎನ್ನಿಸಿದೆ: **ಚಂದನಂ ಗೋಪಿಮರ್ದಿತಮ್** (ಕೃಷ್ಣಾಮೃತಮಹಾರ್ಣವ).

೪. **ಸುಂದರಿನಾಥ** – ಇದಕ್ಕೆ ಹಿಂದಿನ ಅಧ್ಯಾಯದ ಮೊದಲಶ್ಲೋಕದಲ್ಲಿ ಬಂದ ಸುಂದರಿಕಾಂತ ಎಂಬ ಪದದ ಅರ್ಥವನ್ನು ತಿಳಿಯಬೇಕು.

೫. **ಇಂದೀವರೋದರದಲನಯನ** – ಇಂದೀವರ ಎಂದರೆ ಕನ್ನೈದಿಲೆ ಎಂದರ್ಥ. ಕನ್ನೈದಿಲೆಯ ಒಡಲಿನಲ್ಲಿಯ ದಳಗಳಂತೆ ವಿಶಾಲವಾದ ಕಪ್ಪು ಕಣ್ಣುಗಳುಳ್ಳವನು ಎಂದರ್ಥ. ಇಂದೀವರಾಕ್ಷ ಎಂಬ ಪದ ಸುಪ್ರಸಿದ್ಧ. ಪುಂಡರೀಕಾಕ್ಷ ಎಂಬುದು ಹೇಗೋ ಹಾಗೆ. ಶ್ರೀಹರಿಯ ಕಣ್ಣುಗಳು ಅತ್ಯಂತ ವಿಶಾಲ ಎಂಬುದು ಅವನ ಸೌಂದರ್ಯ ಅಗಾಧ ಸೂಚಿಸುವ ಪದ. ಅದರಂತೆ, ಅವನ ದೃಷ್ಟಿವಿಶಾಲ ಎಂದರೆ ದೃಷ್ಟಿ ಎಂಬುದಕ್ಕೆ ಜ್ಞಾನ ಎಂಬುದು ಅರ್ಥವಾಗುವುದರಿಂದ ಅವನ ಜ್ಞಾನ ಅತ್ಯಂತ ಪರಿಪೂರ್ಣವಾದುದು. ಸ್ವಾಭಾವಿಕ ಹಾಗೂ ನಿತ್ಯವಾದುದು ಎಂದು ಭಾವ; **ಸ್ವಪರಗತಾಖಿಲವಿಶೇಷವಿಷಯಮ್** (ಪ್ರಮಾಣಲಕ್ಷಣ) ಎಂಬುದು ಈಶಜ್ಞಾನದ ಲಕ್ಷಣ.

೬. **ಮಂದರಧಾರಿನ್** – ಮಂದರ ಎಂಬುದು ಸಮುದ್ರಮಥನಕ್ಕೆ ಕಡಗೋಲನ್ನಾಗಿ ಉಪಯೋಗಿಸಲ್ಪಟ್ಟ ಸುವರ್ಣಪರ್ವತ. ರುದ್ರದೇವರ ವರದಿಂದಾಗಿ ಇತರರಿಂದ ಅಧಾರ್ಯ ಎಂಬ ಹಿರಿಮೆಯನ್ನು ಹೊಂದಿತ್ತು. ಅದನ್ನು ಶ್ರೀಹರಿ ತನ್ನ ಎಡಗೈಯಿಂದಲೇ ಮೇಲೆತ್ತಿ ಗರುಡನ ಮೇಲಿರಿಸಿದ ಎಂಬ ವಿವರ ಶ್ರೀಮದ್ಭಾಗವತಾದಿಗಳಲ್ಲಿ ಬಂದಿದೆ. ಶಿವಧನುಸ್ಸನ್ನು ಹೇಗೋ ಹಾಗೆ ಶಿವವರವಿದ್ದ ಆ ಮಂದರವನ್ನು ಕಿತ್ತಿ ಮೇಲಿರಿಸಿದ ಶ್ರೀಹರಿ ಶಿವಾದಿ ಸಕಲದೇವತೆಗಳಿಗಿಂತ ಮಿಗಿಲಾದ ಸರ್ವೋತ್ತಮ ಎಂದು ಭಾವ. ಕೃಷ್ಣರೂಪದಿಂದ ಒಂದೇ ಕೈಯಿಂದ ಗೋವರ್ಧನಗಿರಿಯನ್ನು ಮೇಲೆತ್ತಿ ಏಳು ದಿವಸಗಳ ಕಾಲ ಬಾಲಕ, ನಾಯಿಕೊಡೆಯನ್ನು ಹಿಡಿದಷ್ಟು ಲೀಲಾಜಾಲವಾಗಿ ಅದನ್ನು ಧರಿಸಿದ್ದ ಎಂಬ ವಿವರವೂ ಇದರಿಂದ ಸೂಚಿತ.

೭. **ಗೋವಿಂದ ವಂದೇ** – ಗೋವಿಂದ ಎಂಬುದು ಶ್ರೀಹರಿಯ ಅನಂತನಾಮಗಳಲ್ಲಿ ಒಂದು. ಅದರಂತೆ, ಪ್ರಾಯಶ್ಚಿತ್ತರೂಪವಾಗಿ ಉಚ್ಚರಿಸುವ ಅಚ್ಯುತ, ಅನಂತ ಹಾಗೂ ಗೋವಿಂದ ಎಂಬ ನಾಮತ್ರಯದಲ್ಲೂ ಒಂದು. ಇದರ ಉಚ್ಚಾರಣೆಯಿಂದ ಪುಣ್ಯಕಾರ್ಯಗಳಲ್ಲಿ ನಡೆಯುವ ಲೋಪ ಪರಿಹಾರವಾಗುವುದು ಎಂಬ ವಿಶೇಷಾಂಶ ಪುರಾಣಗಳಲ್ಲಿದೆ. ರೋಗ ತಡೆಯುವ ಮೂರು ಭಗವನ್ನಾಮಗಳಲ್ಲಿ ಇದೂ ಒಂದು ಎಂಬ ಮಾತು ಕೃಷ್ಣಾಮೃತಮಹಾರ್ಣವದಲ್ಲಿದೆ:

**ಅಚ್ಯುತಾನಂತಗೋವಿಂದನಾಮೋಚ್ಚಾರಣಭೇಷಜಾತ್ ।**
**ನಶ್ಯಂತಿ ಸಕಲಾ ರೋಗಾಃ ಸತ್ಯಂ ಸತ್ಯಂ ವದಾಮ್ಯಹಮ್ ॥**

೮. ಗೋವಿಂದ ಎಂಬುದು ವಿಷ್ಣುಸಹಸ್ರನಾಮದಲ್ಲಿ ಎರಡು ಬಾರಿ ಬಂದಿರುವ ವಿವರ ಈಗಾಗಲೇ ಬಂದಿದೆ. ವಿಷ್ಣುಸಹಸ್ರನಾಮದ ಪ್ರತಿಯೊಂದು ಪದಕ್ಕೂ ಕನಿಷ್ಠ ನೂರು ಅರ್ಥದಂತೆ ಒಟ್ಟಾಗಿ ೨೦೦ಕ್ಕಿಂತ ಹೆಚ್ಚು ಅರ್ಥಗಳಾಗುವವು ಎಂದು ತಿಳಿಯಬೇಕು[1].

**ಮತ್ಸ್ಯಸ್ತುತಿ**

**ಚಂದ್ರಶತಾನನ ಕುಂದಸುಹಾಸ**
**ನಂದಿತದೈವತಾನಂದಸುಪೂರ್ಣ ।**
**ಮತ್ಸ್ಯಕರೂಪ ಲಯೋದವಿಹಾರಿನ್**
**ವೇದವಿನೇತೃ ಚತುರ್ಮುಖವಂದ್ಯ ॥ ೩ ॥**

ಪ : ಚಂದ್ರಶತಾನನ, ಕುಂದಸುಹಾಸ, ನಂದಿತದೈವತ, ಆನಂದಸುಪೂರ್ಣ, ಮತ್ಸ್ಯಕರೂಪ, ಲಯೋದವಿಹಾರಿನ್, ವೇದವಿನೇತೃ, ಚತುರ್ಮುಖವಂದ್ಯ ।

ಅ : ಚಂದ್ರಶತಾನನ, ಕುಂದಸುಹಾಸ, ನಂದಿತದೈವತ, ಆನಂದಸುಪೂರ್ಣ, ಮತ್ಸ್ಯಕರೂಪ, ಲಯೋದವಿಹಾರಿನ್, ವೇದವಿನೇತೃ; ಚತುರ್ಮುಖವಂದ್ಯ ।

ಪ್ರ.ಪ. : **ಚಂದ್ರಶತಾನನ** – ಅನಂತ ಚಂದ್ರರ ಕಾಂತಿಯನ್ನು ಹೊಂದಿದವನೇ!; **ಕುಂದಸುಹಾಸ** – ಮಲ್ಲಿಗೆಯ ಮಂದಹಾಸದವನೇ!; **ನಂದಿತದೈವತ** – ದೇವತೆಗಳಿಗೆ ನಲಿವಿತ್ತವನೇ!; **ಆನಂದಸುಪೂರ್ಣ** – ಆನಂದದಿಂದ ಪರಿಪೂರ್ಣನಾದವನೇ!; [2]**ಮತ್ಸ್ಯಕರೂಪ** – ಮತ್ಸ್ಯರೂಪನೇ!; **ಲಯೋದವಿಹಾರಿನ್** – ಪ್ರಳಯೋದಕದಲ್ಲಿ ವಿಹಾರ ಮಾಡುವವನೇ!; **ವೇದವಿನೇತೃ** – ವೇದಗಳನ್ನು ಮರಳಿ ತಂದಿತ್ತವನೇ; **ಚತುರ್ಮುಖವಂದ್ಯ** – ಚತುರ್ಮುಖನಾದ ಬ್ರಹ್ಮನಿಂದ ವಂದಿತನಾದವನೇ! (ಶ್ರೀಹರಿಯೇ ನಿನಗೆ ವಂದನೆ).

**ಕೋಟಿಚಂದ್ರರ ಮೀರುವಾಸ್ಯನೆ ಕುಂದಪುಷ್ಪಸುಹಾಸನೆ**
**ದೇವವೃಂದಕೆ ಮೋದವಿತ್ತೆಯೊ ನಂದರೂಪಿಯೆ ಪೂರ್ಣನೆ ।**

---

೧. ಭಾರತಂ ನನು ಶತಾರ್ಥಮಪಿ ಸ್ಯಾದ್ವೈಷ್ಣವಂ ಪದಸಹಸ್ರತಯಂ ಹಿ ॥
– ಸುಮಧ್ವವಿಜಯ (೬/೪)

ತ್ರಯೋಽರ್ಥಾಃ ಸರ್ವವೇದೇಷು ದಶಾರ್ಥಾಃ ಸರ್ವಭಾರತೇ ।
ವಿಷ್ಣೋಃ ಸಹಸ್ರನಾಮಾಽಪಿ ನಿರಂತರಶತಾರ್ಥಕಮ್ ॥ – ಋಗ್ಭಾಷ್ಯೋದಾಹೃತಸ್ಕಾಂದವಚನ

೨. ಅತೀತೇ ಪ್ರಲಯಾಪಾಯ ಉತ್ಥಿತಾಯ ಚ ವೇಧಸೇ ।
ಹತ್ವಾಽಸುರಂ ಹಯಗ್ರೀವಂ ವೇದಾನ್ ಪ್ರತ್ಯಾಹರದ್ಧರಿಃ ॥ – ಭಾಗವತ (೮/೨೩/೫೭)

**ಮತ್ಸ್ಯರೂಪವ ಭರದಿ ತೋರುತ ಲಯದ ಜಲದೊಳು ಚರಿಸಿದೆ**
**ವೇದವೃಂದವ ತಂದು ನೀಡಿದೆ ಬ್ರಹ್ಮವಂದಿತಪಾದನೆ ॥ ೩ ॥**

**ಅನು : ಅನಂತಚಂದ್ರರ ಕಾಂತಿಯಿಂದ ಕೂಡಿದವನೇ! ಮಲ್ಲಿಗೆಯಂತಹ ಮಂದಹಾಸದವನೇ! ದೇವತೆಗಳಿಗೆ ನಲಿವಿತ್ತವನೇ! ಆನಂದದಿಂದ ಪರಿಪೂರ್ಣ-ನಾದವನೇ! ಮತ್ಸ್ಯರೂಪನೇ! ಪ್ರಳಯೋದಕದಲ್ಲಿ ವಿಹಾರ ಮಾಡುವವನೇ! ವೇದಗಳನ್ನು ಮರಳಿ ತಂದಿತ್ತವನೇ! ಚತುರ್ಮುಖನಾದ ಬ್ರಹ್ಮನಿಂದ ವಂದಿತ-ನಾದನೇ! (ಶ್ರೀಹರಿಯೇ! ನಿನಗೆ ವಂದನೆ).**

ವಿ: ೧. **ಚಂದ್ರಶತಾನನ** – ಇಲ್ಲಿ **ಶತ** ಎಂಬುದಕ್ಕೆ ಅನಂತ ಎಂದರ್ಥ. ಅನಂತಚಂದ್ರರ ಕಾಂತಿಗಿಂತ ಮಿಗಿಲಾದ ಕಾಂತಿಯ ಮುಖವುಳ್ಳವನು ಶ್ರೀಕೃಷ್ಣ ಎಂದರ್ಥ: **ಯಾಮಿನೀನಾಥ-ಸಹಸ್ರಾಮಿತಕಾಂತಿಮತ್** (೧/೮) ಎಂಬಲ್ಲಿ ಇದರ ವಿವರ ಈಗಾಗಲೇ ಬಂದಿದೆ.

೨. **ಕುಂದಸುಹಾಸ** – **ಕುಂದ** ಎಂದರೆ ಜಾಜಿಪುಷ್ಪ. ಅದು ಅಚ್ಚ ಬಿಳಿಬಣ್ಣದ ಹೂವು. ಇಲ್ಲಿ ಮಂದಹಾಸವು ಕುಂದಪುಷ್ಪದಂತೆ ಅಚ್ಚಬಿಳಿ ಎಂದರೆ, ಅವನು ಪರಿಪೂರ್ಣಜ್ಞಾನಾನಂದಮಯ ಎಂಬುದಕ್ಕೆ ಸೂಚಕ ಎಂದರ್ಥ. ಇದನ್ನು ಕುಂದ, ಸುಹಾಸ ಎಂಬುದಾಗಿಯೂ ಪದವಿಭಾಗ ಮಾಡಬಹುದು. ಕುಂದ ಎಂಬುದು ವಿಷ್ಣುಸಹಸ್ರನಾಮದ ಪದ: '**ಕುಮುದಃ ಕುಂದರಃ ಕುಂದಃ ಪರ್ಜನ್ಯಃ ಪಾವನೋಽನಿಲಃ**'. '**ಸುಹಾಸ**' ಎಂದರೆ ಮಂಗಳಕರವಾದ ಮಂದಹಾಸದಿಂದ ಕೂಡಿದವನು ಎಂದರ್ಥ.

೩. **ನಂದಿತದೈವತಾನಂದಸುಪೂರ್ಣ** – ಇದನ್ನು ನಂದಿತದೈವತ ಹಾಗೂ ಆನಂದಸುಪೂರ್ಣ ಎಂದೂ ಪದವಿಭಾಗ ಮಾಡಿ ಓದಿಕೊಳ್ಳಬಹುದು. ದೇವತೆಗಳಿಗೆ ನಲಿವು ನೀಡಿದವನು ಹಾಗೂ ಸ್ವತಃ ಆನಂದದಿಂದ ಪರಿಪೂರ್ಣನಾದವನು ಎಂಬುದು ಇದಕ್ಕೆ ಅರ್ಥ. ಅದರಂತೆ ನಂದಿತ, ದೈವತ, ಆನಂದ, ಸುಪೂರ್ಣ ಎಂದೂ ವಿಭಾಗ ಮಾಡಿ ಅರ್ಥಮಾಡಿಕೊಳ್ಳಬಹುದು. ಆಗ ನಲಿವು ನೀಡಿದವನು, ಸರ್ವೋತ್ತಮದೇವತೆಯಾದವನು, ಆನಂದಪೂರ್ಣನು, ಸರ್ವಥಾ ಪರಿಪೂರ್ಣನಾದವನು ಶ್ರೀಹರಿ ಎಂದು ಅರ್ಥವಾಗುವುದು.

೪. **ಮತ್ಸ್ಯಕರೂಪ** – ಎಂದರೆ, ಚಿಕ್ಕ ಮೀನಿನ ಆಕಾರವನ್ನು ಹೊಂದಿದವನು. ಸತ್ಯವ್ರತರಾಜನ ಬೊಗಸೆಯ ನೀರಿನಲ್ಲಿ ಚಿಕ್ಕ ಮೀನಿನಂತೆ ಕಾಣಿಸಿಕೊಂಡು, ಮುಂದೆ ಬೃಹದಾಕಾರವನ್ನು ತಾಳಿದ ಶ್ರೀಮದ್ಭಾಗವತದ ವಿವರವನ್ನು ಇದು ಸೂಚಿಸುವುದು. ಇದನ್ನು ಮತ್ಸ್ಯ, ಕರೂಪ ಎಂದೂ ಪದವಿಭಾಗಮಾಡಿ ಅರ್ಥಮಾಡಿಕೊಳ್ಳಬಹುದು. [೧]ಕರೂಪ

೧. ಮತ್ಸ್ಯಕೂರ್ಮಾದಿರೂಪಂ ಚ ವಿಷ್ಣೋರ್ಜ್ಞಾನೈಕಮಾತ್ರಕಮ್ ।

ಎಂಬುದಕ್ಕೆ ಆನಂದರೂಪ ಎಂದು ಅರ್ಥ. ಮತ್ಸ್ಯಾದಿಸಕಲರೂಪಗಳಲ್ಲೂ ಪರಮಾತ್ಮನು ಪರಿಪೂರ್ಣನಾಗಿರುವನು ಎಂಬ ವಿಶೇಷಾಂಶ ಇದರಿಂದ ಸೂಚಿತವಾಗುವುದು. ಭಾಗವತಪುರಾಣದಲ್ಲಿ ಮತ್ಸ್ಯರೂಪದ ಬಗ್ಗೆ ಬಂದ ಪ್ರಶ್ನೆಗೆ ಉತ್ತರದಲ್ಲಿ ಈ ವಿವರಗಳಿವೆ.

೫. **ಲಯೋದವಿಹಾರಿನ್ – ಲಯೋದ** ಎಂದರೆ ಪ್ರಳಯಜಲ. ಅದು ಲಕ್ಷ್ಮ್ಯಾತ್ಮಕ-ವಾದುದು. ಇತರರೆಲ್ಲ ಲಯ ಹೊಂದಿದ ಆ ಸಂದರ್ಭದಲ್ಲಿ ಅಂತಹ ಜಲದಲ್ಲಿ ವಿಹಾರ ಮಾಡಿದ ವೈಭವ ಮತ್ಸ್ಯರೂಪದ ಶ್ರೀಹರಿಯದು ಎಂಬ ವಿಶೇಷಾಂಶ ಇದರಿಂದ ಸೂಚಿತ. ಇದರಿಂದ ಶ್ರೀಹರಿಯು ಸರ್ವಥಾ ಲಯವರ್ಜಿತನಾದ, ಅನಾದಿನಿತ್ಯನಾದ ಪರದೇವತೆ ಎಂಬ ವಿಶೇಷಾಂಶ ಸೂಚಿತವಾಗುವುದು.

೬. **ವೇದವಿನೇತೃ** – ಹಯಗ್ರೀವಾಸುರ ಎಂಬ ದೈತ್ಯನಿಂದ ಅಪಹೃತವಾಗಿದ್ದ ವೇದಾ-ಭಿಮಾನಿ ದೇವತೆಗಳನ್ನು ಮರಳಿ ಬ್ರಹ್ಮದೇವರಿಗೆ ನೀಡಿ, ಅವರಿಂದ ವಂದಿತವಾದ ರೂಪ ಇದು ಎಂದು ಇದರ ಅರ್ಥ. ಇಲ್ಲಿ ವೇದಾಪಹರಣ ಎಂದರೆ ವೇದಾಭಿಮಾನಿದೇವತೆಗಳ ಅಪಹರಣ ಎಂದೂ, ಅಪಪಾಠಾದಿಗಳಿಂದ ಅವುಗಳನ್ನು ಮಲಿನಗೊಳಿಸುವುದು ಎಂದೂ ಅರ್ಥ.

೭. **ಚತುರ್ಮುಖವಂದ್ಯ** – ಚತುರ್ಮುಖನು ಜೀವೋತ್ತಮ. ಅವನಿಂದ ವಂದ್ಯ ಎಂದರೆ ಸರ್ವದೇವತೆಗಳಿಂದ ವಂದ್ಯ; ದೇವತಾಸಾರ್ವಭೌಮ ಎಂದು ಭಾವ. ಇದನ್ನು ವೇದವಿನೇತೃಚತುರ್ಮುಖವಂದ್ಯ, ವೇದಗಳಿಗೆ ಮುಖ್ಯಾಭಿಮಾನಿನಿಯಾದ ಚತುರ್ಮುಖನಿಂದ ವಂದಿತನಾದವನು ಶ್ರೀಹರಿ ಎಂದು ಒಂದೇ ಪದವನ್ನಾಗಿ ಅರ್ಥಮಾಡಿಕೊಳ್ಳಬಹುದು.

**ಕೂರ್ಮ-ವರಾಹ**

**ಕೂರ್ಮಸ್ವರೂಪಕ ಮಂದರಧಾರಿನ್**
**ಲೋಕವಿಧಾರಕ ದೇವವರೇಣ್ಯ ।**
**ಸೂಕರರೂಪಕ ದಾನವಶತ್ರೋ**
**ಭೂಮಿವಿಧಾರಕ ಯಜ್ಞವರಾಂಗ ॥ ೪ ॥**

**ಪ** : ಕೂರ್ಮಸ್ವರೂಪಕ, ಮಂದರಧಾರಿನ್, ಲೋಕವಿಧಾರಕ, ದೇವವರೇಣ್ಯ, ಸೂಕರರೂಪಕ, ದಾನವಶತ್ರೋ, ಭೂಮಿವಿಧಾರಕ, ಯಜ್ಞವರಾಂಗ।

**ಅ** : ಕೂರ್ಮಸ್ವರೂಪಕ, ಮಂದರಧಾರಿನ್, ಲೋಕವಿಧಾರಕ, ದೇವವರೇಣ್ಯ, ಸೂಕರರೂಪಕ, ದಾನವಶತ್ರೋ, ಭೂಮಿವಿಧಾರಕ, ಯಜ್ಞವರಾಂಗ।

---

ತನ್ಮನ್ಯಂತೇ ಭೌತಿಕಂ ತು ಯೇ ಗಚ್ಛಂತ್ಯಧರಂತಮಃ ॥ ಇತಿ ಬ್ರಾಹ್ಮೇ ।
– ಭಾಗ.ತಾ.ನಿ. (೩/೩೩/೨೮)

**ಪ್ರ.ಪ. : ಕೂರ್ಮಸ್ವರೂಪಕ** – ಕೂರ್ಮಸ್ವರೂಪನೇ!; **ಮಂದರಧಾರಿನ್** – ಮಂದರವನ್ನು ಧರಿಸಿದವನೇ!; **ಲೋಕವಿಧಾರಕ** – ಲೋಕಗಳನ್ನು ವಿಶೇಷವಾಗಿ ಹೊತ್ತಿರುವವನೇ!; **ದೇವವರೇಣ್ಯ** – ದೇವತೆಗಳಿಂದ ಭಜನೀಯನಾದವನೇ!; **ಸೂಕರರೂಪಕ** – ವರಾಹರೂಪವನ್ನು ಧರಿಸಿದವನೇ; **ದಾನವಶತ್ರೋ** – ದಾನವರನ್ನು ಸಂಹರಿಸಿದವನೇ!; **ಭೂಮಿವಿಧಾರಕ** – ಭೂಮಿಯನ್ನು ಹೊತ್ತವನೇ!; **ಯಜ್ಞವರಾಂಗ** – ಯಜ್ಞಸಾಮಗ್ರಿಗಳನ್ನು ಅವಯವಗಳಿಂದ ಸೃಷ್ಟಿಸಿದವನೇ! (ಶ್ರೀಹರಿಯೇ ನಿನಗೆ ವಂದನೆ).

**ಕೂರ್ಮರೂಪದಿ ದೇವ ಶ್ರೀಹರಿ ಮಂದರಾದ್ರಿಯ ಪೊತ್ತೆಯೊ**
**ಲೋಕವೃಂದವ ನಿರುತ ಧರಿಸಿಹ ದೇವವೃಂದಸುಭಾವಿತ ।**
**ಕೋಲರೂಪದಿ ದೇವದೇವನೆ ಖುಲ್ಲದೈತ್ಯನ ಸೀಳಿದೆ**
**ಎಲ್ಲ ಭೂಮಿಯ ಉರದಿ ಧರಿಸಿದೆ ಯಜ್ಞ ನೆಲಸಿಹ ದೇಹನೆ ॥ ೪ ॥**

**ಅನು : ಕೂರ್ಮಸ್ವರೂಪನೇ! ಮಂದರವನ್ನು ಧರಿಸಿದವನೇ! ಲೋಕಗಳನ್ನು ವಿಶೇಷವಾಗಿ ಹೊತ್ತಿರುವವನೇ! ದೇವತೆಗಳಿಂದ ಭಜನೀಯನಾದವನೇ! ವರಾಹರೂಪವನ್ನು ಧರಿಸಿದವನೇ! ದಾನವರನ್ನು ಸಂಹರಿಸಿದವನೇ! ಭೂಮಿಯನ್ನು ಹೊತ್ತವನೇ! ಯಜ್ಞಸಾಮಗ್ರಿಗಳನ್ನು ಅವಯವಗಳಿಂದ ಸೃಷ್ಟಿಸಿದವನೇ! (ಶ್ರೀಹರಿಯೇ ನಿನಗೆ ವಂದನೆ).**

ವಿ: ೧. **ಕೂರ್ಮಸ್ವರೂಪಕ** – ಕೂರ್ಮರೂಪವನ್ನು ಧರಿಸಿದವನು ಹಾಗೂ ಸ್ವರೂಪಾನಂದದಿಂದಲೇ ಕೂಡಿದವನು, ಕೂರ್ಮರೂಪದಲ್ಲೂ ಸ್ವರೂಪಾನಂದಭರಿತನಾದವನು, ಕೂರ್ಮಸ್ವರೂಪನು ಹಾಗೂ ಕ ಎಂದರೆ ಹಿಂದೆ ತಿಳಿಸಿದಂತೆ ಆನಂದಪೂರ್ಣನೂ ಹೀಗೆ ಅನೇಕಾರ್ಥಗಳು ಇದಕ್ಕೆ ವಿವಕ್ಷಿತ.

೨. **ಮಂದರಧಾರಿನ್** – ಹಿಂದೆ ತಿಳಿಸಿದಂತೆ ಮಂದರಪರ್ವತವನ್ನು ಉಪಲಕ್ಷಣತಯಾ ಗೋವರ್ಧನಪರ್ವತವನ್ನು ಒಟ್ಟಾಗಿ ಪರ್ವತಗಳನ್ನೊಳಗೊಂಡಂತೆ ಸರ್ವವನ್ನೂ ಧರಿಸಿದವನು ಶ್ರೀಹರಿ ಎಂದರ್ಥ. ಸಮುದ್ರಮಥನ ಕಾಲದಲ್ಲಿ ಕೂರ್ಮರೂಪದಿಂದ ಅದನ್ನು ಧರಿಸಿದವನು ಎಂಬುದು ಇಲ್ಲಿಯ ಇನ್ನೊಂದು ವಿಶೇಷಾಂಶ.

೩. **ಲೋಕವಿಧಾರಕ** – ಸಕಲಲೋಕಗಳನ್ನು ಸಹ ಧರಿಸಿದವನು. ಬ್ರಹ್ಮಾಂಡವನ್ನು ಧರಿಸಿದವನು ಎಂಬುದು ಮುಖ್ಯಾರ್ಥ. ಕೂರ್ಮರೂಪದಿಂದ ಹಾಗೆ ಬ್ರಹ್ಮಾಂಡವನ್ನು ಶ್ರೀಹರಿ ಧರಿಸಿರುವ ವಿವರ ತಂತ್ರಸಾರಸಂಗ್ರಹಾದಿಗಳಲ್ಲಿ ನಿರೂಪಿತವಾಗಿದೆ: '**ಕೂರ್ಮೋ ಬೃಹದಂಡವೋಢಾ**' (ಮ.ಭಾ.ತಾ.ನಿ. ೩/೪೬). ಶ್ರೀಹರಿಯ ಕೂರ್ಮರೂಪಗಳು

ಬ್ರಹ್ಮಾಂಡದ ಹೊರಗೆ ಹಾಗೂ ಒಳಗೆ ಎಂಬುದಾಗಿ ಎರಡು ಬಗೆ ಎಂಬ ವಿವರ ಬೃಹದ್ಭಾಷ್ಯದಲ್ಲಿದೆ:

**ಬಿಭರ್ತ್ಯಂಡಂ ಹರಿಃ ಕೂರ್ಮಸ್ತ್ವಂಡೇ ಚಾಪ್ಯುದಕಂ ಮಹತ್ ।**
**ಉದಕೇ ಕೂರ್ಮರೂಪಸ್ಯ ವಾಯುಃ ಪುಚ್ಛಂ ಸಮಾಶ್ರಿತಃ ।**
**ವಾಯೋಃ ಪುಚ್ಛಂ ಸಮಾಶ್ರಿತ್ಯ ಶೇಷಸ್ತು ಪೃಥಿವೀಮಿಮಾಮ್ ।**
**ಬಿಭರ್ತಿ ತಸ್ಯಾಂ ಚ ಜಗದಿದಂ ಸರ್ವಂ ಪ್ರತಿಷ್ಠಿತಮ್ ॥ ಇತಿ ವೈಭವೇ ।**

– ಇದನ್ನು **ಹೇ ಲೋಕ, ಹೇ ವಿಧಾರಕ!** ಎಂದೂ ಅರ್ಥಮಾಡಿಕೊಳ್ಳಬಹುದು. 'ಲುಕ್ ಪ್ರಕಾಶೇ' ಎಂಬ ಧಾತುಕೋಶದಿಂದ ಅತ್ಯಂತ ಪ್ರಕಾಶಪೂರ್ಣನಾದವನು ಎಂದು ಅರ್ಥ. ವಿಧಾರಕ ಎಂಬುದಕ್ಕೆ 'ವಿ' ಎಂದರೆ ಗರುಡ ಮೊದಲಾದ ಸಕಲರಿಗೂ ಧಾರಕ ಎಂದು ಭಾವ.

'ಲೋಕ' ಎಂದರೆ ಮುಕ್ತರು (ಲೋಕಾಭಿಧಾಶ್ಚಾಪಿ ಯತೋ ಹಿ ಮುಕ್ತಾಃ ಪ್ರಕಾಶರೂಪಾಃ ಸತತಂ ಚ ಸರ್ವೇ - ಅನುವ್ಯಾಖ್ಯಾನ. ೪/೪/೧೦) ಎಂಬ ಅರ್ಥವಿರುವುದರಿಂದ 'ಲೋಕವಿಧಾರಕ' ಎಂಬುದನ್ನು ಮುಕ್ತವಿಧಾರಕ – **ಮುಕ್ತಾನಾಂ ಪರಮಾ ಗತಿಃ** (ವಿಷ್ಣುಸಹಸ್ರನಾಮ) – ಎಂದೂ ಅರ್ಥಮಾಡಿಕೊಳ್ಳಬಹುದು.

೪. **ದೇವವರೇಣ್ಯ** – ದೇವವರೇಣ್ಯ ಎಂದರೆ ದೇವತೆಗಳಿಂದ ವರಣೀಯನಾದವನು, ಭಜನೀಯನಾದವನು ಎಂದರ್ಥ. ಇಲ್ಲಿಯ ದೇವ ಹಾಗೂ ವರೇಣ್ಯ ಎಂಬ ಪದಗಳು ಗಾಯತ್ರೀಮಂತ್ರದ ಪದಗಳಾಗಿವೆ. ಎಂದರೆ ಶ್ರೀಹರಿಯು ಗಾಯತ್ರೀಪ್ರತಿಪಾದ್ಯನಾದ ಸರ್ವೋತ್ತಮನಾದ ದೇವತೆ ಎಂದು ಭಾವ.

೫. **ಸೂಕರರೂಪಕ** – ಇದನ್ನು ಮತ್ಸ್ಯಕರೂಪ ಎಂಬುದನ್ನು ಹೇಗೋ ಹಾಗೆ ಅರ್ಥಮಾಡಿಕೊಳ್ಳಬೇಕು.

೬. **ದಾನವಶತ್ರೋ** – ದಾನವರಿಗೆ ಶತ್ರುವಾದವನು; ದಾನವರು ಎಂದರೆ ದುಷ್ಟರು ಎಂದರ್ಥ. ಅವರಿಗೆ ಶತ್ರು ಎಂದರೆ, ಅವರನ್ನು ಸರ್ವರೀತಿಯಲ್ಲೂ ನಾಶಮಾಡುವ ಮಹಾಸಮರ್ಥ ಎಂದು ಭಾವ.

೭. **ಭೂಮಿವಿಧಾರಕ** – ವರಾಹರೂಪದಿಂದ ಶ್ರೀಹರಿಯು ಭೂಮಿಯನ್ನು ಧರಿಸಿರುವ ವಿವರ ಶ್ರೀಮದ್ಭಾಗವತಾದಿಗಳಲ್ಲಿ ನಿರೂಪಿತವಾಗಿದೆ. ಪ್ರಳಯೋದಕದಲ್ಲಿ ಮುಳುಗಿದ್ದ ಭೂಮಿಯನ್ನು ಮೇಲೆತ್ತಿದ ಪ್ರಸಂಗ ಒಂದಾದರೆ, ಹಿರಣ್ಯಾಕ್ಷನಿಂದ ಅಪಹೃತವಾದ ಭೂಮಿಯನ್ನು ಅವನನ್ನು ಸಂಹರಿಸಿ, ಮೇಲೆತ್ತಿದ್ದು ಇನ್ನೊಂದು ಪ್ರಸಂಗವಾಗಿದೆ. ಎರಡೂ ಪ್ರಸಂಗದಲ್ಲಿ ಹತನಾದವನು ಹಿರಣ್ಯಾಕ್ಷನೇ. ಮೊದಲನೆಯ ಹಿರಣ್ಯಾಕ್ಷ ಬ್ರಹ್ಮಪುತ್ರ, ಎರಡನೆಯ ಹಿರಣ್ಯಾಕ್ಷ ಆ ಹಿರಣ್ಯಾಕ್ಷನ ಎರಡನೆಯ ಜನ್ಮ. ಅವನು ಕಶ್ಯಪ–ದಿತಿಯರ

ಪುತ್ರ. ಮೊದಲನೆಯ ಹಿರಣ್ಯಾಕ್ಷನಲ್ಲಿ ಯಾರ ಆವೇಶವೂ ಇಲ್ಲ; ಎರಡನೆಯ ಹಿರಣ್ಯಾಕ್ಷನದಲ್ಲಿ ವಿಷ್ಣುದ್ವಾರಪಾಲಕನಾದ ವಿಜಯನ ಆವೇಶ ಇತ್ಯಾದಿ ವಿವರಗಳು ಶ್ರೀಮದ್ಭಾಗವತತಾತ್ಪರ್ಯದಲ್ಲಿವೆ.

೮. **ಯಜ್ಞವರಾಂಗ** – ಯಜ್ಞಕ್ಕೆ ಅಗತ್ಯವಾದ ಪವಿತ್ರ, ತಿಲ ಮೊದಲಾದ ಸಮಸ್ತ ವಸ್ತುಗಳನ್ನು ಸಹ ತನ್ನ ದೇಹದಲ್ಲಿ ಧರಿಸಿ, ಅವುಗಳಿಗೆ ಅಭಿವ್ಯಕ್ತಿ ನೀಡಿದವನು ಎಂದು ಭಾವ. ಅವನ ರೋಮಗಳಿಂದ ದರ್ಭೆ, ಬೆವರಿನಿಂದ ತಿಲ ಹೀಗೆ ಯಜ್ಞಕ್ಕೆ ಅಗತ್ಯವಾದ ಸಕಲ ಸಾಮಗ್ರಿಗಳು ಉತ್ಪನ್ನವಾದವು ಎಂಬ ವಿವರ ಶ್ರೀಮದ್ಭಾಗವತದಲ್ಲಿದೆ. ಈ ಕಾರಣದಿಂದ ಶ್ರೀಹರಿಯ ವರಾಹರೂಪಕ್ಕೆ ಯಜ್ಞವರಾಹ ಎಂಬ ಹೆಸರೂ ಇದೆ.

### ನೃಸಿಂಹ-ವಾಮನ

**ದೇವ ನೃಸಿಂಹ ಹಿರಣ್ಯಕಶತ್ರೋ**
**ಸರ್ವಭಯಾಂತಕ ದೈವತಬಂಧೋ ।**
**ವಾಮನ ವಾಮನ ಮಾಣವವೇಷ**
**ದೈತ್ಯವರಾಂತಕ ಕಾರಣರೂಪ ॥ ೫ ॥**

**ಪ:** ದೇವ, ನೃಸಿಂಹ, ಹಿರಣ್ಯಕಶತ್ರೋ, ಸರ್ವಭಯಾಂತಕ, ದೈವತಬಂಧೋ, ವಾಮನ, ವಾಮನ, ಮಾಣವವೇಷ, ದೈತ್ಯವರಾಂತಕ, ಕಾರಣರೂಪ।

---

೧. ಬ್ರಹ್ಮಜಸ್ತು ಹಿರಣ್ಯಾಕ್ಷಃ ಪ್ರಥಮಂ ದಂಷ್ಟ್ರಯಾ ಹತಃ।
ಸ ಏವ ಪಾರ್ಷದಾವಿಷ್ಟೋ ದ್ವಿತೀಯೋ ಕರ್ಣತಾಡನಾತ್ ॥
ಪೂರ್ವಂ ಲಯೋದಕೇ ಮಗ್ನಾಂ ದ್ವಿತೀಯಂ ತೇನ ಮಜ್ಜಿತಾಮ್ ।
ಭುವಮುದ್ಧರತ್ಯೆವಾಸೌ ಹರಿಣಾ ಕ್ರೋಡರೂಪಿಣಾ ॥ ಇತಿ ಬ್ರಹ್ಮಾಂಡೇ।
– ಭಾಗವತತಾತ್ಪರ್ಯನಿರ್ಣಯ (೩/೧೪/೩೪)

೨. ಕ್ರೋಡಾಪದೇಶಃ ಸ್ವಯಮ್ **ಅಧ್ವರಾಂಗಃ** – ಭಾಗವತ (೩/೧೪/೩೦)
ರೂಪಂ ತವೈತನ್ನನು ದುಷ್ಕೃತಾತ್ಮನಾಂ ದುರ್ದರ್ಶನಂ ದೇವ ಯದಧ್ವರಾತ್ಮಕಮ್ ।
ಛಂದಾಂಸಿ ಯಸ್ಯ ತ್ವಚಿ ಬರ್ಹಿ ರೋಮಸ್ವಾಜ್ಯಂ ದೃಶಿ ತ್ವಂಘ್ರಿಷು ಚಾತುರ್ಹೋತ್ರಮ್ ॥
ಸ್ರುಕ್ ತುಂಡ ಆಸೀತ್ ಸ್ರುವ ಈಶ ನಾಸಯೋರಿಡೋದರೇ ಚಮಸಃ ಕರ್ಣರಂಧ್ರೇ।
ಪ್ರಾಶಿತ್ರಮಾಸ್ಯೇ ರಸನೇ ಗ್ರಹಾಸ್ತು ಯಚ್ಚರ್ವಣಂ ತೇ ಭಗವನ್ನಗ್ನಿಹೋತ್ರಮ್ ॥
ದೀಕ್ಷಾಽನುಜನ್ಮೋಪಸದಃ ಶಿರೋಧರಸ್ತ್ವಂ ಪ್ರಾಯಣೀಯೋದನೀಯದಂಷ್ಟ್ರಃ।
ಜಿಹ್ವಾ ಪ್ರವರ್ಗ್ಯಸ್ತವ ಶೀರ್ಷಣಂ ಕ್ರತುಃ ಸಭ್ಯಾವಸಥ್ಯಾ ಚಿತಯೋಽಸವೋ ಹಿ ತೇ ॥
ಸೋಮಸ್ತು ರೇತಃ ಸವನಾನ್ಯವಸ್ಥಿತಿಃ ಸಂಸ್ಥಾವಿಭೇದಾಸ್ತವ ದೇವ ಧಾತವಃ।
ಸತ್ರಾಣಿ ಸರ್ವಾಣಿ ಶರೀರಸಂಧಿಸ್ತ್ವಂ ಸರ್ವಯಜ್ಞಕ್ರತುರಿಷ್ಟಿಬಂಧನಃ ॥
– ಭಾಗವತ (೩/೧೪/೩೭-೪೦)

**ಅ** : ಹಿರಣ್ಯಕಶತ್ರೋ, ಸರ್ವಭಯಾಂತಕ, ದೈವತಬಂಧೋ, ದೇವ, ನೃಸಿಂಹ, ಮಾಣವವೇಷ, ದೈತ್ಯವರಾಂತಕ, ಕಾರಣರೂಪ, ವಾಮನ, ವಾಮನ।

ಪ್ರ.ಪ. : **ಹಿರಣ್ಯಕಶತ್ರೋ** – ಹಿರಣ್ಯಕಶಿಪುವನ್ನು ಸಂಹರಿಸಿದವನೇ!; **ಸರ್ವಭಯಾಂತಕ** – ಸಕಲರ ಭಯವನ್ನು ಪರಿಹರಿಸಿದವನೇ!; **ದೈವತಬಂಧೋ** – ದೇವತೆಗಳಿಗೆ ಹಿತಗೈದವನೇ!; **ದೇವ** – ದೇವನೇ!; **ನೃಸಿಂಹ** – ನರಸಿಂಹನೇ!; **ಮಾಣವವೇಷ** – ವಟುವೇಷವನ್ನು ಧರಿಸಿದವನೇ!; **ದೈತ್ಯವರಾಂತಕ** – ದೈತ್ಯಶ್ರೇಷ್ಠನಾದ ಬಲಿಯನ್ನು ಮಣಿಸಿದವನೇ!; **ಕಾರಣರೂಪ** – ವಿಶೇಷವಾದ ಕಾರಣರೂಪನೇ!; **ವಾಮನ** – ವಾಮನನೇ!; **ವಾಮನ** – ವಾಮನನೇ! (ನಿನಗೆ ವಂದನೆ).

**ನೃಹರಿರೂಪದಿ ಭರದಿ ನಲಿಯುತ ಕನಕಕಶಿಪುವ ಸೀಳಿದೆ**
**ಸರ್ವಭಯವನು ನೀನು ಬಿಡಿಸಿದೆ ಸರ್ವದೈವತಬಾಂಧವ।**
**ಜ್ಞಾನಗಮ್ಯನೆ ಶ್ರೀಶವಾಮನ ಮುದ್ದು ವಟುವಿನ ರೂಪನೆ**
**ದೈತ್ಯವರ್ಯನ ನೀನು ಮಣಿಸಿದೆ ಶಕ್ರಭಾಗ್ಯಕೆ ಕಾರಣ ॥ ೫ ॥**

**ಅನು : ಹಿರಣ್ಯಕಶಿಪುವನ್ನು ಸಂಹರಿಸಿದವನೇ! ಸಕಲರ ಭಯವನ್ನು ಪರಿಹರಿಸಿದವನೇ! ದೇವತೆಗಳಿಗೆ ಹಿತಗೈದವನೇ! ದೇವನೇ! ನರಸಿಂಹನೇ! ವಟುವೇಷವನ್ನು ಧರಿಸಿದವನೇ! ದೈತ್ಯಶ್ರೇಷ್ಠನಾದ ಬಲಿಯನ್ನು ಮಣಿಸಿದವನೇ! ವಿಶೇಷವಾದ ಕಾರಣರೂಪನೇ! ವಾಮನನೇ! ವಾಮನನೇ! (ನಿನಗೆ ವಂದನೆ)**

ವಿ : ಈ ಶ್ಲೋಕದಲ್ಲಿ ಶ್ರೀಹರಿಯ ನರಸಿಂಹ ಹಾಗೂ ವಾಮನ ಎಂಬ ಎರಡು ರೂಪಗಳ ಸ್ತೋತ್ರವಿದೆ.

೧. **ದೇವ** – ದೇವ ಎಂಬ ಪದದ ಅನೇಕಾರ್ಥಗಳ ವಿವರ ಋಗ್ಭಾಷ್ಯದಲ್ಲಿ ಬಂದಿದೆ:

**'ದ್ಯೋತನಾದ್ವಿಜಯಾತ್ ಕಾಂತ್ಯಾ ಸ್ತುತ್ಯಾ ವ್ಯವಹೃತೇರಪಿ।**
**ಗತ್ಯಾ ರತ್ಯಾ ಚ ದೇವಾಖ್ಯಂ ಹೋತೃಸಂಸ್ಥಂ ವಿಶೇಷತಃ॥'**

ಧಾತುಕೋಶದಂತೆಯೂ ದೇವಶಬ್ದದ ಅರ್ಥ ಹೀಗಿದೆ: '**ದಿವು ಕ್ರೀಡಾವಿಜಿಗೀಷಾವ್ಯವಹಾರದ್ಯುತಿಸ್ತುತಿಮೋದಮದಸ್ವಪ್ನಕಾಂತಿಗತಿಷು**' (ಗೀತಾಭಾಷ್ಯ ೭/೧೪).

– ಒಟ್ಟಾಗಿ ಶ್ರೀಹರಿಯು ಕ್ರೀಡಾದಿಗುಣವಿಶಿಷ್ಟನಾದವನು ಎಂದು ಭಾವ.

೨. **ನೃಸಿಂಹ** – ನೃಸಿಂಹ ಎಂದರೆ ನರಸಿಂಹ ಎಂದರ್ಥ. ಮುಖದಭಾಗವು ಸಿಂಹದ್ದಾಗಿಯೂ, ದೇಹದ ಇತರ ಭಾಗವು ಮಾನವರದ್ದಾಗಿಯೂ ಇರುವುದರಿಂದ ಅದಕ್ಕೆ ಆ ಹೆಸರು. ಇದಕ್ಕೆ ನರಸಿಂಹ, ಪುರುಷಶ್ರೇಷ್ಠ, ಪುರುಷೋತ್ತಮ ಎಂದೂ

ಅರ್ಥವಾಗುವುದು. ಪ್ರಹ್ಲಾದನ ಸಂರಕ್ಷಣೆಗಾಗಿ ಅವತಾರ ಮಾಡಿದ ನರಸಿಂಹರೂಪದ ವಿವರಣೆ ಇದಾಗಿದೆ.

೩. **ದೇವನೃಸಿಂಹ** – ಎಂಬುದನ್ನು ಒಟ್ಟಾಗಿ ಒಂದೇ ಪದವನ್ನಾಗಿ ಓದಿಕೊಂಡಾಗ ದೇವಸಿಂಹ ಹಾಗೂ ನೃಸಿಂಹ ಎಂದೂ ಅರ್ಥ. ದೇವನೃಸಿಂಹ ಎಂದರೆ ದೇವಶ್ರೇಷ್ಠ ಹಾಗೂ ಪುರುಷಶ್ರೇಷ್ಠ ಎಂದೂ ಅರ್ಥವಾಗುವುದು.

೪. **ಹಿರಣ್ಯಕಶತ್ರೋ** – ಇಲ್ಲಿ ಹಿರಣ್ಯಕ ಎಂದರೆ ಹಿರಣ್ಯಕಶಿಪು. ಅವನ ಶತ್ರು ಎಂದರೆ ಇತರ ಸಕಲರಿಂದ ಅವಧ್ಯನಾಗಿದ್ದ ಅವನನ್ನು ಸಂಹರಿಸಿದವನು ಎಂದು ಭಾವ.

೫. **ಸರ್ವಭಯಾಂತಕ** – ಸರ್ವರ ಸಕಲವಿಧವಾದ ಭಯವನ್ನು ಸಹ ಪೂರ್ಣವಾಗಿ ಪರಿಹರಿಸಿದವನು ಎಂದರ್ಥ. ಹಿರಣ್ಯಕಶಿಪುವಿನ ಉಪಟಳದಿಂದಾಗಿ ದಿಕ್ಪಾಲರನ್ನೊಳಗೊಂಡಂತೆ ಸಕಲರಿಗೂ ಉಂಟಾಗಿದ್ದ ಭಯವನ್ನು ನರಸಿಂಹ ರೂಪದಿಂದ ಶ್ರೀಹರಿ ಅವನನ್ನು ಸಂಹರಿಸುವ ಮೂಲಕ ಪರಿಹರಿಸಿದ ಎಂದರ್ಥ. ಇದನ್ನು **ಸರ್ವ ಭಯಾಂತಕ** ಎಂದೂ, **ಸರ್ವ ಭಯ ಅಂತ ಕ** ಎಂದೂ, ಸರ್ವಭಯಾಂತಕ ಎಂದೂ ಅನೇಕ ಬಗೆಯಲ್ಲಿ ವಿಭಾಗ ಮಾಡಿ ಅರ್ಥಮಾಡಿಕೊಳ್ಳಬಹುದು.

೬. **ದೈವತಬಂಧೋ** – ಎಂದರೆ ದೇವತೆಗಳಿ ಬಂಧು, ಹಿತೈಷಿ ಎಂದರ್ಥ. ಅವರೆಲ್ಲರಿಂದ ಅವಧ್ಯನಾದ ಶತ್ರುವಾಗಿದ್ದ ಹಿರಣ್ಯಕಶಿಪುವನ್ನು ಸಂಹರಿಸಿದ್ದರಿಂದ, ಅವರಿಗೆ ಬಂಧು ಶ್ರೀಹರಿ ಎಂದು ಭಾವ.

೭. ಇದನ್ನು **ಸರ್ವಭಯಾಂತ ಕದೈವತಬಂಧೋ** ಎಂದೂ ಅರ್ಥಮಾಡಿಕೊಳ್ಳಬಹುದು. ಆಗ ಶ್ರೀನರಸಿಂಹರೂಪವು ಸರ್ವಭಯವನ್ನು ಪರಿಹರಿಸಿ ಅಭಯನೀಡುವ ರೂಪ ಎಂದೂ ಕದೈವತರೂಪ ಎಂದರೆ ಕಶಬ್ದವಾಚ್ಯರಾದ ಬ್ರಹ್ಮವಾಯುಗಳನ್ನು ತಮ್ಮೆಲ್ಲರಿಗಿಂತ ಶ್ರೇಷ್ಠವಾದ ದೇವತೆ ಎಂದು ತಿಳಿದ ದೇವತೆ ಮೊದಲಾದವರಿಗೆ ಬಂಧು ಎಂದೂ ಅರ್ಥವಾಗುವುದು.

೮. **ವಾಮನ ವಾಮನ ಮಾಣವವೇಷ** – ಎಂಬಲ್ಲಿ ವಾಮನ ಎಂಬುದು ಆದರದ್ಯೋತಕ- ವಾಗಿ ಎರಡು ಬಾರಿ ಬಂದಿದೆ ಎಂದು ತಿಳಿಯಬಹುದು. ಅದರಂತೆ ವಾಮ – ವಾಮಾಚಾರದಲ್ಲಿ ತೊಡಗಿದ ದೈತ್ಯರನ್ನು ಅಧೋಗತಿಗೆ ಕಳುಹಿಸುವ ವಾಮನರೂಪ ಎಂದೂ ಅರ್ಥವಾಗುವುದು.

೯. **ಮಾಣವವೇಷ** – ಇಲ್ಲಿ ಮಾಣವ ಎಂದರೆ ಮಾಣವಕ, ವಟು ಎಂದರ್ಥ. ವಟುರೂಪವನ್ನು ಧರಿಸಿ, ಶ್ರೀಹರಿ ಲೋಕಕಲ್ಯಾಣ ಮಾಡಿದವನು ಎಂದೂ ಭಾವ.

೧೦. **ದೈತ್ಯವರಾಂತಕಕಾರಣರೂಪ** – ದೈತ್ಯವರ ಎಂದರೆ ದೈತ್ಯಶ್ರೇಷ್ಠನಾದ ಬಲಿಚಕ್ರವರ್ತಿ. ಅವನ ಗಮನಕ್ಕೆ ಕಾರಣವಾದ ರೂಪ ಶ್ರೀಹರಿಯ ವಾಮನರೂಪ

ಎಂದರ್ಥ. ದೈತ್ಯನಾದ ಪ್ರಹ್ಲಾದನಿಗೆ ಅವನ ಮೊಮ್ಮಗನಾದ ಬಲಿಚಕ್ರವರ್ತಿಯನ್ನು ಯಾಚನೆಯ ಹೊರತು, ಬೇರೊಂದು ರೀತಿಯಲ್ಲಿ ನಿಗ್ರಹಿಸುವುದಿಲ್ಲ ಎಂಬುದಾಗಿ ಅವನ ಅಪೇಕ್ಷೆಯಂತೆ ನೀಡಿದ್ದ ವರವನ್ನು ವಾಮನರೂಪದಿಂದ ಭೂಮಿಯನ್ನು ಬೇಡುವ ನೆಪದಲ್ಲಿ ನೆರವೇರಿಸಿ ನಿಗ್ರಹಿಸಿ- ದವನು ಎಂಬುದು ಇದರಲ್ಲಿನ ವಿಶೇಷಾರ್ಥ: **'ನಾಯಾಙ್ಞಯಾಽಹಂ ಪ್ರತಿಹನ್ಮಿ ತಂ ಬಲಿಂ ಶುಭಾನನೇತ್ಯೇವ ತತೋಽಭ್ಯಯಾಚತ'** (ಮ.ಭಾ.ತಾ.ನಿ. ೩/೪೯).

೧೧. ದೈತ್ಯವರ ಎಂಬುದಕ್ಕೆ ರೂಪದಲ್ಲಿ ದೈತ್ಯನಾದರೂ, ಸ್ವರೂಪದಲ್ಲಿ ವರ, ಶ್ರೇಷ್ಠವಾದ ದೇವಸ್ವಭಾವದವನು ಎಂದು ಭಾವ.

೧೨. ದೇವತೆಗಳಿಗೆ ದೇವತೆಯಾದವನು ಶ್ರೀಹರಿ ಎಂದು ಅರ್ಥವಾಗುವುದು; **ದೈವತಂ ದೇವತಾನಾಂ ಚ** ಎಂಬ ವಿಷ್ಣುಸಹಸ್ರನಾಮದ ಅರ್ಥ ಇದಾಗಿದೆ.

### ಪರಶುರಾಮ-ರಾಮ

**ರಾಮ ಭೃಗೂದ್ವಹ ಸೂರ್ಜಿತದೀಪ್ತೇ**
**ಕ್ಷತ್ರಕುಲಾಂತಕ ಶಂಭುವರೇಣ್ಯ ।**
**ರಾಘವ ರಾಘವ ರಾಕ್ಷಸಶತ್ರೋ**
**ಮಾರುತಿವಲ್ಲಭ ಜಾನಕಿಕಾಂತ ॥ ೬ ॥**

**ಪ** : ರಾಮ, ಭೃಗೂದ್ವಹ, ಸೂರ್ಜಿತದೀಪ್ತೇ, ಕ್ಷತ್ರಕುಲಾಂತಕ, ಶಂಭುವರೇಣ್ಯ, ರಾಘವ, ರಾಘವ, ರಾಕ್ಷಸಶತ್ರೋ, ಮಾರುತಿವಲ್ಲಭ, ಜಾನಕಿಕಾಂತ।

**ಅ** : ಸೂರ್ಜಿತದೀಪ್ತೇ, ಕ್ಷತ್ರಕುಲಾಂತಕ, ಶಂಭುವರೇಣ್ಯ, ಭೃಗೂದ್ವಹ, ರಾಮ, ರಾಕ್ಷಸಶತ್ರೋ, ಮಾರುತಿವಲ್ಲಭ, ಜಾನಕಿಕಾಂತ, ರಾಘವ, ರಾಘವ।

ಪ್ರ.ಪ. : **ಸೂರ್ಜಿತದೀಪ್ತೇ** – ಪರಿಪೂರ್ಣವಾದ ತೇಜಸ್ಸಿನಿಂದ ಕಂಗೊಳಿಸುವವನೆ!; **ಕ್ಷತ್ರಕುಲಾಂತಕ** – ದುಷ್ಟಕ್ಷತ್ರಿಯ ಕುಲವನ್ನು ನಾಶಪಡಿಸಿದವನೇ!; **ಶಂಭುವರೇಣ್ಯ** – ಬ್ರಹ್ಮರುದ್ರರಿಂದ ವಂದಿತನಾದವನೇ!; **ಭೃಗೂದ್ವಹ** – ಭೃಗುವಂಶ ತಿಲಕನೇ; **ರಾಮ** – ಪರಶುರಾಮನೇ!; **ರಾಕ್ಷಸಶತ್ರೋ** – ರಾಕ್ಷಸರನ್ನು ಸಂಹರಿಸಿದವನೇ!; **ಮಾರುತಿವಲ್ಲಭ** – ಮಾರುತಿಗೆ ಪ್ರಿಯನಾದವನೇ!; **ಜಾನಕಿಕಾಂತ** – ಸೀತಾಪತಿಯೇ!; **ರಾಘವ** – ರಘುವಂಶದಲ್ಲಿ ಅವತರಿಸಿದವನೇ!; **ರಾಘವ** – ರಘುರಾಮನೆ! (ನಿನಗೆ ವಂದನೆ).

**ಭೃಗುಕುಲೋತ್ತಮ ಪರಶುರಾಮನೆ ದಿವ್ಯವಿಕ್ರಮ ಮೆರೆದೆಯೊ**
**ದುಷ್ಟಕ್ಷತ್ರರ ಭರದಿ ತರಿದೆಯೊ ಶಂಭುವಂದಿತಚರಣನೆ।**
**ಸೂರ್ಯವಂಶದಿ ಬಂದು ರಾಘವ ಸರ್ವದೈತ್ಯರ ತರಿದೆಯೊ**
**ಮರುತಪುತ್ರಗೆ ಒಲಿದ ದೇವನೆ ಜನಕಪುತ್ರಿಯ ನಾಥನೆ ॥ ೬ ॥**

**ಅನು : ಪರಿಪೂರ್ಣವಾದ ತೇಜಸ್ಸನ್ನು ಹೊಂದಿದವನೇ! ದುಷ್ಟಕ್ಷತ್ರಿಯ ಕುಲವನ್ನು ನಾಶಪಡಿಸಿದವನೇ! ಬ್ರಹ್ಮರುದ್ರರಿಂದ ವಂದಿತನಾದವನೇ! ಭೃಗುವಂಶತಿಲಕನೇ! ಪರಶುರಾಮನೇ! ರಾಕ್ಷಸರನ್ನು ಸಂಹರಿಸಿದವನೇ! ಮಾರುತಿಗೆ ಪ್ರಿಯನಾದವನೇ! ಸೀತಾಪತಿಯೇ! ರಘುವಂಶದಲ್ಲಿ ಅವತರಿಸಿದವನೇ! ರಘುರಾಮನೇ! (ನಿನಗೆ ವಂದನೆ)**

ವಿ : ೧. ಈ ಶ್ಲೋಕದಲ್ಲಿ ಪರಶುರಾಮ-ರಾಮ ಎಂಬ ಶ್ರೀಹರಿಯ ಎರಡು ರೂಪಗಳ ವರ್ಣನೆ ಬಂದಿದೆ.

೨. ಭೃಗುವಂಶದಲ್ಲಿ ಅವತರಿಸಿ ಅದಕ್ಕೆ ವಿಶೇಷ ಹಿರಿಮೆ ತಂದುಕೊಟ್ಟದ್ದರಿಂದ ಅದಕ್ಕೆ ಭಾರ್ಗವರಾಮ ಎಂಬ ಹೆಸರು ಬಂದಿತು.

೩. **ಸೂರ್ಜಿತದೀಪ್ತೇ** - ಅವನ ಕಾಂತಿ ಪರಿಪೂರ್ಣವಾದುದು; ಎಂದರೆ ಅನಂತವೂ ಪೂರ್ಣವಾದುದು ಎಂದರ್ಥ; ಅದರಂತೆ ಸ್ವತಂತ್ರ; ಸೂರ್ಯ, ಚಂದ್ರ, ಅಗ್ನಿಗಳ ಕಾಂತಿಯಂತೆ ಪರಾಧೀನವಾದುದಲ್ಲ ಎಂದರ್ಥ.

೪. **ಕ್ಷತ್ರಕುಲಾಂತಕ** ಎಂದರೆ ದುಷ್ಟಕ್ಷತ್ರಿಯ ಕುಲವನ್ನು ನಾಶ ಮಾಡಿದವನು ಎಂದರ್ಥ. ಮುಂದೆ ಈ ವಿಷಯ **ಅವಿಜಿತಕುನೃಪತಿಸಮಿತಿವಿಖಂಡನ** ಎಂಬಲ್ಲಿ ನಿರೂಪಿತವಾಗಿದೆ. ಅದರಂತೆ ಇದಕ್ಕೆ ಕ್ಷತ್ರಿಯೇಭ್ಯಃ **ಕುಂ** - ಭೂಮಿಯನ್ನು **ಲಾತಿ** - ಕಿತ್ತುಕೊಂಡವನು ಹಾಗೂ ಅವರನ್ನು ನಾಶಮಾಡಿದವನು ಎಂದೂ ಅರ್ಥವಾಗುವುದು.

೫. **ಶಂಭುವರೇಣ್ಯ** - ಶಂಭು ಎಂಬುದಕ್ಕೆ ಕೋಶಗಳಲ್ಲಿ ವಿಷ್ಣು (**ಸ್ವಯಂಭೂಃ ಶಂಭುರಾದಿತ್ಯಃ** - ವಿಷ್ಣುಸಹಸ್ರನಾಮ), ಬ್ರಹ್ಮ - **ವೈಷ್ಣವಾನಾಂ ಯಥಾ ಶಂಭುಃ** - ಭಾಗವತ) ಹಾಗೂ ರುದ್ರ (**ಶಂಭುರೀಶಃ ಪಶುಪತಿಃ ಶಿವಃ**- ಅಮರಕೋಶ) ಎಂಬುದಾಗಿ ಅನೇಕಾರ್ಥಗಳಿವೆ. ಆದ್ದರಿಂದ ಶಂಭುವರೇಣ್ಯ ಎಂಬುದಕ್ಕೆ **ಶಂಭುಶ್ಚಾಸೌ ವರೇಣ್ಯಶ್ಚ** - ಶಂಭು ಹಾಗೂ ವರೇಣ್ಯನೂ ಆದ ವಿಷ್ಣು ಎಂದೂ, ಜೀವೋತ್ತಮನಾದ ಬ್ರಹ್ಮದೇವರಿಂದ ಭಜನೀಯ ಎಂದೂ, ಅದರಂತೆ ಶಂಭುಶಬ್ದವಾಚ್ಯರಾದ ರುದ್ರದೇವರಿಂದ ಸೇವ್ಯ ಎಂದೂ ಅರ್ಥವಾಗುವುದು. ಪರಶುರಾಮರೂಪ ಧನುರ್ವೇದಪ್ರವರ್ತಕರೂಪವಾಗಿದ್ದು, ರುದ್ರದೇವರಿಂದಲೂ ಪೂಜಿತವಾಗಿದೆ ಎಂದು ಭಾವ.

೬. **ರಾಘವ ರಾಘವ** - ಇದು ಆದರಾತಿಶಯದಿಂದಾಗಿ ಬಂದಿರುವ ದ್ವಿರುಕ್ತಿ ಎಂದು ತಿಳಿಯಬೇಕು.

೭. **ರಾಕ್ಷಸಶತ್ರೋ** - ಇಲ್ಲಿ ರಾಕ್ಷಸಶತ್ರು ಎಂದರೆ ರಾಕ್ಷಸರಾಗಿ ಜನಿಸಿದ್ದ ರಾವಣ - ಕುಂಭಕರ್ಣರನ್ನು ಸಂಹರಿಸಿದವನು ಎಂದರ್ಥ; ಇಲ್ಲಿ ರಾಕ್ಷಸ ಎಂಬ ಪದದಿಂದ

ಪ್ರಧಾನವಾಗಿ ರಾವಣ - ಕುಂಭಕರ್ಣರೆಂದು ಅರ್ಥ; ರಾಕ್ಷಸೌ ಎಂಬುದಾಗಿ ಮಹಾ-ಭಾರತತಾತ್ಪರ್ಯನಿರ್ಣಯದಲ್ಲಿ ಅವರಿಬ್ಬರು ರಾಕ್ಷಸರೆಂಬ ಅರ್ಥ ನಿರೂಪಿತವಾಗಿದೆ. ಆದ್ದರಿಂದ ರಾವಣನ ಸಂಹಾರದಿಂದ ಒದಗಿದ ಬ್ರಹ್ಮಹತ್ಯೆಯ ಪರಿಹಾರಕ್ಕಾಗಿ ಶ್ರೀರಾಮ ರಾಮೇಶ್ವರದಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಿದ ಎಂಬ ವಿವರ ಶಾಸ್ತ್ರಕ್ಕೆ ವಿರುದ್ಧವಾದುದು ಎಂಬ ವಿಶೇಷಾಂಶ ಸೂಚಿತವಾಗುವುದು.

೮. **ಮಾರುತಿವಲ್ಲಭ** - ಮಾರುತಿ ಎಂದರೆ ವಾಯುದೇವರ ಅವತಾರನಾದ ಹನುಮಂತ; ಅವನಿಗೆ ಸ್ವಾಮಿ ಹಾಗೂ ಅತ್ಯಂತ ಪ್ರಿಯ ಎಂದು ಮಾರುತಿವಲ್ಲಭ ಎಂಬುದಕ್ಕೆ ಅರ್ಥ. ಅದರಂತೆ ಮಾರುತಿಯನ್ನು ಗುರುವನ್ನಾಗಿ ಹೊಂದಿದವರಿಗೆ ದೊರೆಯುವವನು ಎಂಬ ವಿಶೇಷಾರ್ಥವೂ ಸಹ ಇದಕ್ಕಿದೆ.

೯. **ಜಾನಕಿಕಾಂತ** ಎಂದರೆ ಸೀತಾಪತಿ ಎಂದರ್ಥ. ಮಾರುತಿವಲ್ಲಭ ಎಂಬ ಪದದಿಂದ ಶ್ರೀರಾಮನು ಕ್ಷರಪುರುಷೋತ್ತಮ ಎಂದು, ಜಾನಕಿಕಾಂತ ಎಂಬ ಪದದಿಂದ ಶ್ರೀರಾಮ ಅಕ್ಷರಪುರುಷೋತ್ತಮ ಎಂದೂ, ಒಟ್ಟಾಗಿ ಸಾಕ್ಷಾತ್ ಪುರುಷೋತ್ತಮ ಎಂದೂ ಅರ್ಥವಾಗುವುದು.

## ಕೃಷ್ಣ-ಬುದ್ಧ

**ದೇವಕಿನಂದನ ಸುಂದರರೂಪ**
**ರುಗ್ಮಿಣಿವಲ್ಲಭ ಪಾಂಡವಬಂಧೋ ।**
**ದೈತ್ಯವಿಮೋಹಕ ನಿತ್ಯಸುಖಾದೇ**
**ದೇವಸುಬೋಧಕ ಬುದ್ಧಸ್ವರೂಪ ॥ ೭ ॥**

**ಪ** : ದೇವಕಿನಂದನ, ಸುಂದರರೂಪ, ರುಗ್ಮಿಣಿವಲ್ಲಭ, ಪಾಂಡವಬಂಧೋ, ದೈತ್ಯವಿಮೋಹಕ, ನಿತ್ಯಸುಖಾದೇ, ದೇವಸುಬೋಧಕ, ಬುದ್ಧಸ್ವರೂಪ।

**ಅ** : ದೇವಕಿನಂದನ, ಸುಂದರರೂಪ, ರುಗ್ಮಿಣಿವಲ್ಲಭ, ಪಾಂಡವಬಂಧೋ, ದೈತ್ಯವಿಮೋಹಕ, ನಿತ್ಯಸುಖಾದೇ, ದೇವಸುಬೋಧಕ, ಬುದ್ಧಸ್ವರೂಪ।

**ಪ್ರ.ಪ.** : **ದೇವಕಿನಂದನ** - ದೇವಕಿಗೆ ಆನಂದ ನೀಡಿದವನೇ!; **ಸುಂದರರೂಪ** - ಸುಂದರರೂಪನೇ!; **ರುಗ್ಮಿಣಿವಲ್ಲಭ** - ರುಗ್ಮಿಣೀಪತಿಯೇ!; **ಪಾಂಡವಬಂಧೋ** - ಪಾಂಡವರ ಬಂದುವೇ!; **ದೈತ್ಯವಿಮೋಹಕ** - ದೈತ್ಯರಿಗೆ ಮೋಹ ಕವಿಸಿದವನೇ!; **ನಿತ್ಯಸುಖಾದೇ** - ನಿತ್ಯಸುಖವಾದ ಮೋಕ್ಷಕ್ಕೆ ಕಾರಣನೇ!; **ದೇವಸುಬೋಧಕ** - ದೇವತೆಗಳಿಗೆ ಉತ್ತಮ ಜ್ಞಾನ ನೀಡಿದವನೇ!; **ಬುದ್ಧಸ್ವರೂಪ** - ಬುದ್ಧರೂಪಿಯಾದವನೇ!; (ಶ್ರೀಹರಿಯೇ ನಿನಗೆ ವಂದನೆ).

**ದೇವಕಿಗೆ ಆನಂದವಿತ್ತಯೊ ಲೋಕಸುಂದರಮೂರುತಿ**
**ರುಗ್ಮಿಣಿಗೆ ಪ್ರಿಯತಮನೆ ದೇವನೆ ಪಾಂಡವರ ನಿಜಬಂಧುವೆ।**
**ದೈತ್ಯವೃಂದಕೆ ಮೋಹ ಕವಿಸಿದ ನಿತ್ಯಸೌಖ್ಯಪ್ರದಾಯಕ**
**ದೇವವೃಂದಕೆ ತತ್ತ್ವಬೋಧಿಪ ಬುದ್ಧರೂಪಿಯೆ ದೇವನೆ ॥ ೭ ॥**

**ಅನು : ದೇವಕಿಗೆ ಆನಂದ ನೀಡಿದವನೇ!, ಸುಂದರ ರೂಪನೇ!, ರುಗ್ಮಿಣೀ-ಪತಿಯೇ!, ಪಾಂಡವರ ಬಂಧುವೇ, ದೈತ್ಯರಿಗೆ ಮೋಹ ಕವಿಸಿದವನೇ! ನಿತ್ಯಸುಖವಾದ ಮೋಕ್ಷಕ್ಕೆ ಕಾರಣನೇ! ದೇವತೆಗಳಿಗೆ ಉತ್ತಮ ಜ್ಞಾನ ನೀಡುವವನೇ! ಬುದ್ಧರೂಪಿಯಾದವನೇ! ನಿನಗೆ ವಂದನೆ.**

ವಿ : ೧. ಈ ಶ್ಲೋಕದಲ್ಲಿ ಶ್ರೀಹರಿಯ ಕೃಷ್ಣ ರೂಪ ಹಾಗೂ ಬುದ್ಧರೂಪಗಳ ವರ್ಣನೆ ಬಂದಿದೆ.

೨. **ದೇವಕಿನಂದನ** – ಇದನ್ನು ಈ ಸ್ತೋತ್ರದ ಮೊದಲನೆಯ ಶ್ಲೋಕದಲ್ಲಿ ಬಂದಿರುವ ದೇವಕಿನಂದನ ಎಂಬ ಪದದ ವಿವರಣೆಯಂತೆ ಅರ್ಥಮಾಡಿಕೊಳ್ಳಬೇಕು. ಅದರಂತೆ ಸುಂದರರೂಪ ಎಂಬ ಪದವನ್ನು ಸಹ.

೩.. **ರುಗ್ಮಿಣಿವಲ್ಲಭ** – ಇದನ್ನು ಹಿಂದಿನ ಶ್ಲೋಕದಲ್ಲಿನ ಜಾನಕಿವಲ್ಲಭ ಎಂಬ ಪದದಂತೆ ಅರ್ಥಮಾಡಿಕೊಳ್ಳಬೇಕು. ರುಗ್ಮಿಣೀ ಸಾಕ್ಷಾತ್ ಮಹಾಲಕ್ಷ್ಮಿಯ ಶ್ರೀರೂಪದ ಅವತಾರ-ವಾದ್ದರಿಂದ ಇದಕ್ಕೆ ಶ್ರೀವಲ್ಲಭ ಎಂದೂ ಅರ್ಥವಾಗುವುದು. ಮಹಾಲಕ್ಷ್ಮಿಯ ಶ್ರೀರೂಪವು ವೇದಾಭಿಮಾನಿದೇವತೆ. ಆದ್ದರಿಂದ ಈ ಪದದಿಂದ ಶ್ರೀರೂಪದಿಂದ ಅಭಿಮನ್ಯಮಾನವಾದ ವೇದಾದಿರೂಪಶಾಸ್ತ್ರವನ್ನು ಅರಿತವರಿಗೆ ಶ್ರೀಹರಿಯು ಲಭ್ಯನಾಗುವನು ಎಂದರ್ಥ. ಇದು **ಶಾಸ್ತ್ರಯೋನಿತ್ವಾತ್** ಎಂಬ ಬ್ರಹ್ಮಸೂತ್ರದ ಅರ್ಥವಾಗಿದೆ.

೪. **ಪಾಂಡವಬಂಧೋ** – ಪಾಂಡವರು ಎಂದರೆ ಯುಧಿಷ್ಠಿರ, ಭೀಮಸೇನ, ಅರ್ಜುನ ಹಾಗೂ ನಕುಲಸಹದೇವರು ಎಂದರ್ಥ. ಇದರಲ್ಲಿ ಭಾವಿಬ್ರಹ್ಮನಾದವ ವಾಯುದೇವರು ಎಂಬುದು ಭೀಮಸೇನನ ಹಿರಿಮೆ. ಅರ್ಜುನ ಇಂದ್ರಾವತಾರ, ಯುಧಿ-ಷ್ಠಿರ ಯಮಾವತಾರ, ನಕುಲಸಹದೇವರು ಅಶ್ವಿನೀದೇವತೆಗಳ ಅವತಾರ. ಇದರಿಂದ ಭಾವಿಬ್ರಹ್ಮರಾದ ವಾಯುದೇವರು ಮೊದಲಾದ ಸಕಲದೇವತೆಗಳಿಗೂ ಶ್ರೀಹರಿ ಬಂಧು, ಹಿತೈಷಿ ಎಂದು ಅರ್ಥವಾಗುವುದು. ಹಿಂದೆ ಮಾರುತಿವಲ್ಲಭ, ಜಾನಕಿಕಾಂತ ಎಂಬಲ್ಲಿ ತಿಳಿಸಿದಂತೆ ರುಗ್ಮಿಣಿವಲ್ಲಭ, ಪಾಂಡವಬಂಧೋ ಎಂಬ ಈ ಪದಗಳಿಂದ ಕ್ಷರಾಕ್ಷರಪುರು-ಷೋತ್ತಮನಾದವನು ಸಾಕ್ಷಾತ್ ಶ್ರೀಹರಿ ಎಂಬುದಾಗಿ ಭಗವದ್ಗೀತೆಯ ೧೮ನೆಯ ಅಧ್ಯಾಯದ ಮುಖ್ಯಸಂದೇಶವು ಸೂಚಿತವಾಗುವುದು.

೫. **ದೈತ್ಯವಿಮೋಹಕ** – ಶ್ರೀಹರಿಯು ಬುದ್ಧರೂಪದಿಂದ ಜಿನಾದಿದೈತ್ಯರನ್ನು ಮೋಹಗೊಳಿಸಿ, ಸನ್ಮಾರ್ಗಚ್ಯುತರನ್ನಾಗಿಸಿದ ಎಂಬ ವಿಶೇಷಾಂಶ ಈ ಪದದಿಂದ ಸೂಚಿತವಾಗುವುದು. ಮಹಾಭಾರತತಾತ್ಪರ್ಯನಿರ್ಣಯದ ೩೨ನೆಯ ಅಧ್ಯಾಯದಲ್ಲಿ ಈ ಬಗ್ಗೆ ವಿವರಣೆಗಳು ಬಂದಿವೆ.

೬. **ನಿತ್ಯಸುಖಾದೇ** – ಶ್ರೀಹರಿಯು ಉಪದೇಶಿಸಿದ ಬೌದ್ಧಮತವು ಮೇಲ್ನೋಟಕ್ಕೆ ಅವೈದಿಕವಾದ ದುರ್ಮತ ಎಂಬಂತೆ ತೋರುವುದು. ವಾಸ್ತವಿಕವಾಗಿ ಆಂತರ್ಯದಲ್ಲಿ ಅದು, ಪ್ರಶಾಂತವಿದ್ಯೆ ಎನ್ನಿಸಿ, ನಿತ್ಯಸುಖದ ನೆಲೆಯಾದ ಮೋಕ್ಷಕ್ಕೆ ಕಾರಣವಾಗುವುದು ಎಂಬ ವಿವರ ತಾತ್ಪರ್ಯನಿರ್ಣಯದಲ್ಲಿದೆ. ಅದನ್ನು ನಿತ್ಯಸುಖಾದೇ ಎಂಬ ಪದ ಸೂಚಿಸುವುದು.

೭. **ದೇವಸುಬೋಧಕ** – ನಿತ್ಯಸುಖಾದೇ ಎಂಬ ಪದದಿಂದ ತಿಳಿಯುವಂತೆ, ಆಂತರ್ಯದಲ್ಲಿ ದೇವಸ್ವಭಾವದ ಸಜ್ಜನರಿಗೆ ಉತ್ತಮವಾದ ಜ್ಞಾನಕ್ಕೆ ಕಾರಣವಾಗಿದೆ. ಅದನ್ನು ಉಪದೇಶಿಸಿದ ಹಿರಿಮೆ ಶ್ರೀಬುದ್ಧರೂಪದ್ದು ಎಂದು ಭಾವ. ಶ್ರೀಹರಿಯು ಬುದ್ಧರೂಪದಿಂದ ಜಿನ ಮೊದಲಾದ ದೈತ್ಯರಿಗೆ ದುರ್ಮತವನ್ನು ಬೋಧಿಸಿದ; ಅದರಂತೆ ಅದೇ ಮಾತುಗಳಿಂದ ದೇವತೆಗಳಿಗೆ ಉತ್ತಮ ಉಪದೇಶವನ್ನು ನೀಡಿದ; ಇದು ಅವನ ಹಿರಿಮೆ; ಇಂತಹ ಬುದ್ಧರೂಪದ ಶ್ರೀಹರಿಗೆ ವಂದನೆ ಮಾಡುವುದರಿಂದ ಅವನ ಅನುಗ್ರಹಕ್ಕೆ ಪಾತ್ರರಾಗುತ್ತೇವೆಂದು ಅರ್ಥ.

೮. **ಬುದ್ಧಸ್ವರೂಪ** – ಬುದ್ಧಸ್ವರೂಪವು ಅಸುರರಿಗೆ ಮೋಹಕರೂಪವಾಗಿದ್ದರೂ, ದೇವತೆಗಳಿಗೆ ಬೋಧಕರೂಪವೇ ಆಗಿದ್ದು, ವೇದವ್ಯಾಸ ಮೊದಲಾದ ರೂಪಗಳಂತೆ, ಶ್ರೀಹರಿಯ ಸಾಕ್ಷಾದ್ರೂಪವೇ ಆಗಿದೆ ಎಂಬುದು ಇದರ ಭಾವ.

### ಕಲ್ಕಿಸ್ತುತಿ

**ದುಷ್ಟಕುಲಾಂತಕ ಕಲ್ಕಿಸ್ವರೂಪ**
**ಧರ್ಮವಿವರ್ಧನ ಮೂಲಯುಗಾದೇ ।**
**ನಾರಾಯಣಾಮಲಕಾರಣಮೂರ್ತೇ**
**ಪೂರ್ಣಗುಣಾರ್ಣವ ನಿತ್ಯಸುಬೋಧ** ॥ ೮ ॥

**ಪ :** ದುಷ್ಟಕುಲಾಂತಕ, ಕಲ್ಕಿಸ್ವರೂಪ, ಧರ್ಮವಿವರ್ಧನ, ಮೂಲಯುಗಾದೇ, ನಾರಾಯಣ, ಅಮಲಕಾರಣಮೂರ್ತೇ, ಪೂರ್ಣ, ಗುಣಾರ್ಣವ, ನಿತ್ಯಸುಬೋಧ।

**ಅ :** ದುಷ್ಟಕುಲಾಂತಕ, ಧರ್ಮವಿವರ್ಧನ, ಮೂಲಯುಗಾದೇ, ಕಲ್ಕಿಸ್ವರೂಪ, ಅಮಲಕಾರಣಮೂರ್ತೇ, ಪೂರ್ಣ, ಗುಣಾರ್ಣವ, ನಿತ್ಯಸುಬೋಧ, ನಾರಾಯಣ ।

**ಪ್ರ.ಪ. : ದುಷ್ಟಕುಲಾಂತಕ** – ದುಷ್ಟರ ಕುಲವನ್ನು ಸಂಹರಿಸಿದವನೇ!; **ಧರ್ಮವಿವರ್ಧನ** – ಧರ್ಮವನ್ನು ಬಹಳವಾಗಿ ಹೆಚ್ಚಿಸಿದವನೇ!; **ಮೂಲಯುಗಾದೇ** – ಮೂಲಯುಗಕ್ಕೆ ಕಾರಣನಾದವನೇ!; **ಕಲ್ಕಿಸ್ವರೂಪ** – ಕಲ್ಕಿಸ್ವರೂಪನೇ!; **ಅಮಲಕಾರಣಮೂರ್ತೇ** – ನಿರ್ದೋಷಕಾರಣರೂಪನೇ!; **ಪೂರ್ಣ** – ಪರಿಪೂರ್ಣನೇ!; **ಗುಣಾರ್ಣವ** – ಗುಣಸಮುದ್ರನೇ!; **ನಿತ್ಯಸುಬೋಧ** – ನಿತ್ಯಪರಿಪೂರ್ಣಜ್ಞಾನಿಯೇ!; **ನಾರಾಯಣ** – ನಾರಾಯಣನೇ!; (ಶ್ರೀಹರಿಯೇ ನಿನಗೆ ವಂದನೆ).

**ದುಷ್ಟಕುಲವನು ದಮನಗೈಯ್ಯಲು ಕಲ್ಕಿರೂಪವ ತೋರುವಿ**
**ಧರ್ಮವನು ನೆಲೆಗೊಳಿಸಿ ಸಂತತ ಕೃತಯುಗಾದಿಯ ಮಾಡುವಿ ।**
**ಗುಣಸ್ವರೂಪಿಯೆ ವಿಮಲಚರಿತನೆ ಸರ್ವಕಾರಣವಿಗ್ರಹ**
**ಪೂರ್ಣಗುಣಗಳ ತುಂಬುಸಾಗರ ನಿತ್ಯನಿರ್ಮಲಜ್ಞಾನನೆ ॥ ೮ ॥**

**ಅನು : ದುಷ್ಟರ ಕುಲವನ್ನೇ ಸಂಹರಿಸಿದವನೇ! ಧರ್ಮವನ್ನು ಬಹಳವಾಗಿ ಹೆಚ್ಚಿಸಿದವನೇ! ಮೂಲಯುಗಕ್ಕೆ ಕಾರಣನಾದವನೇ! ಕಲ್ಕಿಸ್ವರೂಪನೇ! ನಿರ್ದೋಷ-ಕಾರಣರೂಪನೇ! ಪರಿಪೂರ್ಣನೇ! ಗುಣಸಮುದ್ರನೇ! ನಿತ್ಯಪರಿಪೂರ್ಣ-ಜ್ಞಾನಿಯೇ! ನಾರಾಯಣನೇ (ನಿನಗೆ ವಂದನೆ).**

ವಿ: ೧. ಈ ಶ್ಲೋಕದಲ್ಲಿ ಶ್ರೀಹರಿಯ ಬುದ್ಧರೂಪ ಹಾಗೂ ಅವನ ನಾರಾಯಣರೂಪಗಳ ವಿವರಣೆ ಬಂದಿದೆ.

೨. **ದುಷ್ಟಕುಲಾಂತಕ** – ಕಲಿಯುಗವು ಅಧರ್ಮಕ್ಕೆ ಕಾರಣವೆನ್ನಿಸುವ ಕಾಲ. ಅದರಿಂದಾಗಿಯೇ ದುಷ್ಟರಿಗೆ ಹೆಚ್ಚಿನ ಸಾಧನೆಗೆ ಇದು ಕಾರಣವಾಗುವುದು. ಇದರಲ್ಲಿ ದುರ್ಜನರದೇ ಪ್ರಾಚುರ್ಯ. ಆದರೂ ಸಜ್ಜನರು ಸಹ ಇದರ ಸೂಕ್ತ ಪ್ರಯೋಜನವನ್ನು ಪಡೆದು, ಸೂಕ್ತರೀತಿಯಲ್ಲಿ ಸಾಧನೆ ಮಾಡಿಕೊಳ್ಳಲು ಸಾಧ್ಯವಿದೆ. ಆದ್ದರಿಂದ ಇದನ್ನು ಒಂದು ರೀತಿಯಲ್ಲಿ ಸಜ್ಜನರ ಪಾಲಿಗೆ ಉತ್ತಮವಾದ ಸಾಧನೆಯ ಕಾಲ ಎಂದೇ ಭಾಗವತಾದಿ ಪುರಾಣಗಳು ಸಾರಿವೆ. ಆದರೆ, ಯುಗದ ಕೊನೆಯಲ್ಲಿ ದುಷ್ಟರ ಸಂಖ್ಯೆ ಅಪಾರವಾದಾಗ ಶ್ರೀಹರಿಯು ಕಲ್ಕಿರೂಪದಿಂದ ಅವತರಿಸಿ, ಅವರ ಕುಲವನ್ನೇ ನಾಶಪಡಿಸಿ, ಲೋಕದ ಕಲ್ಯಾಣಕ್ಕೆ ಕಾರಣನಾಗುವನು ಎಂದು ಭಾವ. ಅದರಲ್ಲೂ ಸಹ ದುಷ್ಟರಿಂದ **ಕು** ಎಂದರೆ ಭೂಮಿಯನ್ನು ತನ್ನ ವಶಕ್ಕೆ ತೆಗೆದುಕೊಂಡು, **ಅಂತಂ** – ಸಜ್ಜನರಿಗೆ ಕಲ್ಯಾಣವನ್ನುಂಟುಮಾಡುವವನು ಹಾಗೂ ಕಲಿಯುಗಕ್ಕೆ **ಅಂತಂ ಕರೋತಿ** ಕೊನೆಯನ್ನು ಉಂಟುಮಾಡುವವನು ಎಂದೂ ಅರ್ಥ.

೩. **ಕಲ್ಕಿಸ್ವರೂಪ** – ಕಲ್ಕಿರೂಪವು ಹೀಗೆ ಕಲಿಯ ನಾಶಕ್ಕೆ ಕಾರಣವಾಗುವುದರಿಂದಲೇ ಇದಕ್ಕೆ ಕಲ್ಕಿ ಎಂದು ಹೆಸರು: '[೧]**ಕಲೇಸ್ತು ಕಾತ್ಕಾರತ ಏವ ಕಲ್ಕೀ**' (ಮ.ಭಾ.ತಾ.ನಿ. ೩೨/೧೬೭). ಇದೂ ಸಹ ಮತ್ಸ್ಯಾದಿರೂಪಗಳಂತೆ ಶ್ರೀಹರಿಯ ಸಾಕ್ಷಾತ್‌ರೂಪ ಎಂಬುದು ಸ್ವರೂಪ ಎಂಬ ಪದದಿಂದ ಸೂಚಿತ.

೪. **ಧರ್ಮವಿವರ್ಧನ** – ಕಲಿಯನ್ನು ಹೀಗೆ ನಾಶಮಾಡುವ ಕಲ್ಕಿಯು ಧರ್ಮವನ್ನು ವಿಶೇಷವಾಗಿ ವರ್ಧಿಸುವಂತೆ ಮಾಡುವವನು ಎಂದರ್ಥ. ಹೀಗೆ ಅನ್ಯರಿಂದ ಸರ್ವಥಾ ಅಸಾಧ್ಯವೆನ್ನಿಸಿದ ಕಾರ್ಯವನ್ನು ಶ್ರೀಹರಿಯು ಕಲ್ಕಿರೂಪದಿಂದ ಮಾಡುವ ಮೂಲಕ ತನ್ನ ಅಸಾಮಾನ್ಯವಾದ ಹಿರಿಮೆಯನ್ನು ತೋರಿಸಿದನು ಎಂದು ಭಾವ. ಕಲಿಯುಗದಂತಹ ದುಷ್ಟಯುಗವನ್ನು ಶ್ರೀಹರಿ ನಾಶಮಾಡಲು ತೆಗೆದುಕೊಂಡ ಅವಧಿ ಕೇವಲ ಅರ್ಧದಿನ ಮಾತ್ರ ಎಂಬ ವಿಶೇಷಾಂಶ ಮಹಾಭಾರತತಾತ್ಪರ್ಯನಿರ್ಣಯದಲ್ಲಿದೆ.

೫. **ಮೂಲಯುಗಾದೇ** – ಮೂಲಯುಗ ಎಂದರೆ ಕೃತಯುಗ. ಕಲ್ಕಿರೂಪದಿಂದ ಹೀಗೆ ಕೊನೆಯದಾದ ಕಲಿಯುಗವನ್ನು ಮುಕ್ತಾಯಗೊಳಿಸಿ, ಮೂಲಯುಗವಾದ ಕೃತಯುಗಕ್ಕೆ ನಾಂದಿಹಾಡಿದ ಎಂದು ಇದರ ಭಾವ. ಇದನ್ನು ಧರ್ಮವಿವರ್ಧನಮೂಲಯುಗಾದೇ ಎಂದು ಒಂದು ಪದವನ್ನಾಗಿಯೂ ಅರ್ಥಮಾಡಿಕೊಳ್ಳಬಹುದು. ಆಗ ಇದಕ್ಕೆ ಧರ್ಮದ ವಿಶೇಷವೃದ್ಧಿಗೆ ಕಾರಣವಾಗುವಂತಹ ಕೃತಯುಗವನ್ನು ಶ್ರೀಹರಿ ಕಲ್ಕಿರೂಪದಿಂದ ಪ್ರಾರಂಭಮಾಡಿದ ಎಂದು ಅರ್ಥವಾಗುವುದು.

೬. **ನಾರಾಯಣಾಮಲಕಾರಣಮೂರ್ತೇ** – ಇದನ್ನು ನಾರಾಯಣ, ಅಮಲ, ಕಾರಣಮೂರ್ತೇ ಮೊದಲಾಗಿ ವಿಭಾಗಮಾಡಿಕೊಂಡೂ ಅರ್ಥಮಾಡಿಕೊಳ್ಳಬಹುದು. ಅಮಲಕಾರಣ ಎಂದರೆ ಹಿಂದೆ ತಿಳಿಸಿದಂತೆ ವಿಕಾರಕ್ಕೆ ಒಳಗಾಗದ ನಿಮಿತ್ತಕಾರಣ ಎಂದೂ, ಸ್ವತಂತ್ರಕಾರಣ ಎಂದೂ, ಮೂಲಕಾರಣ ಎಂದೂ ಅರ್ಥಮಾಡಿಕೊಳ್ಳಬಹುದು. ಅಮಲ ಎಂದರೆ ನಿರ್ಮಲ ಎಂದರ್ಥ. ಕಾರಣಮೂರ್ತೇ ಎನ್ನುವ ಮೂಲಕ ಕಾರಣವಾಗುವ ರೂಪವನ್ನು ಹೊಂದಿರುವವನು ಎಂದರೆ, ಶ್ರೀಹರಿಯು ಸಾಕಾರನೇ ಹೊರತು ನಿರಾಕಾರನಲ್ಲ ಎಂದು ಭಾವ.

---

೧. ನಾರಾಯಣಸ್ತೈಃ ಸ್ತುತಿಪೂರ್ವಮರ್ಥಿತೋ ಭವಾಯ ಲೋಕಸ್ಯ ಸ ಶಂಫಲಾಖ್ಯೇ ।
ಗ್ರಾಮೇ ಮುನೇರ್ವಿಷ್ಣುಯಶೋಭಿಧಸ್ಯ ಗೃಹೇ ಬಭೂವಾವಿರಚಿಂತ್ಯಶಕ್ತಿಃ ॥
ಕಲೇಸ್ತು ಕಾತ್ಕಾರತ ಏವ ಕಲ್ಕೀ ಜ್ಞಾನಂ ಕಲಂ ಕಂ ಸುಖಮೇವ ತದ್ವಾನ್ ।
ಕಲ್ಕೀತಿ ವಾ ತೇನ ಸಮಸ್ತದಸ್ಯುವಿನಾಶನಂ ತೇನ ದಿನಾದ್ ವ್ಯಧಾಯಿ ॥
ಅಧರ್ಮವೃತ್ತಂ ವಿಮುಖಂ ಹರೇಶ್ಚ ನಿಹತ್ಯ ನಿಃಶೇಷಜನಂ ತುರಂಗೀ ।
ಸಂಸ್ಥಾಪಯಾಮಾಸ ಸುಧರ್ಮಸೇತುಂ ಜ್ಞಾನಂ ಸ್ವಭಕ್ತಿಂ ಚ ನಿಜಪ್ರಜಾಸು ॥
– ಮ.ಭಾ.ತಾ.ನಿ.(೩೨/೧೬೦-೧೬೨)

೭. **ಪೂರ್ಣಗುಣಾರ್ಣವ** – ಪೂರ್ಣಗುಣಗಳ ಸಾಗರ ಎಂದರ್ಥ. ಪರಿಪೂರ್ಣ–ಗುಣಾರ್ಣವಾಯ ಎಂಬ ಮಹಾಭಾರತತಾತ್ಪರ್ಯನಿರ್ಣಯದ ಮಂಗಲಶ್ಲೋಕದ ಭಾವ ಇದಾಗಿದೆ. ಇದನ್ನು **ಪೂರ್ಣ, ಗುಣಾರ್ಣವ** ಎಂದು ಸಹ ವಿಭಾಗ ಮಾಡಿಕೊಳ್ಳಬಹುದು. **ಪೂರ್ಣ** ಎಂಬುದಕ್ಕೆ ದೇಶತಃ, ಕಾಲತಃ ಹಾಗೂ ಗುಣತಃ ಪೂರ್ಣ ಎಂಬ ಅರ್ಥ ಈಗಾಗಲೇ ನಿರೂಪಿತವಾಗಿದೆ. **ಗುಣಾರ್ಣವ** ಎಂದರೆ ಗುಣಸಮುದ್ರ, ಸಮುದ್ರದಂತೆ ನಾರಾಯಣನ ಗುಣಗಳು ಅನಂತ. ಅವನ ಒಂದೊಂದು ಗುಣವೂ ಸಹ ಪರಿಪೂರ್ಣ ಹಾಗೂ ಅನಂತ ಎಂದು ಅರ್ಥವಾಗುವುದು.

೮. **ನಿತ್ಯಸುಬೋಧ** – ಶ್ರೀಹರಿಯು ಸದಾಕಾಲ ನಿರ್ಮಲಜ್ಞಾನಪೂರ್ಣನಾದವನು. ಅವನಿಗೆ ಅಜ್ಞಾನಾದಿ ದೋಷಗಳು ಸರ್ವಥಾ ಲೇಶಮಾತ್ರವೂ ಇಲ್ಲ ಎಂದು ಭಾವ. ಇದನ್ನು **ನಿತ್ಯ, ಸುಬೋಧ** ಎಂದು ವಿಭಾಗ ಮಾಡಿಕೊಂಡೂ ಓದಬಹುದು. ನಿತ್ಯ ಎಂಬುದಕ್ಕೆ **ನಿತ್ಯೋ ನಿತ್ಯಾನಾಂ** ಎಂಬ ಶ್ರುತಿವಚನದಂತೆ ಪರಮನಿತ್ಯ, ಸ್ವತಂತ್ರನಿತ್ಯ ಎಂದೂ, ನಿತ್ಯವಸ್ತುಗಳಿಗೂ ನಿತ್ಯತ್ವಪ್ರದನಾಗಿ ನಿಯಾಮಕ ಎಂದೂ ಅರ್ಥಮಾಡಿಕೊಳ್ಳಬೇಕು. **ಸುಬೋಧ** ಎಂದರೆ ಪೂರ್ಣಜ್ಞಾನ ಉಳ್ಳವನು, ಮಿಥ್ಯಾಜ್ಞಾನಾದಿ ದೋಷವಿಲ್ಲದವನು ಎಂದು ಅರ್ಥಮಾಡಿಕೊಳ್ಳಬೇಕು. ಅದರಂತೆ ಸದಾ ತನ್ನ ಭಕ್ತರಿಗೆ ಯಥಾಯೋಗ್ಯವಾಗಿ ನಿರ್ಮಲಜ್ಞಾನವನ್ನೇ ನೀಡುವವನು ಎಂದೂ ಅರ್ಥಮಾಡಿಕೊಳ್ಳಬೇಕು.

೯. ದಶಾವತಾರಗಳ ಸ್ತವನದ ಕೊನೆಯಲ್ಲಿ ಮೂಲರೂಪವಾದ ನಾರಾಯಣರೂಪವನ್ನು ಸ್ತುತಿಸುವ ಮೂಲಕ ಶ್ರೀಹರಿಯ ಸಕಲರೂಪಗಳು ಸಹ ಮೂಲರೂಪವಾದ ನಾರಾಯಣರೂಪದಂತೆಯೇ ಪರಿಪೂರ್ಣ, ದೋಷದೂರ ಎಂದು ಸ್ತುತಿಸಬೇಕು ಎಂಬ ವಿಶೇಷಾಂಶವು ಸೂಚಿತವಾಗಿದೆ.

**ಆನಂದತೀರ್ಥಕೃತಾ ಹರಿಗಾಥಾ**
**ಪಾಪಹರಾ ಶುಭಾ ನಿತ್ಯಸುಖಾರ್ಥಾ** ॥ ೯ ॥

॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ದ್ವಾದಶಸ್ತೋತ್ರೇ ಷಷ್ಠೋಽಧ್ಯಾಯಃ ॥

**ಪ :** ಆನಂದತೀರ್ಥಕೃತಾ, ಹರಿಗಾಥಾ, ಪಾಪಹರಾ, ಶುಭಾ, ನಿತ್ಯಸುಖಾರ್ಥಾ ।

**ಅ :** ಆನಂದತೀರ್ಥಕೃತಾ, ಹರಿಗಾಥಾ, ಪಾಪಹರಾ, ಶುಭಾ, ನಿತ್ಯಸುಖಾರ್ಥಾ ।

**ಪ್ರ.ಪ. : ಆನಂದತೀರ್ಥಕೃತಾ** – ಆನಂದತೀರ್ಥರಿಂದ ರಚಿತವಾದ; **ಹರಿಗಾಥಾ** – ಈ ಶ್ರೀಹರಿಯ ಸ್ತೋತ್ರವು; **ಪಾಪಹರಾ** – ಪಾಪವನ್ನು ಪರಿಹರಿಸುವುದು; **ಶುಭಾ** – ಮಂಗಳವನ್ನು ನೀಡುವುದು; **ನಿತ್ಯಸುಖಾರ್ಥಾ** – ಮುಕ್ತಿಗೆ ಸಾಧನವಾಗುವುದು.

**ಮಧ್ವಮುನಿಗಳು ಭಕ್ತಿಭಾವದಿ ಬರೆದ ಶ್ರೀಹರಿಗೀತೆಯು ।**
**ತರಿದು ಪಾಪವ ನೀಡಿ ಮಂಗಳ ನಿತ್ಯಮುಕ್ತಿಯನೀವುದು ॥ ೯ ॥**

**॥ ದ್ವಾದಶಸ್ತೋತ್ರದ ಕನ್ನಡಪದ್ಯಾನುವಾದದಲ್ಲಿ ಆರನೆಯ ಅಧ್ಯಾಯ ಮುಕ್ತಾಯವಾಯಿತು ॥**

**ಅನು : ಆನಂದತೀರ್ಥರಿಂದ ರಚಿತವಾದ ಈ ಶ್ರೀಹರಿಯ ಸ್ತೋತ್ರವು ಪಾಪವನ್ನು ಪರಿಹರಿಸುವುದು, ಮಂಗಳವನ್ನು ನೀಡುವುದು, ಮುಕ್ತಿಗೆ ಸಾಧನವಾಗುವುದು.**

ವಿ : ೧. ಇದು ಶ್ರೀಹರಿಯನ್ನು ಕುರಿತ ಹರಿಗಾಥೆಯಾಗಿದೆ; ಇದನ್ನು ಬರೆದವರು ಆನಂದತೀರ್ಥರೆಂಬ ಹೆಸರಿನ ಮಧ್ವಾಚಾರ್ಯರು; ಇದು ಪಾಪಪರಿಹಾರಕವಾದುದು, ಮಂಗಳಕರವಾದುದು ಹಾಗೂ ಮುಕ್ತಿ ನೀಡುವಂತಹದ್ದು.

೨. **ಹರಿಗಾಥಾ – ಗಾಥಾ** ಎಂಬುದು ಪದ್ಯರಚನೆಯ ಒಂದು ಪ್ರಭೇದ. ಸ್ತೋತ್ರ ಎಂಬುದು ಇದರ ಮುಖ್ಯಾರ್ಥ; ಶ್ರೀಹರಿಯನ್ನು ಕುರಿತ ಗಾಥಾಪ್ರಕಾರಕ್ಕೆ ನೀಡುವ ರಚನೆ ಎಂಬುದು ಇದರ ಭಾವ.

೩. **ಪಾಪಹರಾ – ಪಾಪಹರಾ** ಎಂಬುದಕ್ಕೆ ಪಾಪಗಳನ್ನು ಪರಿಹರಿಸುವ ಕೃತಿ ಇದಾಗಿದೆ ಎಂದು ಅರ್ಥ. ಇದು ಸಕಲಪಾಪಗಳನ್ನೂ ಪರಿಹರಿಸುವ ಅಪಾರಸಾಮರ್ಥ್ಯದ ಕೃತಿ ಎಂದೂ ಭಾವ. ಪಾಪ ಎಂಬುದಕ್ಕೆ ಸಂಸ್ಕೃತದಲ್ಲಿ ಪಾಪಿ ಎಂಬ ಅರ್ಥವೂ ಇದೆ. ಆದರಿಂದ ಇದಕ್ಕೆ ಪಾಪಿಗಳನ್ನು ನಾಶಮಾಡುವ ಕೃತಿ ಎಂದೂ ಅರ್ಥವಾಗುವುದು. ಎಂದರೆ, ಇದರ ಪಠನೆಯಿಂದ ಪಾಪಿಗಳ ವಿನಾಶವಾಗಿ ಸಾಧನೆಯು ಮುಂದುವರೆಯುವುದು ಎಂದು ಭಾವ.

೪. **ಶುಭಾ – ಶುಭಾ** ಎಂಬುದಕ್ಕೆ ಮಂಗಳ, ಶುಭಕರ, ಮಂಗಳಕರ ಎಂದೂ ಅರ್ಥ. ಪಾಪಹರಾ ಎಂಬುದರಿಂದ ಇದು ಅನಿಷ್ಟನಿವೃತ್ತಿಗೆ ಕಾರಣ ಎಂಬ ಅರ್ಥ ಸೂಚಿತವಾದರೆ, ಶುಭ ಎಂಬ ಈ ಪದದಿಂದ ಇಷ್ಟಪ್ರಾಪ್ತಿಗೆ ಕಾರಣ ಎಂಬ ಅರ್ಥ ಸೂಚಿತವಾಗುವುದು.

೫. **ನಿತ್ಯಸುಖಾರ್ಥಾ** – ನಿತ್ಯಸುಖ ಎಂದರೆ ಮೋಕ್ಷ; ಪರಿಪೂರ್ಣವೂ, ನಿತ್ಯವೂ ಆದ ಸುಖದ ನೆಲೆ ಎಂಬುದು ಮೋಕ್ಷದ ಸ್ವರೂಪ. ಅಂತಹ ಮುಕ್ತಿಯ ಪ್ರಾಪ್ತಿಗೆ ಸಾಧನವಾಗುವ ವಿಶೇಷ ಸಾಮರ್ಥ್ಯ ಈ ಸ್ತೋತ್ರದ್ದು ಎಂದು ಭಾವ.

೬. **ಅರ್ಥ** ಎಂದರೆ ಪುರುಷಾರ್ಥ. ಧರ್ಮ, ಅರ್ಥ, ಕಾಮ ಹಾಗೂ ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳಲ್ಲಿ ಕೊನೆಯದಾದ ಮೋಕ್ಷವು ಪರಮಪುರುಷಾರ್ಥವಾಗಿದ್ದು, ನಿತ್ಯಪುರುಷಾರ್ಥ ಎಂಬ ಹಿರಿಮೆಯನ್ನು ಹೊಂದಿದೆ. ಅಂತಹ ಮೋಕ್ಷಕ್ಕೆ ಇದು ಸಾಧನವಾಗುವುದು ಎಂದು ಭಾವ.

೭. **ಶುಭಾಽನಿತ್ಯಸುಖಾರ್ಥಾ - ಶುಭಾ** ಹಾಗೂ **ಅನಿತ್ಯಸುಖಾರ್ಥಾ** ಎಂದೂ ವಿಭಾಗ ಮಾಡಿ ಓದಿಕೊಳ್ಳಬಹುದು. ಇದರಿಂದ ನಿತ್ಯಸುಖವಾದ ಮೋಕ್ಷಮಾತ್ರವಲ್ಲದೆ, ಅನಿತ್ಯಸುಖವಾದ ಐಹಿಕಸುಖಗಳು ಸಹ ಇದರಿಂದ ಲಭಿಸುವವು ಎಂಬ ವಿಶೇಷಾಂಶ ಸೂಚಿತವಾಗುವುದು. ಅನಿತ್ಯಸುಖಗಳು ಧರ್ಮ, ಅರ್ಥ ಹಾಗೂ ಕಾಮ ಎಂದರ್ಥ[೧]. ಶ್ರೀಹರಿಯ ಅನುಗ್ರಹವು ಮುಖ್ಯಫಲವಾದ ಮೋಕ್ಷಪ್ರಾಪ್ತಿಗೆ ಹೇಗೋ ಹಾಗೆ ಮೋಕ್ಷಫಲವೆನ್ನಿಸಿದ ಸ್ವರ್ಗಾದಿಗಳಿಗೂ ಸಾಧನ. ವ್ಯವಸಾಯವು ಮುಖ್ಯಫಲವಾದ ಧಾನ್ಯಪ್ರಾಪ್ತಿಗೆ ಹೇಗೆ ಸಾಧನವೋ ಹಾಗೆ ದನಕರುಗಳಿಗೆ ಉಪಯುಕ್ತವಾಗುವ ಹೊಟ್ಟಿನ ಪ್ರಾಪ್ತಿಗೂ ಹೇಗೆ ಸಾಧನವಾಗುವುದೋ ಹಾಗೆ ಎಂದು ತಿಳಿಯಬೇಕು:

**ತ್ರಿದಿವಾದಿ ಲಭ್ಯಮಪಿ ನಾಸ್ಯ ಫಲಂ ಕಥಿತಂ ಕೃಷೇರಿವ ಪಲಾಲಕುಲಮ್ ।**
**ಸ್ವಫಲಂ ತು ಮುಕ್ತಿಪದಮುಕ್ತಿಪದಂ ಶುಕಶಾರದಾದಿಪರಮಾರ್ಥವಿದಾಮ್ ॥**

- ಮಧ್ವವಿಜಯ (೧೧/೬)

ಒಟ್ಟಾಗಿ ಈ ಸ್ತೋತ್ರದ ಪಠನದಿಂದ ಧರ್ಮಾದಿಮೋಕ್ಷಾಂತಸಕಲಪುರುಷಾರ್ಥಗಳು ಸಹ ಲಭಿಸುವವು ಎಂದು ಭಾವ: **ಧರ್ಮಾದಿಮೋಕ್ಷಾಂತಪುಮರ್ಥಹೇತುಃ** (ಮ.ಭಾ.ತಾ.ನಿ. ೩೨/೧೮೦).

*****

೧. ಅನಿತ್ಯತ್ವಾತ್ ಸದುಃಖತ್ವಾನ್ನ ಧರ್ಮಾದ್ಯಾಃ ಪರಂ ಸುಖಮ್ ।
ಮೋಕ್ಷ ಏವ ಪರಾನಂದಃ ಸಂಸಾರೇ ಪರಿವರ್ತತಾಮ್ ॥ ಇತಿ ಭಾರತೇ । - ವಿಷ್ಣುತತ್ತ್ವನಿರ್ಣಯ

## ೭. ಸಪ್ತಮಾಧ್ಯಾಯ (ಶ್ರೀಸ್ತುತಿ)

**ವಿಶ್ವಸ್ಥಿತಿಪ್ರಲಯಸರ್ಗಮಹಾವಿಭೂತಿ-**
**ವೃತ್ತಿಪ್ರಕಾಶನಿಯಮಾವೃತಿಬಂಧಮೋಕ್ಷಾಃ।**
**ಯಸ್ಯಾ ಅಪಾಂಗಲವಮಾತ್ರತ ಊರ್ಜಿತಾ ಸಾ**
**ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ ॥ ೧ ॥**

**ಪ :** ವಿಶ್ವಸ್ಥಿತಿಪ್ರಲಯಸರ್ಗಮಹಾವಿಭೂತಿವೃತ್ತಿಪ್ರಕಾಶನಿಯಮಾವೃತಿಬಂಧ-ಮೋಕ್ಷಾಃ, ಯಸ್ಯಾಃ, ಅಪಾಂಗಲವಮಾತ್ರತಃ, ಊರ್ಜಿತಾ, ಸಾ, ಶ್ರೀಃ, ಯತ್ಕಟಾಕ್ಷಬಲವತೀ, ಅಜಿತಂ ನಮಾಮಿ।

**ಅ :** ಯಸ್ಯಾಃ, ಅಪಾಂಗಲವಮಾತ್ರತಃ, ವಿಶ್ವಸ್ಥಿತಿಪ್ರಲಯಸರ್ಗಮಹಾವಿಭೂತಿವೃತ್ತಿ-ಪ್ರಕಾಶನಿಯಮಾವೃತಿಬಂಧಮೋಕ್ಷಾಃ, ಸಾ, ಊರ್ಜಿತಾ, ಶ್ರೀಃ, ಯತ್ಕಟಾಕ್ಷಬಲವತೀ, ಅಜಿತಂ ನಮಾಮಿ।

**ಪ್ರ.ಪ. : ಯಸ್ಯಾಃ** – ಯಾರ; [೧]**ಅಪಾಂಗಲವಮಾತ್ರತಃ** – ಕುಡಿನೋಟದ ಲೇಶಮಾತ್ರದಿಂದ; **ವಿಶ್ವಸ್ಥಿತಿಪ್ರಲಯಸರ್ಗಮಹಾವಿಭೂತಿವೃತ್ತಿಪ್ರಕಾಶನಿಯಮಾವೃತಿ-ಬಂಧಮೋಕ್ಷಾಃ** – ಜಗತ್ತಿನ ಸ್ಥಿತಿ, ಪ್ರಲಯ, ಸೃಷ್ಟಿ, ಮಹಾಸಂಪತ್ತು, ಬದುಕು, ಜ್ಞಾನ, ನಿಯಮನ, ಅಜ್ಞಾನ, ಬಂಧ ಹಾಗೂ ಮೋಕ್ಷಗಳು (ಉಂಟಾಗುವವೋ); **ಸಾ** – ಅಂತಹ; **ಊರ್ಜಿತಾ** – ಶ್ರೇಷ್ಠಳಾದ; **ಶ್ರೀಃ** – ಮಹಾಲಕ್ಷ್ಮಿಯು; **ಯತ್ಕಟಾಕ್ಷಬಲವತೀ** – ಯಾರ ಕುಡಿನೋಟದಿಂದ ಬಲ ಪಡೆದಿರುವಳೋ; **ಅಜಿತಂ** – ಅಂತಹ ಅಜಿತನಾಮಕ ಶ್ರೀಕೃಷ್ಣನನ್ನು; **ನಮಾಮಿ** – ನಮಸ್ಕರಿಸುವೆನು.

**ಈ ಜಗದ ರಕ್ಷಣೆಯು ಸಂಹಾರಸೃಷ್ಟಿಗಳು ಮಿಗಿಲಾದ ಪರಮಭಾಗ್ಯ**
**ಜೀವನವು ಸುಜ್ಞಾನ ನಿಯಮನವು ಅಜ್ಞಾನ ಸಂಸಾರಬಂಧಮೋಕ್ಷ।**
**ಶ್ರೇಷ್ಠಳಾಗಿರುವಾರ ಕೊನೆಗಣ್ಣನೋಟಲವದಿಂದೆಲ್ಲ ನಡೆಯುತಿಹುದೊ**
**ಅಂಥ ಸಿರಿಹಿರಿರಮೆಗು ಚೆಲುನೋಟಲವದಿಂದ ಬಲವೀವ ಹರಿಗೆ ನಮನಂ ೧**

---

೧. ಸ್ವಸ್ಯಾಃ ಸ್ತ್ರಿಯಸ್ತ್ರಿಜಗತೋ ಜನಕೋ ಜನನ್ಯಾ ವಕ್ಷೋಽಧಿವಾಸಮಕರೋತ್ ಪರಮಂ ವಿಭೂತೇಃ।
ಶ್ರೀಃ ಸ್ವಾಃ ಪ್ರಜಾಃ ಸಕರುಣೇನ ನಿರೀಕ್ಷಣೇನ ಯತ್ರ ಸ್ಥಿತೈಧಯತ ಸಾಧಿಪತೀಂಸ್ತ್ರಿಲೋಕಾನ್ ॥
– ಭಾಗವತ (೮/೮/೨೫)

ಬ್ರಹ್ಮಾದಯೋ ಬಹುತಿಥಂ ಯದಪಾಂಗಮೋಕ್ಷಕಾಮಾ ಯಥೋಕ್ತವಿಧಿನಾ ಭಗವತ್ಪ್ರಪನ್ನಾಃ।
ಸಾ ಶ್ರೀಃ ಸ್ವವಾಸಮರವಿಂದವನಂ ವಿಹಾಯ ಯತ್ಪಾದಸೌಭಗಮಲಂ ಭಜತೇಽನುರಕ್ತಾ ॥
– ಭಾಗವತ(೧/೧೬/೩೩)

**ಅನು : ಯಾರ ಕುಡಿನೋಟದ ಲೇಶಮಾತ್ರದಿಂದ ಜಗತ್ತಿನ ಸ್ಥಿತಿ, ಪ್ರಲಯ, ಸೃಷ್ಟಿ, ಮಹಾಸಂಪತ್ತು, ಬದುಕು, ಜ್ಞಾನ, ನಿಯಮನ, ಅಜ್ಞಾನ, ಬಂಧ ಹಾಗೂ ಮೋಕ್ಷಗಳು ಉಂಟಾಗುವವೋ, ಅಂತಹ ಶ್ರೇಷ್ಠಳಾದ ಮಹಾಲಕ್ಷ್ಮಿಯು ಯಾರ ಕುಡಿನೋಟದಿಂದ ಬಲ ಪಡೆದಿರುವಳೋ, ಅಂತಹ ಅಜಿತನಾಮಕ ಶ್ರೀಕೃಷ್ಣನನ್ನು ನಮಸ್ಕರಿಸುವೆನು.**

ವಿ : ೧. ಮಹಾಲಕ್ಷ್ಮಿಯ ಅನನ್ಯವೆನ್ನಿಸುವ ಮಹಿಮೆಯ ವರ್ಣನೆ ಇದರಲ್ಲಿದೆ.

೨. ಜನ್ಮಾದ್ಯಸ್ಯ ಯತಃ ಎಂಬ ಬ್ರಹ್ಮಸೂತ್ರದಲ್ಲಿ ಹೇಳಲ್ಪಟ್ಟಿರುವ ಜಗತ್ತಿನ ಸೃಷ್ಟಿ ಮೊದಲಾದ ಸಮಸ್ತ ಕಾರ್ಯಗಳನ್ನು ಮಹಾಲಕ್ಷ್ಮಿಯು ಸಹ ತನ್ನ ಕಟಾಕ್ಷ ಲೇಶಮಾತ್ರದಿಂದಲೇ ಮಾಡಬಲ್ಲ ಮಹಾಸಾಮರ್ಥ್ಯವುಳ್ಳವಳು ಎಂದರ್ಥ.

೩. ಮಹಾಲಕ್ಷ್ಮಿಯು ಇಂತಹ ಮಹತ್ಕಾರ್ಯವನ್ನು ಕೇವಲ ಕುಡಿನೋಟಲೇಶಮಾತ್ರದಿಂದ ಮಾಡಬಲ್ಲ ಮಹಾದೇವತೆ ಎಂದು ಭಾವ.

೪. ಆದರೆ ಮಹಾಲಕ್ಷ್ಮಿಯ ಅಂತಹ ಸಾಮರ್ಥ್ಯಕ್ಕೆ ಶ್ರೀಹರಿಯ ಕೃಪಾಕಟಾಕ್ಷವೇ ಕಾರಣ. ಆದ್ದರಿಂದ ಅವನು ಸರ್ವೋತ್ತಮ ಎಂದು ಭಾವ.

೫. ಇದು ಋಗ್ವೇದದ ಅಂಭೃಣೀಸೂಕ್ತದ ಅರ್ಥವಾಗಿದೆ. ಇದರಂತೆ ಇದರಲ್ಲಿ ಬ್ರಹ್ಮಾದಿಗಳನ್ನು ಸೃಷ್ಟಿ ಮಾಡುವ ಮಹಾಸಾಮರ್ಥ್ಯ ವರ್ಣಿತವಾಗಿರುವುದು ವಿಶೇಷ.

೬. ಶ್ರೀಹರಿಯು ಹೇಗೆ ಅನಾದಿಕಾಲದಿಂದ ಅನಂತಕಾಲದವರೆಗೆ ಇರುವನೋ ಹಾಗೆ ಮಹಾಲಕ್ಷ್ಮಿಯು ಸಹ ಒಬ್ಬಳೇ ಎಂಬುದು ವಿಶೇಷ. ಎಂದರೆ ಅವರಿಬ್ಬರು ಅನಾದಿ ಹಾಗೂ ನಿತ್ಯ ಎಂಬ ವಿಶೇಷಾಂಶ ತಿಳಿಯುವುದು. ಮಹಾಲಕ್ಷ್ಮಿಯು ಸಹ ಶ್ರೀಹರಿಯಂತೆ ನಿತ್ಯಮುಕ್ತಳು, ನಿರ್ವಿಕಾರಳು, ಸರ್ವಜ್ಞಳು, ದೇಶತಃ, ಕಾಲತಃ ವ್ಯಾಪ್ತಳು, ಅಕ್ಷರಪುರುಷಳು, ಅವ್ಯಕ್ತತತ್ತ್ವದ ಅಭಿಮಾನಿದೇವತೆ, ಅವ್ಯಾಕೃತಾಕಾಶಕ್ಕೆ ಸಹ ಅಧಿದೇವತೆ, ಮೂಲಜಡಪ್ರಕೃತಿಗೆ ಒಡತಿ – ಹೀಗೆ ಬಹುಬಗೆಯ ಹಿರಿಮೆ ಮಹಾಲಕ್ಷ್ಮಿಯದು ಎಂದು ತಿಳಿಯಬೇಕು. ಮಹಾಲಕ್ಷ್ಮಿಯ ಇಂತಹ ಮಹಾಮಹಿಮೆ ಶ್ರೀಹರಿಯ ಕಟಾಕ್ಷದ ಫಲ ಎಂಬ ಮಾತಿನಲ್ಲಿ ಶ್ರೀಹರಿಯ ಅಸಾಮಾನ್ಯವಾದ ಹಿರಿಮೆ ಸೂಚಿತವಾಗಿದೆ.

**ಬ್ರಹ್ಮೇಶಶಕ್ರರವಿಧರ್ಮಶಶಾಂಕಪೂರ್ವ-**
**ಗೀರ್ವಾಣಸಂತತಿರಿಯಂ ಯದಪಾಂಗಲೇಶಮ್ ।**
**ಆಶ್ರಿತ್ಯ ವಿಶ್ವವಿಜಯಂ ವಿಸೃಜತ್ಯಚಿಂತ್ಯಾ**
**ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ ॥ ೨ ॥**

**ಪ :** ಬ್ರಹ್ಮೇಶಶಕ್ರರವಿಧರ್ಮಶಶಾಂಕಪೂರ್ವಗೀರ್ವಾಣಸಂತತಿಃ, ಇಯಂ ಯದಪಾಂಗಲೇಶಮ್, ಆಶ್ರಿತ್ಯ, ವಿಶ್ವವಿಜಯಮ್, ವಿಸೃಜತಿ, ಅಚಿಂತ್ಯಾ, ಶ್ರೀಃ, ಯತ್ಕಟಾಕ್ಷಬಲವತೀ, ಅಜಿತಂ ನಮಾಮಿ।

**ಅ :** ಇಯಮ್, ಬ್ರಹ್ಮೇಶಶಕ್ರರವಿಧರ್ಮಶಶಾಂಕಪೂರ್ವಗೀರ್ವಾಣಸಂತತಿಃ, ಯದಪಾಂಗಲೇಶಮ್, ಆಶ್ರಿತ್ಯ, ವಿಶ್ವವಿಜಯಮ್, ವಿಸೃಜತಿ, ಅಚಿಂತ್ಯಾ, ಸಾ, ಶ್ರೀಃ, ಯತ್ಕಟಾಕ್ಷಬಲವತೀ, ಅಜಿತಂ, ನಮಾಮಿ।

**ಪ್ರ.ಪ. : ಇಯಮ್** – ಈ; **ಬ್ರಹ್ಮೇಶಶಕ್ರರವಿಧರ್ಮಶಶಾಂಕಪೂರ್ವಗೀರ್ವಾಣ-ಸಂತತಿಃ** – ಬ್ರಹ್ಮ, ರುದ್ರ, ಇಂದ್ರ, ಸೂರ್ಯ, ಯಮ, ಚಂದ್ರ ಮೊದಲಾದ ದೇವತೆಗಳ ಸಮುದಾಯವು; **ಯದಪಾಂಗಲೇಶಮ್** – ಯಾರ ಕುಡಿನೋಟಲೇಶವನ್ನು ; **ಆಶ್ರಿತ್ಯ** – ಆಶ್ರಯಿಸಿ; **ವಿಶ್ವವಿಜಯಮ್** – ವಿಶ್ವಕ್ಕೆ ವಿಜಯವನ್ನು; **ವಿಸೃಜತಿ** – ಉಂಟು ಮಾಡುವುದೋ; **ಅಚಿಂತ್ಯಾ** – ಚಿಂತನೆಗೆ ಎಟುಕದ ಅಂತಹ; **ಶ್ರೀಃ** – ಮಹಾಲಕ್ಷ್ಮಿಯು; **ಯತ್ಕಟಾಕ್ಷಬಲವತೀ** – ಯಾರ ಕುಡಿನೋಟದಿಂದ ಬಲ ಪಡೆದಿರುವಳೋ; **ಅಜಿತಂ** – ಅಂತಹ ಅಜಿತ ನಾಮಕ ಶ್ರೀಕೃಷ್ಣನನ್ನು; **ನಮಾಮಿ** – ನಮಸ್ಕರಿಸುವೆನು.

**ಚತುರಾಸ್ಯಗೌರೀಶದೇವೇಂದ್ರರವಿಧರ್ಮಚಂದ್ರಮರು ಆದಿಯಾದ**
**ದಿವಿಜವೃಂದದ ಸರಣಿ ಈ ಭುವನಕಾರ್ಯಗಳ ಚಿಂತನೆಗು ಎಟಕದಿರುವ।**
**ಆರ ಕೊನೆಗಣ್ಣಲವನೋಟವನು ಆಶ್ರಯಿಸಿ ನಿರುತದಲಿ ನಡೆಸುತಿಹುದೊ**
**ಅಂಥ ಸಿರಿಹಿರಿರಮೆಗು ಚೆಲುನೋಟಲವದಿಂದ ಬಲವೀವ ಹರಿಗೆ ನಮನಂ ೨**

**ಅನು : ಬ್ರಹ್ಮ, ರುದ್ರ, ಇಂದ್ರ, ಸೂರ್ಯ, ಯಮ, ಚಂದ್ರ ಮೊದಲಾದ ದೇವತೆಗಳ ಸಮುದಾಯವು ಯಾರ ಕುಡಿನೋಟಲೇಶವನ್ನು ಆಶ್ರಯಿಸಿ ವಿಶ್ವಕ್ಕೆ ವಿಜಯವನ್ನು ಉಂಟು ಮಾಡುವುದೋ, ಚಿಂತನೆಗೆ ಎಟುಕದ ಅಂತಹ ಮಹಾಲಕ್ಷ್ಮಿಯು ಯಾರ ಕುಡಿನೋಟದಿಂದ ಬಲ ಪಡೆದಿರುವಳೋ, ಅಂತಹ ಅಜಿತನಾಮಕ ಶ್ರೀಕೃಷ್ಣನನ್ನು ನಮಸ್ಕರಿಸುವೆನು.**

ವಿ : ೧. ಬ್ರಹ್ಮಾದಿದೇವತೆಗಳು ಸಹ ಯಾರ ಕುಡಿನೋಟವನ್ನು ಆಶ್ರಯಿಸಿ ಚಿಂತನೆಗೆ ಎಟುಕದ ವಿಶ್ವದ ಜಯವನ್ನು ಸಾಧಿಸಿರುವರೋ ಅಂತಹ ಮಹಾಲಕ್ಷ್ಮಿಯು ಯಾರ ಕಟಾಕ್ಷವನ್ನು ಆಶ್ರಯಿಸಿ ಅಂತಹ ಸಾಮರ್ಥ್ಯವನ್ನು ಹೊಂದಿರುವಳೋ ಅಂತಹ ಶ್ರೀಕೃಷ್ಣನಿಗೆ ನಮಸ್ಕಾರ ಎಂದರ್ಥ.

೨. ಬ್ರಹ್ಮ ಜಗತ್ತಿನ ಸೃಷ್ಟಿಕರ್ತ, ಶಿವ ಲಯಕರ್ತ, ಇಂದ್ರ ತ್ರಿಲೋಕಾಧಿಪತಿ, ಸೂರ್ಯ ಲೋಕವನ್ನೇ ಬೆಳಗುವವನು, ಯಮ ನರಕಾಧಿಪತಿ, ಚಂದ್ರ ರಾತ್ರಿಯನ್ನು ಬೆಳಗುವವನು

ಹಾಗೂ ಉತ್ತರದಿಕ್ಕಿಗೆ ಅಧಿಪತಿ; ಇಂತಹ ಮಹಾಸಾಮರ್ಥ್ಯವನ್ನು ಆಯಾ ದೇವತೆಗಳಿಗೆ ತನ್ನ ಕುಡಿನೋಟದಿಂದಲೇ ನೀಡಬಲ್ಲ ಹಿರಿಮೆ ಮಹಾಲಕ್ಷ್ಮಿಯದು. ಆದ್ದರಿಂದ ಅವರು ಬ್ರಹ್ಮಾದಿಸಕಲರಿಂದಲೂ ಮಿಗಿಲಾದವರು ಎಂದು ಭಾವ. ಆದರೆ, ಅಂತಹ ಮಹಾಲಕ್ಷ್ಮಿಗೂ ತನ್ನ ಕುಡಿನೋಟದಿಂದಲೇ ಬಲ ನೀಡುವ ಮಹಾಸಾಮರ್ಥ್ಯ ಶ್ರೀಹರಿಯದು. ಆದ್ದರಿಂದ ಅವನು ಸರ್ವೋತ್ತಮ ಎಂದರ್ಥ.

೩. ಇಲ್ಲಿಯ ವಿಶ್ವವಿಜಯ – ಜಗತ್ತಿಗೆ ಉಂಟಾಗುವ ಸಕಲಬಗೆಯ ಕಾರ್ಯಗಳು ಎಂದರ್ಥ.

೪. ಇದು ಅಂಭೃಣೀಸೂಕ್ತದ ಈ ಕೆಳಗಿನ ಮಂತ್ರದ ಅರ್ಥವಾಗಿದೆ:

**ಯಂ ಕಾಮಯೇ ತಂ ತಮುಗ್ರಂ ಕೃಣೋಮಿ ತಂ ಬ್ರಹ್ಮಾಣಂ ...**

**ಧರ್ಮಾರ್ಥಕಾಮಸುಮತಿಪ್ರಚಯಾದ್ಯಶೇಷ-**
**ಸನ್ಮಂಗಲಂ ವಿದಧತೇ ಯದಪಾಂಗಲೇಶಮ್ ।**
**ಆಶ್ರಿತ್ಯ ತತ್ಪ್ರಣತಸತ್ಪ್ರಣತಾ [೧]ಅಪೀಡ್ಯಾಃ**
**ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ ॥ ೩ ॥**

**ಪ** : ಧರ್ಮಾರ್ಥಕಾಮಸುಮತಿಪ್ರಚಯಾದ್ಯಶೇಷಸನ್ಮಂಗಲಮ್, ವಿದಧತೇ, ಯದಪಾಂಗಲೇಶಮ್, ಆಶ್ರಿತ್ಯ, ತತ್ಪ್ರಣತಸತ್ಪ್ರಣತಾಃ, ಅಪಿ, ಈಡ್ಯಾಃ, ಶ್ರೀಃ, ಯತ್ಕಟಾಕ್ಷಬಲವತೀ, ಅಜಿತಮ್, ನಮಾಮಿ।

**ಅ** : ಈಡ್ಯಾಃ, ತತ್ಪ್ರಣತಸತ್ಪ್ರಣತಾಃ, ಅಪಿ, ಧರ್ಮಾರ್ಥಕಾಮಸುಮತಿಪ್ರಚಯಾದ್ಯ-ಶೇಷಸನ್ಮಂಗಲಮ್, ಯದಪಾಂಗಲೇಶಮ್, ಆಶ್ರಿತ್ಯ, ವಿದಧತೇ, ಶ್ರೀಃ, ಯತ್ಕಟಾಕ್ಷಬಲವತೀ, ಅಜಿತಮ್, ನಮಾಮಿ।

**ಪ್ರ.ಪ.** : **ಈಡ್ಯಾಃ** – ಸ್ತುತ್ಯರಾದ ದೇವತೆಗಳೂ; **ತತ್ಪ್ರಣತಸತ್ಪ್ರಣತಾಃ** – ಅವರಿಗೆ ಶರಣಾದ ಸಜ್ಜನರಿಂದ ಪ್ರಣತರಾದವರು; **ಅಪಿ** – ಸಹ; **ಧರ್ಮಾರ್ಥಕಾಮಸುಮತಿಪ್ರಚಯಾದ್ಯ-ಶೇಷಸನ್ಮಂಗಲಮ್** – ಧರ್ಮ, ಅರ್ಥ, ಕಾಮ, ಜ್ಞಾನ, ಸಂಪತ್ತು ಮೊದಲಾದ ಸಕಲ ಸನ್ಮಂಗಳವನ್ನು; **ಯದಪಾಂಗಲೇಶಮ್** – ಯಾರ ಕುಡಿನೋಟಲೇಶವನ್ನು; **ಆಶ್ರಿತ್ಯ** – ಆಶ್ರಯಿಸಿ; **ವಿದಧತೇ** – ಉಂಟುಮಾಡುವರೋ; (ಸಾ–ಅಂತಹ) **ಶ್ರೀಃ**

೧. ತತ್ಪ್ರಣತಸತ್ಪ್ರಣತಾ ಅಪಿ ಯದಪಾಂಗಲೇಶಮಾಶ್ರಿತ್ಯ ಧರ್ಮಾದಿಕಂ ವಿದಧತ ಇತ್ಯುಕ್ತ್ಯಾ ಸ್ವಾವರೇಭ್ಯೋಽಪಿ ಧರ್ಮಾದಿದಾನೇ ಲಕ್ಷ್ಮ್ಯನುಗ್ರಹಮಂತರಾ ಸಾಮರ್ಥ್ಯಾಭಾವೋ ದರ್ಶಿತಃ। – ವಿಶ್ವ.ವ್ಯಾ.

- ಮಹಾಲಕ್ಷ್ಮಿಯು; **ಯತ್ಕಟಾಕ್ಷಬಲವತೀ** - ಯಾರ ಕುಡಿನೋಟದಿಂದ ಬಲ ಪಡೆದಿರುವಳೋ; **ಅಜಿತಂ** - ಅಂತಹ ಅಜಿತ ನಾಮಕ ಶ್ರೀಕೃಷ್ಣನನ್ನು; **ನಮಾಮಿ** - ನಮಸ್ಕರಿಸುವೆನು.

**ಧರ್ಮಾರ್ಥಕಾಮಗಳ ಸುಜ್ಞಾನವೈಭವವ ಸಂಪೂರ್ಣಮಂಗಲವನು**
**ಧರ್ಮಾದಿಗಳಲಿ ನಿರತರಾಗಿರುವ ಸಂತಜನ ಮಣಿವಂಥ ದೇವವೃಂದ ।**
**ಆರ ಕೊನೆಗಣ್ಣಲವನೋಟವನು ಆಶ್ರಯಿಸಿ ನಿರುತದಲಿ ನೀಡುತಿಹುದೊ**
**ಆ ದೇವಿ ಸಿರಿರಮೆಗು ಚೆಲುನೋಟಲವದಿಂದ ಬಲವೀವ ಹರಿಗೆ ನಮನಂ ೩**

**ಅನು : ಯಾರ ಕುಡಿನೋಟದ ಲೇಶವು ಸಹ ಧರ್ಮ, ಅರ್ಥ, ಕಾಮ, ಜ್ಞಾನ, ಸಂಪತ್ತು ಮೊದಲಾದ ಸಕಲ ಸನ್ಮಂಗಳವನ್ನು ಉಂಟುಮಾಡುವುದೋ, ಯಾರಿಗೆ ಶರಣಾದ ಸಜ್ಜನರು ಸಹ ಪ್ರಣತರಾಗಿ, ಸ್ತುತ್ಯರಾಗುವರೋ, ಅಂತಹ ಮಹಾಲಕ್ಷ್ಮಿಯು ಯಾರ ಕುಡಿನೋಟದಿಂದ ಬಲ ಪಡೆದಿರುವಳೋ ಅಂತಹ ಅಜಿತನಾಮಕ ಶ್ರೀಕೃಷ್ಣನನ್ನು ನಮಸ್ಕರಿಸುವೆನು.**

ವಿ : ೧. ಹಿಂದಿನ ಶ್ಲೋಕದಲ್ಲಿ ಬ್ರಹ್ಮಾದಿದೇವತೆಗಳು ತಮ್ಮ ಸೃಷ್ಟಿಕರ್ತೃತ್ವ ಮೊದಲಾದ ಸಾಮರ್ಥ್ಯವನ್ನು ಮಹಾಲಕ್ಷ್ಮಿಯ ಅನುಗ್ರಹದ ಲವಲೇಶದಿಂದಾಗಿಯೇ ಪಡೆದಿರುವರು ಎಂಬ ವಿವರ ನಿರೂಪಿತವಾಗಿದೆ. ಈ ಶ್ಲೋಕದಲ್ಲಿ ಬ್ರಹ್ಮಾದಿಗಳು ಮಾತ್ರವಲ್ಲದೆ, ಮಹಾಲಕ್ಷ್ಮಿಗೆ ಶರಣಾದ ಭಕ್ತಜನರ ಅನುಗ್ರಹಕ್ಕೆ ಪಾತ್ರರಾದವರೂ ಸಹ ಲೋಕಕ್ಕೆ ಧರ್ಮಾದಿ ಪುರುಷಾರ್ಥಗಳನ್ನು, ಸನ್ಮತಿಯನ್ನು, ಸಮೃದ್ಧಿಯನ್ನು ಹಾಗೂ ಇತರ ಸಕಲ ಸನ್ಮಂಗಳಗಳನ್ನು ನೀಡುವ ಸಾಮರ್ಥ್ಯವಿಶೇಷವನ್ನು ಪಡೆಯುವರು ಎಂಬ ಮತ್ತೊಂದು ವಿವರ ನಿರೂಪಿತವಾಗಿದೆ.

೨. ಮಹಾಲಕ್ಷ್ಮಿಯನ್ನು ಶಾಸ್ತ್ರೋಕ್ತಕ್ರಮದಲ್ಲಿ ಆರಾಧಿಸುವ ಭಕ್ತಜನತೆಯ ಅನುಗ್ರಹವು ಸಹ ಲೋಕಕಲ್ಯಾಣಕ್ಕೆ ಸಾಧನ ಎಂದು ಭಾವ.

೩. ಅಶೇಷಸನ್ಮಂಗಳಗಳನ್ನು ಹೀಗೆ ನೀಡುವುದರಿಂದಲೇ ಮಹಾಲಕ್ಷ್ಮಿಗೆ ಮಂಗಲದೇವತಾ ಎಂಬ ವಿಶೇಷವಾದ ಹೆಸರಿದೆ: **ದೇವೀ ಮಂಗಲದೇವತಾ** (ಯುಕ್ತಿಮಲ್ಲಿಕಾ).

೪. ಲಕ್ಷ್ಮೀಕಟಾಕ್ಷವಿದ್ದವರಂತೆ ಅವರ ನಿಕಟವರ್ತಿಗಳು ಸಹ ಅನೇಕ ಬಗೆಯಲ್ಲಿ ಅಪೂರ್ವ ಸಾಧನೆಗಳನ್ನು ಮಾಡುವುದು ಲೋಕದಲ್ಲಿ ಪ್ರತ್ಯಕ್ಷ ಕಂಡಿರುವ ವಿವರ. ಧನವಂತರನ್ನು ಜನರು ಕೊಂಡಾಡುವುದು, ಹಿಂಬಾಲಿಸಿ ನಡೆಯುವುದು, ಅವರ ದೋಷಗಳನ್ನು ಸಹ ಗುಣಗಳನ್ನೆಂಬಂತೆ ಪ್ರಶಂಸಿಸುವುದು, ಅವರ ಅಕಾರ್ಯಗಳನ್ನು ಸತ್ಕಾರ್ಯಗಳನ್ನೆಂಬಂತೆ ಸತ್ಕರಿಸುವುದು ಕಣ್ಣಾರೆ ಕಾಣುವ ಸಂಗತಿ. ಇದು ಜನಗಳಲ್ಲಿ ಭ್ರಷ್ಟಾಚಾರದ ಸಂಪಾದನೆ

ಇದ್ದವರಲ್ಲೂ ಕಾಣುವ ವಿಶೇಷತೆ. ಆದರೆ ಧ್ರುವ, ಪ್ರಹ್ಲಾದಾದಿ ಮಹಾಭಕ್ತರು ಸಕಲ ಬಗೆಯ ಸುಖಸಮೃದ್ಧಿಯನ್ನು ಹೊಂದಿದ್ದು, ತಮ್ಮನ್ನು ಆಶ್ರಯಿಸಿದವರಿಗೂ ಕಲ್ಯಾಣವನ್ನುಂಟು ಮಾಡಿದ ಮಹನೀಯರು. ಇದರಿಂದ ಸಾಮಾನ್ಯಧನವಂತರೇ ಲೋಕದಲ್ಲಿ ಮಾನ್ಯತೆ ಪಡೆಯುವಾಗ, ಶಾಸ್ತ್ರೋಕ್ತವಾಗಿ ಮಹಾಲಕ್ಷ್ಮಿಯನ್ನು ಆಶ್ರಯಿಸಿ ಶ್ರೀಮಂತರೆನ್ನಿಸಿದವರು ಲೋಕಕಲ್ಯಾಣ ಮಾಡುವುದು ಸುನಿಶ್ಚಿತ ಎಂಬುದು ಇದರ ತಾತ್ಪರ್ಯ.

**ಷಡ್ವರ್ಗನಿಗ್ರಹನಿರಸ್ತಸಮಸ್ತದೋಷಾ**
**ಧ್ಯಾಯಂತಿ ವಿಷ್ಣುಮೃಷಯೋ ಯದಪಾಂಗಲೇಶಮ್ ।**
**ಆಶ್ರಿತ್ಯ ಯಾನಪಿ ಸಮೇತ್ಯ ನ ಯಾತಿ ದುಃಖಂ**
**ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ ॥ ೪ ॥**

**ಪ :** ಷಡ್ವರ್ಗನಿಗ್ರಹನಿರಸ್ತಸಮಸ್ತದೋಷಾಃ, ಧ್ಯಾಯಂತಿ, ವಿಷ್ಣುಮ್, ಋಷಯಃ, ಯದಪಾಂಗಲೇಶಮ್, ಆಶ್ರಿತ್ಯ, ಯಾನ್, ಅಪಿ, ಸಮೇತ್ಯ, ನ, ಯಾತಿ, ದುಃಖಮ್, ಶ್ರೀಃ, ಯತ್ಕಟಾಕ್ಷಬಲವತೀ, ಅಜಿತಮ್, ನಮಾಮಿ।

**ಅ :** ಯಾನ್, ಸಮೇತ್ಯ, ಅಪಿ, ದುಃಖಮ್, ನ, ಯಾತಿ, ಷಡ್ವರ್ಗನಿಗ್ರಹನಿರಸ್ತಸಮಸ್ತ-ದೋಷಾಃ, ಋಷಯಃ, ಯದಪಾಂಗಲೇಶಮ್, ಆಶ್ರಿತ್ಯ, ವಿಷ್ಣುಮ್, ಧ್ಯಾಯಂತಿ, ಶ್ರೀಃ, ಯತ್ಕಟಾಕ್ಷಬಲವತೀ, ಅಜಿತಮ್, ನಮಾಮಿ।

**ಪ್ರ.ಪ. : ಯಾನ್** – ಯಾರನ್ನು; **ಸಮೇತ್ಯ** – ಹೊಂದಿಯೂ; **ಅಪಿ** – ಸಹ; **ದುಃಖಮ್** – ದುಃಖವನ್ನು; **ನ ಯಾತಿ** – ಹೊಂದುವುದಿಲ್ಲವೋ ; **ಷಡ್ವರ್ಗನಿಗ್ರಹನಿರಸ್ತಸಮಸ್ತದೋಷಾಃ** – ಅರಿಷಡ್ವರ್ಗಗಳನ್ನು ನಿಗ್ರಹಿಸುವ ಮೂಲಕ ಸಮಸ್ತದೋಷದೂರರಾಗಿರುವ; **ಋಷಯಃ** – ಋಷಿಗಳು; **ಯದಪಾಂಗಲೇಶಮ್** – ಯಾರ ಕುಡಿನೋಟಲೇಶವನ್ನು ; **ಆಶ್ರಿತ್ಯ** – ಆಶ್ರಯಿಸಿ; **ವಿಷ್ಣುಮ್** – ವಿಷ್ಣುವನ್ನು; **ಧ್ಯಾಯಂತಿ** – ಧ್ಯಾನ ಮಾಡುವರೋ; (ಸಾ–ಅಂತಹ) **ಶ್ರೀಃ** – ಮಹಾಲಕ್ಷ್ಮಿಯು; **ಯತ್ಕಟಾಕ್ಷಬಲವತೀ** – ಯಾರ ಕುಡಿನೋಟದಿಂದ ಬಲ ಪಡೆದಿರುವಳೋ; **ಅಜಿತಂ** – ಅಂತಹ ಅಜಿತ ನಾಮಕ ಶ್ರೀಕೃಷ್ಣನನ್ನು; **ನಮಾಮಿ** – ನಮಸ್ಕರಿಸುವೆನು.

**ಆರನಾಶ್ರಯಿಸೆ ಸಹ ಜೀವನದಿ ದುಃಖಗಳು ಎಂದೆಂದು ಬಳಿಗೆ ಬರವೊ**
**ಆರುವೈರಿಗಳನ್ನು ತರಿದು ದೋಷಗಳನ್ನು ಮೆಟ್ಟಿರುವ ಮುನಿಗಳೆಲ್ಲ ।**
**ಆರ ಕೊನೆಗಣ್ಣಲವನೋಟವನು ಆಶ್ರಯಿಸಿ ಶ್ರೀಹರಿಯ ನೆನೆಯುತಿಹರೊ**
**ಅಂಥ ಸಿರಿಹಿರಿರಮೆಗು ಚೆಲುನೋಟಲವದಿಂದ ಬಲವೀವ ಹರಿಗೆ ನಮನಂ ೪**

**ಅನು : ಯಾರನ್ನು ಹೊಂದಿಯೂ ಸಹ ದುಃಖವನ್ನು ಹೊಂದುವುದಿಲ್ಲವೋ, ಅಂತಹ ಅರಿಷಡ್ವರ್ಗಗಳನ್ನು ನಿಗ್ರಹಿಸುವ ಮೂಲಕ ಸಮಸ್ತದೋಷದೂರರಾಗಿರುವ ಋಷಿಗಳು ಸಹ ಯಾರ ಕುಡಿನೋಟಲೇಶವನ್ನು ಆಶ್ರಯಿಸಿ ವಿಷ್ಣುವನ್ನು ಧ್ಯಾನ ಮಾಡುವರೋ, ಅಂತಹ ಮಹಾಲಕ್ಷ್ಮಿಯು ಯಾರ ಕುಡಿನೋಟದಿಂದ ಬಲ ಪಡೆದಿರುವಳೋ ಅಂತಹ ಅಜಿತನಾಮಕ ಶ್ರೀಕೃಷ್ಣನನ್ನು ನಮಸ್ಕರಿಸುವೆನು.**

ವಿ : ೧. ಇಲ್ಲಿ ಋಷಿಗಳ ಹಿರಿಮೆ ವರ್ಣಿತವಾಗಿದೆ. ಮಹಾಲಕ್ಷ್ಮಿಯ ಅನುಗ್ರಹದಿಂದ ಕಾಮಾದಿಗಳನ್ನು ಗೆದ್ದಿರುವ ಹಿರಿಮೆ ಋಷಿಗಳದು. ಅದರಿಂದಾಗಿ ಅವರು ಸಕಲ ಲೋಕಗಳನ್ನು ಜಯಿಸಿರುವರು. ಅಂತಹ ಋಷಿಗಳನ್ನು ಆಶ್ರಯಿಸಿದವರಿಗೂ ಸಹ ಕ್ಲೇಶಗಳು ಒದಗದು ಎಂದರ್ಥ. ವಿಶ್ವಾಮಿತ್ರಾದಿ ಋಷಿಗಳನ್ನು ಆಶ್ರಯಿಸಿ ತ್ರಿಶಂಕು ಮೊದಲಾದವರು ಸಶರೀರರಾಗಿಯೇ ಸ್ವರ್ಗಕ್ಕೆ ತೆರಳಿದ ಹರಿವಂಶಾದಿಗಳಲ್ಲಿ ಬಂದಿರುವ ವಿವರ ಇದಕ್ಕೆ ಸ್ಪಷ್ಟ ನಿದರ್ಶನ. ಇಂದಿಗೂ, ಶ್ರೀರಾಘವೇಂದ್ರಸ್ವಾಮಿಗಳು ಮೊದಲಾದವರನ್ನು ಆರಾಧಿಸಿದ ಜನತೆ ಸುಖಸಂತೋಷದಿಂದ ಕೂಡಿರುವುದು ಲೋಕಕಂಡಿರುವ ಸಂಗತಿ.

೨. ಇಲ್ಲಿ ಷಡ್ವರ್ಗ ಎಂದರೆ ಅರಿಷಡ್ವರ್ಗ ಎಂದರ್ಥ. ಕಾಮ, ಕ್ರೋಧ, ಲೋಭ, ಮೋಹ, ಮದ ಹಾಗೂ ಮಾತ್ಸರ್ಯ ಎಂಬ ನಮ್ಮ ಮನಸ್ಸನ್ನು ಕುಲುಷಿತಗೊಳಿಸುವ ಆರು ದೋಷಗಳು ಎಂದರ್ಥ. ಇವುಗಳ ಮೇಲೆ ನಿಗ್ರಹವನ್ನು ಸಾಧಿಸಲು ಲಕ್ಷ್ಮೀನಾರಾಯಣರನ್ನು ಆಶ್ರಯಿಸಿದವರಿಗೆ ಮಾತ್ರ ಸಾಧ್ಯ ಎಂಬ ವಿಶೇಷಾಂಶ ಇದರಲ್ಲಿದೆ.

೩. ಇಲ್ಲಿ ಅಂತಹ ಋಷಿಗಳು ಎಂದರೆ ವಿಶ್ವಾಮಿತ್ರಾದಿಗಳು ಎಂದು ತಿಳಿಯಬೇಕು. ಅವರ ವಿವರ ಮಂಗಳಾಷ್ಟಕದಲ್ಲಿ ಬಂದಿದೆ:

**ವಿಶ್ವಾಮಿತ್ರಪರಾಶರೌರ್ವಭೃಗವೋಽಗಸ್ತ್ಯಃ ಪುಲಸ್ತ್ಯಃ ಕ್ರತುಃ**
**ಶ್ರೀಮಾನತ್ರಿಮರೀಚಿಕೌತ್ಸಪುಲಹಾಃ ಶಕ್ತಿರ್ವಸಿಷ್ಠೋಽಂಗಿರಾಃ ।**
**ಮಾಂಡವ್ಯೋ ಜಮದಗ್ನಿಗೌತಮಭರದ್ವಾಜಾದಯಸ್ತಾಪಸಾಃ**
**ಶ್ರೀವಿಷ್ಣೋಃ ಪದಪದ್ಮಚಿಂತನರತಾಃ ಕುರ್ವಂತು ನೋ ಮಂಗಲಮ್ ॥**

೪. ಋಷಿಗಳು ಎಂಬುದಕ್ಕೆ ಮುಖ್ಯವಾಗಿ ವೇದಮಂತ್ರಗಳ ದ್ರಷ್ಟಾರರು ಎಂದರ್ಥ. ಅದರಂತೆ ವೇದಮಂತ್ರಗಳ ಪಾಠ-ಪ್ರವಚನಗಳನ್ನು ಕನಿಷ್ಠ ಹನ್ನೆರಡು ಬಾರಿ ಮಾಡಿದವರಿಗೂ ಋಷಿ ಎಂಬ ಪ್ರಶಸ್ತಿ ಅನ್ವಯಿಸುವುದು:

**'ಯಃ ಪಶ್ಯತಿ ಸ್ವಯಂ ವಾಕ್ಯಂ ಸ ಋಷಿಸ್ತಸ್ಯ ಕೀರ್ತಿತಃ ।**
**ಅರ್ವಾಕ್ ತು ದ್ವಾದಶಾವೃತ್ತೇರಧೀತ್ಯಾಪ್ಯೃಷಿರೇವ ಸಃ ॥' (ಋಗ್ಭಾಷ್ಯ).**

೫. ಋಷಿಗಳು ಸಹ ಬ್ರಹ್ಮರ್ಷಿಗಳು, ದೇವರ್ಷಿಗಳು, ಮಹರ್ಷಿಗಳು ಹಾಗೂ ರಾಜರ್ಷಿಗಳು ಎಂಬುದಾಗಿ ಅನೇಕ ಬಗೆ. ಭಗವದ್ಗೀತೆಯಲ್ಲಿ ಬಂದಿರುವಂತೆ

ದೇವರ್ಷಿಗಳಲ್ಲಿ ನಾರದರಲ್ಲೂ, ಮಹರ್ಷಿಗಳಲ್ಲಿ ಭೃಗುಮುನಿಗಳಲ್ಲೂ ಶ್ರೀಹರಿಯ ವಿಶೇಷ ವಿಭೂತಿರೂಪ ಇರುವುದು. ಇಂತಹವರನ್ನು ಆಶ್ರಯಿಸಿದರೆ, ಸಮಸ್ತ ವಿಧವಾದ ಸಿದ್ಧಿಯು ಸಹ ಯಥಾಯೋಗ್ಯವಾಗಿ ಲಭಿಸುವುದು ಎಂದರ್ಥ.

೬. ಕಾಮಾದಿಗಳ ನಿಗ್ರಹಕ್ಕೆ ಶ್ರೀಹರಿಯ ಅನುಗ್ರಹವೇ ಮುಖ್ಯಸಾಧನ ಎಂಬ ಇಲ್ಲಿಯ ವಿವರ ಅತ್ಯಂತ ಗಮನಾರ್ಹವಾದುದು. ಭಗವದ್ಗೀತೆಯ ಮೂರನೆಯ ಅಧ್ಯಾಯದ ಕೊನೆಯ ಶ್ಲೋಕಗಳು ಹಾಗೂ ಅದರ ಭಾಷ್ಯ, ತಾತ್ಪರ್ಯಗಳಲ್ಲಿ ಈ ಬಗ್ಗೆ ಹೆಚ್ಚಿನ ವಿವರಗಳು ಬಂದಿವೆ.

೭. **ಆತ್ಮಜ್ಞಂ ಅರ್ಚಯೇದ್ ಭೂತಿಕಾಮಃ** ಎಂಬ ಉಪನಿಷದ್ವಚನದ ವಿವರಣೆಯೂ ಇದಾಗಿದೆ.

೮. ಇದನ್ನು ಋಷಿಪಂಚಮಿಯ ಸಮಯದಲ್ಲಿ ಹಾಗೂ ಋಷಿಗಳ ಆರಾಧನೆಯ ಇತರ ಪ್ರಸಂಗಗಳಲ್ಲಿ ವಿನಿಯೋಗಿಸಿಕೊಂಡಲ್ಲಿ, ವಿಶೇಷಸಿದ್ಧಿಗೆ ಸಾಧನವಾಗುವುದು.

**ಶೇಷಾಹಿವೈರಿಶಿವಶಕ್ರಮನುಪ್ರಧಾನ-**
**ಚಿತ್ರೋರುಕರ್ಮರಚನಂ ಯದಪಾಂಗಲೇಶಮ್ ।**
**ಆಶ್ರಿತ್ಯ ವಿಶ್ವಮಖಿಲಂ ವಿದಧಾತಿ ಧಾತಾ**
**ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ** ॥ ೫ ॥

**ಪ** : ಶೇಷಾಹಿವೈರಿಶಿವಶಕ್ರಮನುಪ್ರಧಾನಚಿತ್ರೋರುಕರ್ಮರಚನಮ್, ಯದಪಾಂಗಲೇಶಮ್, ಆಶ್ರಿತ್ಯ, ವಿಶ್ವಮ್, ಅಖಿಲಮ್, ವಿದಧಾತಿ, ಧಾತಾ, ಶ್ರೀಃ, ಯತ್ಕಟಾಕ್ಷಬಲವತೀ, ಅಜಿತಮ್, ನಮಾಮಿ।

**ಅ** : ಯದಪಾಂಗಲೇಶಮ್, ಆಶ್ರಿತ್ಯ, ಧಾತಾ, ಶೇಷಾಹಿವೈರಿಶಿವಶಕ್ರಮನುಪ್ರಧಾನ-ಚಿತ್ರೋರುಕರ್ಮರಚನಮ್, ಅಖಿಲಮ್, ವಿಶ್ವಮ್, ವಿದಧಾತಿ, ಶ್ರೀಃ, ಯತ್ಕಟಾಕ್ಷ-ಬಲವತೀ, ಅಜಿತಮ್, ನಮಾಮಿ।

ಪ್ರ.ಪ.: **ಯದಪಾಂಗಲೇಶಮ್** - ಯಾರ ಕುಡಿನೋಟಲೇಶವನ್ನು; **ಆಶ್ರಿತ್ಯ** - ಆಶ್ರಯಿಸಿ; **ಧಾತಾ** - ಬ್ರಹ್ಮದೇವರು; **ಶೇಷಾಹಿವೈರಿಶಿವಶಕ್ರಮನುಪ್ರಧಾನಚಿತ್ರೋರು-ಕರ್ಮರಚನಮ್** - ಶೇಷ, ಗರುಡ, ಶಿವ, ಇಂದ್ರ, ಮನು ಮೊದಲಾದವರಿಂದ ಕೂಡಿದ ವಿಸ್ಮಯಕರವಾದ ಶ್ರೇಷ್ಠಕರ್ಮದಿಂದ ಕೂಡಿದ; **ಅಖಿಲಮ್** - ಸಕಲ; **ವಿಶ್ವಮ್** - ವಿಶ್ವವನ್ನು; **ವಿದಧಾತಿ** - ಸೃಷ್ಟಿಮಾಡುವರೋ; (ಸಾ-ಅಂತಹ) **ಶ್ರೀಃ** - ಮಹಾಲಕ್ಷ್ಮಿಯು;

**ಯತ್ಕಟಾಕ್ಷಬಲವತೀ** – ಯಾರ ಕುಡಿನೋಟದಿಂದ ಬಲ ಪಡೆದಿರುವಳೋ; **ಅಜಿತಂ** – ಅಂತಹ ಅಜಿತ ನಾಮಕ ಶ್ರೀಕೃಷ್ಣನನ್ನು; **ನಮಾಮಿ** – ನಮಸ್ಕರಿಸುವೆನು.

> **ಶ್ರೀಶೇಷ ಶ್ರೀಗರುಡ ಶ್ರೀರುದ್ರ ಇಂದ್ರ ಮನು ಮುಂತಾದ ವಿವಿಧ ಬಗೆಯ**
> **ಬಲುರಮ್ಯವಾಗಿರುವ ಬಹುಬಗೆಯ ಅಚ್ಚರಿಯ ಈ ಎಲ್ಲ ಲೋಕಗಳನು ।**
> **ಆರ ಕೊನೆಗಣ್ಣಲವನೋಟವನು ಆಶ್ರಯಿಸಿ ಚತುರಾಸ್ಯ ಸೃಜಿಸುತಿಹನೊ**
> **ಅಂಥ ಸಿರಿಹಿರಿರಮೆಗು ಚೆಲುನೋಟಲವದಿಂದ ಬಲವೀವ ಹರಿಗೆ ನಮನಂ ೫**

**ಅನು : ಯಾರ ಕುಡಿನೋಟಲೇಶವನ್ನು ಆಶ್ರಯಿಸಿ ಬ್ರಹ್ಮದೇವರು ಶೇಷ, ಗರುಡ, ಶಿವ, ಇಂದ್ರ, ಮನು ಮೊದಲಾದವರಿಂದ ಕೂಡಿದ ಆಶ್ಚರ್ಯಕರವಾದ ಕರ್ಮದಿಂದ ಕೂಡಿದ ಸಕಲ ವಿಶ್ವವನ್ನು ಸೃಷ್ಟಿ ಮಾಡುವರೋ, ಅಂತಹ ಮಹಾಲಕ್ಷ್ಮಿಯು ಯಾರ ಕುಡಿನೋಟದಿಂದ ಬಲ ಪಡೆದಿರುವಳೋ ಅಂತಹ ಅಜಿತನಾಮಕ ಶ್ರೀಕೃಷ್ಣನನ್ನು ನಮಸ್ಕರಿಸುವೆನು.**

ವಿ: ೧. ಬ್ರಹ್ಮದೇವರು ಸೃಷ್ಟಿಕರ್ತ ಎಂದು ಪ್ರಸಿದ್ಧರಾದವರು; ಅವರು ಮಹಾಲಕ್ಷ್ಮಿಯ ಕಟಾಕ್ಷಲೇಶದ ಆಶ್ರಯದಿಂದಲೇ ಅಂತಹ ಸೃಷ್ಟಿಕಾರ್ಯದಲ್ಲಿ ಸಮರ್ಥರಾಗಿರುವರು ಎಂಬ ವಿವರ ಈಗಾಗಲೇ ಬಂದಿದೆ. ಅವರು ಮಾಡುವ ಸೃಷ್ಟಿಯ ವಿವರ ಈ ಶ್ಲೋಕದಲ್ಲಿ ನಿರೂಪಿತವಾಗಿದೆ.

೨. ಶೇಷದೇವರನ್ನೊಳಗೊಂಡಂತೆ ಇತರ ಸಕಲದೇವತೆಗಳ ಸೃಷ್ಟಿಯೂ ಸಹ ಬ್ರಹ್ಮದೇವರಿಂದಲೇ[೧] ನಡೆಯುವುದು.

೩. ಬ್ರಹ್ಮದೇವರಿಂದ ಮಾತ್ರವಲ್ಲದೆ, ವಾಯುದೇವರಿಂದಲೂ ಸಹ ಶೇಷಾದಿ ದೇವತೆಗಳ ಸೃಷ್ಟಿನಡೆಯುವ ವಿವರ ಮಹಾಭಾರತತಾತ್ಪರ್ಯನಿರ್ಣಯದಲ್ಲಿದೆ: '**ಯಾ ಮಾರುತಾದ್ ಗರ್ಭಮಧತ್ತ ಪೂರ್ವಂ ಶೇಷಂ ಸುಪರ್ಣಂ ಗಿರಿಶಂ ಸುರೇಂದ್ರಮ್**' (೨/೧೭೨):

> **ನಿರುಪಮಾನಂದಾತ್ಮಭವ ನಿರ್ಜರಸಭಾಸಂಸೇವ್ಯ ಋಜುಗಣ-**
> **ದರಸೆ ಸತ್ವಪ್ರಚುರ ವಾಣೀಮುಖಸರೋಜೇನ ।**
> **ಗರುಡಶೇಷಶಶಾಂಕದಳಶೇಖರರ ಜನಕ ಜಗದ್ಗುರುವೆ ತ್ವ-**
> **ಚ್ಚರಣಗಳಿಗಭಿವಂದಿಸುವೆ ಪಾಲಿಪುದು ಸನ್ಮತಿಯ ॥**
>
> **– ಹರಿಕಥಾಮೃತಸಾರ (೧/೩)**

---

೧. ತತೋ ವಿರಿಂಚೋ ಭುವನಾನಿ ಸಪ್ತ ಸಸಪ್ತಕಾನ್ಯಾಶು ಚಕಾರ ಸೋಽಬ್ಜಾತ್ ।
ತಸ್ಮಾಚ್ಚ ದೇವಾ ಋಷಯಃ ಪುನಶ್ಚ ವೈಕಾರಿಕಾದ್ಯಾಃ ಸಶಿವಾ ಬಭೂವುಃ ॥ ...
ತತೋಽಸುರಾದ್ಯಾ ಋಷಯೋ ಮನುಷ್ಯಾ ಜಗದ್ವಿಚಿತ್ರಂ ಚ ವಿರಿಂಚತೋಽಭೂತ್
– ಮ.ಭಾ.ತಾ.ನಿ. (೩/೨೫,೨೮)

- ಆದ್ದರಿಂದ ಈ ಶ್ಲೋಕವು ವಾಯುದೇವರ ಹಿರಿಮೆಗೂ ಸಹ ಅನ್ವಯಿಸುವ ವಿವರವನ್ನು ಹೊಂದಿದೆ ಎಂದು ತಿಳಿಯಬೇಕು.

೪. ಶ್ರೀಮದ್ಭಾಗವತದ ಈ ಕೆಳಗಿನ ಶ್ಲೋಕದಲ್ಲಿ(೪/೯/೨೦) ಬ್ರಹ್ಮದೇವರು ಶ್ರೀವಾಯುದೇವರಿಂದ ಆದರಣೀಯರು ಎಂಬ ವಿವರ ಬಂದಿದೆ :

**ಯತ್ಪಾದಪದ್ಮಂ ಪರಿಚರ್ಯ ವಿಶ್ವವಿಭಾವನಾಯಾತ್ತಗುಣಾಭಿಪತ್ತೇಃ ।**
**ಅಜೋಽಧ್ಯತಿಷ್ಠತ್ ಖಲು ಪಾರಮೇಷ್ಠ್ಯಂ ಪದಂ ಜಿತಾತ್ಮಾ ಶ್ವಸನಾಭಿವಂದ್ಯಮ್ ॥**

'ಸ ಮಾನನೀಯ ಏವ ಮೇ ತತೋಽತ್ರ ಮಾನಯಾಮ್ಯಹವ್' ಎಂಬ ಮಹಾಭಾರತತಾತ್ಪರ್ಯನಿರ್ಣಯದ ಶ್ಲೋಕವು ಇದಕ್ಕೆ ಆಧಾರವಾಗಿದೆ.

೫. ಅಂತಹ ಬ್ರಹ್ಮದೇವರ ಸಂಖ್ಯೆಯು ಸಹ[1] ಅನಂತ. ಸೃಷ್ಟಿಯು ಅನಾದಿನಿತ್ಯವಾದ್ದರಿಂದ ಪ್ರತಿ ಬ್ರಹ್ಮಕಲ್ಪದಲ್ಲೂ ಸಹ ಒಬ್ಬ ಬ್ರಹ್ಮನಂತೆ, ಒಟ್ಟು ಕಲ್ಪಗಳು ಅನಂತವಾಗುವವು. ಅಂತಹ ಅನಂತ ಬ್ರಹ್ಮರಿಗೂ ಲಕ್ಷ್ಮೀನಾರಾಯಣರೇ ಮುಖ್ಯ ಆಸರೆ ಎಂಬುದು ಇದರ ಭಾವ.

೬. ಇಲ್ಲಿ **ವಿಶ್ವಂ ಆಶ್ರಿತ್ಯ** ಎಂಬುದಕ್ಕೆ ಬ್ರಹ್ಮದೇವರಿಗೆ ವಾಯುದೇವರ ಅಗತ್ಯ, ಹಾಗೂ ವಾಯುದೇವರಿಗೆ ಬ್ರಹ್ಮದೇವರ ಅಗತ್ಯ ಇದೆ ಎಂಬ [2] ವಿಶೇಷಾಂಶವೂ ಸೂಚಿತ.

**ಶಕ್ರೋಗ್ರದೀಧಿತಿಹಿಮಾಕರಸೂರ್ಯಸೂನು-**
**ಪೂರ್ವಂ ನಿಹತ್ಯ ನಿಖಿಲಂ ಯದಪಾಂಗಲೇಶಮ್ ।**
**ಆಶ್ರಿತ್ಯ ನೃತ್ಯತಿ ಶಿವಃ ಪ್ರಕಟೋರುಶಕ್ತಿಃ**
**ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ ॥ ೬ ॥**

**ಪ :** ಶಕ್ರೋಗ್ರದೀಧಿತಿಹಿಮಾಕರಸೂರ್ಯಸೂನುಪೂರ್ವಮ್, ನಿಹತ್ಯ, ನಿಖಿಲಮ್, ಯದಪಾಂಗಲೇಶಮ್, ಆಶ್ರಿತ್ಯ, ನೃತ್ಯತಿ, ಶಿವಃ, ಪ್ರಕಟೋರುಶಕ್ತಿಃ ಶ್ರೀಃ, ಯತ್ಕಟಾಕ್ಷಬಲವತೀ, ಅಜಿತಮ್, ನಮಾಮಿ ।

---

೧. ಯಥಾಽರ್ಚಿಷೋಽಗ್ನೇಃ ಪವನಸ್ಯ ವೇಗಾನ್ಮರೀಚಯೋಽರ್ಕಸ್ಯ ನದೀಷು ಚಾಪಃ ।
ಗಚ್ಛಂತಿ ಚಾಯಾಂತಿ ಚ ಸಂತತಾಶ್ಚ ತದ್ವನ್ಮದಾದ್ಯಾಃ ಶಿವಪೂರ್ವಕಾಶ್ಚ ಯೇ ॥
- ಮ.ಭಾ.ತಾ.ನಿ. (೮/೨೧೫)

೨. ವಾಯುಂ ವಿನಾ ಬ್ರಹ್ಮಣೋಽಪಿ ಶರೀರಂ ಪೂತಿಮೇಷ್ಯತಿ ।
ವಾಯುಶ್ಚ ಶೋಷಮಾಯಾತಿ ವಿನಾ ಬ್ರಹ್ಮಾಣಮಂಜಸಾ ॥ ... (ಇತಿ ಸಂಧಾನೇ)
- ಬೃಹದಾರಣ್ಯಕೋಪನಿಷದ್ಭಾಷ್ಯ

**ಅ :** ಯದಪಾಂಗಲೇಶಮ್, ಆಶ್ರಿತ್ಯ, ಶಿವಃ, ಪ್ರಕಟೋರುಶಕ್ತಿಃ ಶಕ್ರೋಗ್ರದೀಧಿತಿ-ಹಿಮಾಕರಸೂರ್ಯಸೂನುಪೂರ್ವಮ್, ನಿಖಿಲಮ್, ನಿಹತ್ಯ, ನೃತ್ಯತಿ, ಶ್ರೀಃ, ಯತ್ಕಟಾಕ್ಷಬಲವತೀ, ಅಜಿತಮ್, ನಮಾಮಿ।

**ಪ್ರ.ಪ. : ಯದಪಾಂಗಲೇಶಮ್** - ಯಾರ ಕುಡಿನೋಟಲೇಶವನ್ನು; **ಆಶ್ರಿತ್ಯ** - ಆಶ್ರಯಿಸಿ; **ಶಿವಃ** - ರುದ್ರದೇವರು; **ಪ್ರಕಟೋರುಶಕ್ತಿಃ** - ತಮ್ಮ ಮಹಾಶಕ್ತಿಯನ್ನು ಪ್ರಕಟಿಸಿ; **ಶಕ್ರೋಗ್ರದೀಧಿತಿಹಿಮಾಕರಸೂರ್ಯಸೂನುಪೂರ್ವಮ್** - ಇಂದ್ರ, ಸೂರ್ಯ, ಚಂದ್ರ, ಯಮ ಮೊದಲಾದವರಿಂದ ಕೂಡಿದ; **ನಿಖಿಲಮ್** - ಸಕಲವನ್ನು; **ನಿಹತ್ಯ** - ಸಂಹರಿಸಿ; **ನೃತ್ಯತಿ** - ನರ್ತಿಸುವರೋ; (**ಸಾ**-ಅಂತಹ) **ಶ್ರೀಃ** - ಮಹಾಲಕ್ಷ್ಮಿಯು; **ಯತ್ಕಟಾಕ್ಷಬಲವತೀ** - ಯಾರ ಕುಡಿನೋಟದಿಂದ ಬಲ ಪಡೆದಿರುವಳೋ; **ಅಜಿತಂ** - ಅಂತಹ ಅಜಿತ ನಾಮಕ ಶ್ರೀಕೃಷ್ಣನನ್ನು; **ನಮಾಮಿ** - ನಮಸ್ಕರಿಸುವೆನು.

**ದೇವೇಂದ್ರ ವರಭಾನು ಚಂದ್ರಮನು ಯಮಧರ್ಮ ಎಂಬಂಥ ಎಲ್ಲ ಬಗೆಯ**
**ಈ ಜಗವ ಪ್ರಳಯದಲಿ ಸಂಹಾರಗೈಯುತಲಿ ಹಿರಿಶಕುತಿಯನ್ನು ತೋರಿ।**
**ಆರ ಕೊನೆಗಣ್ಣಲವನೋಟವನು ಆಶ್ರಯಿಸಿ ಪರಶಿವನು ಕುಣಿಯುತಿಹನೊ**
**ಅಂಥ ಸಿರಿಹಿರಿರಮೆಗು ಚೆಲುನೋಟಲವದಿಂದ ಬಲವೀವ ಹರಿಗೆ ನಮನಂ ೬**

**ಅನು : ಯಾರ ಕುಡಿನೋಟಲೇಶವನ್ನು ಆಶ್ರಯಿಸಿ ರುದ್ರದೇವರು ತಮ್ಮ ಮಹಾಶ್ತಕಿಯನ್ನು ಪ್ರಕಟಿಸಿ ಇಂದ್ರ, ಸೂರ್ಯ, ಚಂದ್ರ, ಯಮ ಮೊದಲಾದವರಿಂದ ಕೂಡಿದ ಸಕಲವನ್ನು ಸಂಹರಿಸಿ ನರ್ತಿಸುವರೋ, ಅಂತಹ ಮಹಾಲಕ್ಷ್ಮಿಯು ಯಾರ ಕುಡಿನೋಟದಿಂದ ಬಲ ಪಡೆದಿರುವಳೋ ಅಂತಹ ಅಜಿತನಾಮಕ ಶ್ರೀಕೃಷ್ಣನನ್ನು ನಮಸ್ಕರಿಸುವೆನು.**

ವಿ: ೧. ಹಿಂದಿನ ಶ್ಲೋಕದಲ್ಲಿ ಬ್ರಹ್ಮದೇವರನ್ನು ವರ್ಣಿಸಿ ಈ ಶ್ಲೋಕದಲ್ಲಿ ರುದ್ರದೇವರನ್ನು ವರ್ಣಿಸಿರುವರು.

೨. ಶಿವನು ಲಯಕರ್ತೃದೇವತೆ; ಅವನು ಲಯಕಾರ್ಯವನ್ನು ಮಾಡುವುದು ಸಹ ಲಕ್ಷ್ಮೀನಾರಾಯಣರ ಅನುಗ್ರಹದಿಂದ ಹಾಗೂ ಬ್ರಹ್ಮವಾಯುಗಳ ಅನುಗ್ರಹದಿಂದ ಎಂಬ ವಿವರ ಈಗಾಗಲೇ ಬಂದಿದೆ.

೩. ರುದ್ರದೇವರು ಮಾಡುವ ಲಯಕಾರ್ಯದ ವಿವರ ಈ ಶ್ಲೋಕದಲ್ಲಿ ನಿರೂಪಿತವಾಗಿದೆ. ಇದರಿಂದ ತಿಳಿಯುವಂತೆ, ಇಂದ್ರ, ಸೂರ್ಯ ಮೊದಲಾದ ದೇವತೆಗಳ ಲಯಕಾರ್ಯ ರುದ್ರದೇವರಿಂದಾಗುವುದು. ಎಂದರೆ, ಅವರ ವ್ಯಾಪ್ತಿ

ಇಂದ್ರಾದಿದೇವತೆಗಳವರೆಗೆ ಹೊರತು, ಅವರ ಮೇಲಿನ ದೇವತೆಗಳಾದ ಋಜುದೇವತೆಗಳ ಮೇಲಲ್ಲ ಎಂಬುದು ವಿಶೇಷ.

೪. ಇಲ್ಲಿ ಪ್ರಸಕ್ತವಾಗಿರುವ ಇಂದ್ರಾದಿದೇವತೆಗಳಲ್ಲಿ ಇಂದ್ರದೇವರು ಅರ್ಜುನಾದಿ ರೂಪಗಳಿಂದ ಶತ್ರುನಾಶಮಾಡುವ ವಿವರ ಮಹಾಭಾರತದಲ್ಲಿದೆ. ಅದರಂತೆ ಸೂರ್ಯ ಸುಗ್ರೀವನಾಗಿ (ಕರ್ಣನಾಗಿ), ಯಮ ಯುಧಿಷ್ಠಿರನಾಗಿ (ಜಾಂಬವಂತನಾಗಿ), ಯಥಾಯೋಗ್ಯವಾಗಿ ಲಯಕಾರ್ಯವನ್ನು ಮಾಡುವರು. ಇಂದ್ರಾದಿ ಮೂಲರೂಪಗಳಿಂದಲೂ ಸಹ. ಆ ಎಲ್ಲ ಸಂದರ್ಭಗಳಲ್ಲೂ ಅವರ ಸಾಮರ್ಥ್ಯ ಲಕ್ಷ್ಮೀನಾರಾಯಣರ ಹಾಗೂ ಬ್ರಹ್ಮವಾಯುಗಳ ಅನುಗ್ರಹವನ್ನು ಅವಲಂಬಿಸಿರುವುದು ಎಂದು ತಿಳಿಯಬೇಕು.

೫. **ಶಕ್ರ** ಎಂದರೆ ಶತಕ್ರತುವಾದ ಇಂದ್ರ, **ಉಗ್ರದೀಧಿತಿ** ಎಂದರೆ ತೀಕ್ಷ್ಣಕಾಂತಿಯ ಸೂರ್ಯ, **ಹಿಮಾಕರ** ಎಂದರೆ ಚಂದ್ರ, ಸೂರ್ಯಸೂನು ಎಂದರೆ ಯಮ.

೬. ಇಂದ್ರ ತ್ರಿಲೋಕೇಶ, ಸೂರ್ಯ ಲೋಕವನ್ನೇ ಬೆಳಗುವವನು, ಚಂದ್ರ ನಿಶಾಕರ, ಯಮ ನರಕಾಧಿಪತಿ; ಇಂತಹ ಅಗಾಧ ಮಹಿಮೆಯ ಇಂತಹವರನ್ನೆಲ್ಲಾ ಲೀಲಾಜಾಲವಾಗಿ ಸಂಹರಿಸುವ ಶಿವ ಅವರಿಗಿಂತ ಶ್ರೇಷ್ಠನಾದ ದೇವತೆ ಎಂದು ಭಾವ; ಇದು ಅಂಭೃಣೀಸೂಕ್ತದ **ಅಹಂ ರುದ್ರೇಭಿಃ** ಎಂಬುದರ ಅರ್ಥ.

೭. ಇಲ್ಲಿ ಶಿವನು ಲಯಕಾರ್ಯವನ್ನು ಮಾಡುತ್ತಾ ನರ್ತಿಸುವನು ಎಂಬ ಮಾತಿನಿಂದ ಅವನು ಮಾಡುವ ಆ ಕಾರ್ಯ ಶ್ರೀಹರಿಯ ಪೂಜಾರೂಪವಾದ ನಲಿವಿನ ಕಾರ್ಯ ಎಂಬ ವಿಶೇಷಾಂಶ ಸೂಚಿತ. ಪೊಲೀಸ್ ಅಧಿಕಾರಿಗಳು ಎನ್ಕೌಂಟರ್ ಮಾಡುವುದು ಹೇಗೋ ಹಾಗೆ.

೮. ಇಲ್ಲಿ **ಪ್ರಕಟೋರುಶಕ್ತಿಃ** ಎಂಬ ಪದದಿಂದ ಶಿವನ ಆ ಲಯಕಾರಕಸಾಮರ್ಥ್ಯ ಪ್ರಕಟವಾಗಲು ಸಹ ಅವರಿಗಿಂತ ಉತ್ತಮರಾದ ದೇವತೆಗಳ ವಿಶೇಷಾನುಗ್ರಹ ಅಗತ್ಯ ಎಂಬ ಮತ್ತೊಂದು ವಿಶೇಷಾಂಶ ಸೂಚಿತ.

**ತತ್ಪಾದಪಂಕಜಮಹಾಸನತಾಮವಾಪ**
**ಶರ್ವಾದಿವಂದ್ಯಚರಣೋ ಯದಪಾಂಗಲೇಶಮ್ ।**
**ಆಶ್ರಿತ್ಯ ನಾಗಪತಿರನ್ಯಸುರೈರ್ದುರಾಪಾಂ**
**ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ ॥ ೭ ॥**

**ಪ :** ತತ್ಪಾದಪಂಕಜಮಹಾಸನತಾಮ್, ಅವಾಪ, ಶರ್ವಾದಿವಂದ್ಯಚರಣಃ, ಯದಪಾಂಗಲೇಶಮ್, ಆಶ್ರಿತ್ಯ, ನಾಗಪತಿಃ, ಅನ್ಯಸುರೈಃ, ದುರಾಪಾಮ್, ಶ್ರೀಃ, ಯತ್ಕಟಾಕ್ಷಬಲವತೀ, ಅಜಿತಮ್, ನಮಾಮಿ।

**ಅ :** ಯದಪಾಂಗಲೇಶಮ್, ಆಶ್ರಿತ್ಯ, ಶರ್ವಾದಿವಂದ್ಯಚರಣಃ, ನಾಗಪತಿಃ, ಅನ್ಯಸುರೈಃ ದುರಾಪಾಮ್, ತತ್ಪಾದಪಂಕಜಮಹಾಸನತಾಮ್, ಅವಾಪ, ಶ್ರೀಃ, ಯತ್ಕಟಾಕ್ಷಬಲವತೀ, ಅಜಿತಮ್, ನಮಾಮಿ।

**ಪ್ರ.ಪ. :** **ಯದಪಾಂಗಲೇಶಮ್** - ಯಾರ ಕುಡಿನೋಟಲೇಶವನ್ನು; **ಆಶ್ರಿತ್ಯ** - ಆಶ್ರಯಿಸಿ; **ಶರ್ವಾದಿವಂದ್ಯಚರಣಃ** - ರುದ್ರಾದಿಗಳಿಂದ ವಂದ್ಯಪಾದನಾದ; **ನಾಗಪತಿಃ** - ನಾಗರಾಜನಾದ ಶೇಷನು; **ಅನ್ಯಸುರೈಃ** - ಇತರ ದೇವತೆಗಳಿಂದ; **ದುರಾಪಾಮ್** - ಹೊಂದಲಾಗದ; **ತತ್ಪಾದಪಂಕಜಮಹಾಸನತಾಮ್**[೧] - ಆ ಶ್ರೀಹರಿಯ ಪಾದಕಮಲದ ಮಹಾಪೀಠವೆನ್ನಿಸುವ ಪದವಿಯನ್ನು; **ಅವಾಪ** - ಪಡೆದನೋ; (**ಸಾ**-ಅಂತಹ) **ಶ್ರೀಃ** - ಮಹಾಲಕ್ಷ್ಮಿಯು; **ಯತ್ಕಟಾಕ್ಷಬಲವತೀ** - ಯಾರ ಕುಡಿನೋಟದಿಂದ ಬಲ ಪಡೆದಿರುವಳೋ; **ಅಜಿತಂ** - ಅಂತಹ ಅಜಿತ ನಾಮಕ ಶ್ರೀಕೃಷ್ಣನನ್ನು; **ನಮಾಮಿ** - ನಮಸ್ಕರಿಸುವೆನು.

**ರುದ್ರಾದಿಸುರರಿಂದ ವಂದ್ಯಚರಣನು ಶೇಷ ಬೇರಾವ ಸುರರಿಗಿರದ**
**ಶ್ರೀಹರಿಯ ವರಚರಣಸರಸಿಜಗೆ ವರಪೀಠವೆಂದೆನಿಪ ಪರಮಸಿರಿಯ।**
**ಆರ ಕೊನೆಗಣ್ಣಲವನೋಟವನು ಆಶ್ರಯಿಸಿ ಮುದದಿಂದ ಪಡೆದು ಇಹನೊ**
**ಅಂಥ ಸಿರಿಹಿರಿರಮೆಗು ಚೆಲುನೋಟಲವದಿಂದ ಬಲವೀವ ಹರಿಗೆ ನಮನಂ** ೭

**ಅನು :** **ಯಾರ ಕುಡಿನೋಟಲೇಶವನ್ನು ಆಶ್ರಯಿಸಿ ರುದ್ರಾದಿಗಳಿಂದ ವಂದ್ಯಪಾದನಾದ ನಾಗರಾಜನಾದ ಶೇಷನು ಇತರ ದೇವತೆಗಳಿಂದ ಹೊಂದಲಾಗದ ಶ್ರೀಹರಿಯ ಪಾದಕಮಲದ ಮಹಾಪೀಠವೆನ್ನಿಸುವ ಪದವಿಯನ್ನು ಪಡೆದನೋ, ಅಂತಹ ಮಹಾಲಕ್ಷ್ಮಿಯು ಯಾರ ಕುಡಿನೋಟದಿಂದ ಬಲ ಪಡೆದಿರುವಳೋ ಅಂತಹ ಅಜಿತನಾಮಕ ಶ್ರೀಕೃಷ್ಣನನ್ನು ನಮಸ್ಕರಿಸುವೆನು.**

ವಿ : ೧. ವಿಷ್ಣುವಿನ ಶಯನ ಎನಿಸಿರುವ ಹಿರಿಮೆ ಆದಿಶೇಷನದು; ಅಂತಹ ಹಿರಿಮೆಯು ಇತರ ದೇವತೆಗಳಿಗೆ ಸರ್ವಥಾ ಅಲಭ್ಯ; ಅದನ್ನು ಶರ್ವಾದಿಗಳಿಂದ ಪೂಜಿತನಾದ ಶೇಷನು ಪಡೆಯಲು ಸಾಧ್ಯವಾದದ್ದು ಮಹಾಲಕ್ಷ್ಮಿಯ ಕಟಾಕ್ಷದಿಂದ ಎಂದು ಭಾವ.

---

೧. ತಸ್ಯ ಹರೇಃ ಪಾದೌ ಪಂಕಜೇ ಇವ ತಯೋರ್ಯನ್ಮಹಾಸನಮ್ ಉತ್ಕೃಷ್ಟಾಸನಂ ತಸ್ಯ ಭಾವಸ್ತತ್ತಾ ತಾಮ್। ಭಗವತ್ಪಾದುಕಾಸಿಂಹಾಸನಶಯ್ಯಾತ್ಮಕತಾಮಿತ್ಯರ್ಥಃ। - (ವಿಶ್ವ.)

೨. ಇಲ್ಲಿ ಮಹಾಲಕ್ಷ್ಮಿಯ ಕಟಾಕ್ಷ ಎಂಬ ಮಾತಿನಿಂದ ಬ್ರಹ್ಮವಾಯುಸರಸ್ವತೀಭಾರತಿಯರ ಕಟಾಕ್ಷದ ಅಗತ್ಯವೂ ಉಪಲಕ್ಷಿತ ಎಂದು ತಿಳಿಯಬೇಕು.

೩. **ನಾಗಪತಿಃ** ಎಂಬ ಇಲ್ಲಿನ ಪದದಿಂದ **ಅನಂತಶ್ಚಾಸ್ಮಿ ನಾಗಾನಾಂ** ಎಂಬ ಭಗವದ್ಗೀತೆಯ ಮಾತು ಸೂಚಿತವಾಗುವುದು.

೪. ಹೀಗೆ ಶೇಷನು ಇಡೀ ಜಗತ್ತನ್ನು ತನ್ನ ಸಾವಿರ ಹೆಡೆಗಳಲ್ಲಿ ಒಂದು ಹೆಡೆಯ ಮೇಲೆ ಸಾಸಿವೆ ಕಾಳಿನಷ್ಟು ಅನಾಯಾಸದಿಂದ ಧರಿಸಿರುವ ವಿವರ ಶ್ರೀಮದ್ಭಾಗವತದಲ್ಲಿ, ಮಹಾಭಾರತತಾತ್ಪರ್ಯನಿರ್ಣಯದಲ್ಲಿ ನಿರೂಪಿತವಾಗಿದೆ:

**ಭೂಮಂಡಲಂ ಸರ್ಷಪಾಯತಿ ಯಸ್ಯ ಮೂರ್ಧ್ನಿ**
**ತಸ್ಮೈ ನಮೋ ಭಗವತೇಽಸ್ತು ಸಹಸ್ರಮೂರ್ಧ್ನೇ ॥ - ಭಾಗವತ (೬/೧೬/೪೮)**

**ಸಹಸ್ರಮೂರ್ಧ್ನೋಽಸ್ಯ ಬತೈಕಮೂರ್ಧ್ನಿ ಸಸಪ್ತಪಾತಾಲಗಿರೀಂದ್ರಸಾಗರಾ ।**
**ಧರಾಽಖಿಲೇಯಂ ನನು ಸರ್ಷಪಾಯತಿ ಪ್ರಸಹ್ಯ ಕೋ ನಾಮ ಹರೇತ್ ತಮೇನಮ್ ॥**
**- ಮ.ಭಾ.ತಾ.ನಿ. (೮/೮೮)**

೫. **ಮಹಾಸನ** ಎಂದರೆ ಶಯನ ಎಂದೂ ಅರ್ಥ. ಶ್ರೀಹರಿಯು ಶೇಷಶಾಯಿ ಎಂಬ ಹಿನ್ನೆಲೆಯಲ್ಲಿ ಈ ಮಾತಿನ ಮಹತ್ತ್ವ ಅರ್ಥವಾಗುವುದು.

೬. ಗರುಡಶೇಷರುದ್ರರು ಸಮಾನಕಕ್ಷೆಯ ದೇವತೆಗಳಾದರೂ, ಶೇಷರೂಪಕ್ಕೆ ರುದ್ರರೂಪದಿಂದ ವಂದ್ಯತ್ವ ಎಂಬ ವಿಶೇಷವು ಇಲ್ಲಿಯ **ಶರ್ವಾದಿವಂದ್ಯಚರಣಃ** ಎಂಬ ಪದದಿಂದ ಸೂಚಿತ. ಶ್ರೀಮದ್ಭಾಗವತಪುರಾಣದಲ್ಲಿ ಈ ಬಗ್ಗೆ ಹೆಚ್ಚಿನ ವಿವರಗಳು ಬಂದಿವೆ:

**ಯತ್ಪಾದಮೂಲಮುಪಸೃಜ್ಯ ನರೇಂದ್ರ ಪೂರ್ವೇ**
**ಶರ್ವಾದಯೋ ಭ್ರಮಮಿಮಂ ದ್ವಿತಯಂ ವಿಸೃಜ್ಯ ।**
**ಸದ್ಯಸ್ತದೀಯಮತುಲಾನಧಿಕಂ ಮಹಿತ್ವಂ**
**ಪ್ರಾಪುರ್ಭವಾನಪಿ ಪರಂ ನಚಿರಾದುಪೈತಿ ॥ - ಭಾಗವತ(೬/೧೫/೩೬)**

**ರುದ್ರಾದ್ಯಾಃ ಶೇಷದೇಹಸ್ಥಂ ವಿಷ್ಣುಂ ಸಂಕರ್ಷಣಾಭಿಧಮ್ ।**
**ಶೇಷಾಂತರ್ಯಾಮಿಣಂ ಜ್ಞಾತ್ವಾ ಸ್ವಪದಂ ಪ್ರಾಪುರಂಜಸಾ ॥**
**- ಭಾಗವತತಾತ್ಪರ್ಯೋದಾಹೃತ(೬/೧೫/೩೬) ತಂತ್ರಭಾಗವತವಚನ**

**ನಾಗಾರಿರುಗ್ರಬಲಪೌರುಷ ಆಪ ವಿಷ್ಣೋ-**
**ರ್ವಾಹತ್ವಮುತ್ತಮಜವೋ ಯದಪಾಂಗಲೇಶಮ್ ।**
**ಆಶ್ರಿತ್ಯ ಶಕ್ರಮುಖದೇವಗಣೈರಚಿಂತ್ಯಂ**
**ಶ್ರೀಯರ್ತ್ಕಟಾಕ್ಷಬಲವತ್ಯಜಿತಂ ನಮಾಮಿ ॥ ೮ ॥**

**ಪ :** ನಾಗಾರಿಃ, ಉಗ್ರಬಲಪೌರುಷಃ, ಆಪ, ವಿಷ್ಣೋಃ, ವಾಹತ್ವಮ್, ಉತ್ತಮಜವಃ, ಯದಪಾಂಗಲೇಶಮ್, ಆಶ್ರಿತ್ಯ, ಶಕ್ರಮುಖದೇವಗಣೈಃ, ಅಚಿಂತ್ಯಮ್, ಶ್ರೀಃ, ಯತ್ಕಟಾಕ್ಷಬಲವತೀ, ಅಜಿತಮ್, ನಮಾಮಿ।

**ಅ :** ಯದಪಾಂಗಲೇಶಮ್, ಆಶ್ರಿತ್ಯ, ಉಗ್ರಬಲಪೌರುಷಃ, ಉತ್ತಮಜವಃ, ನಾಗಾರಿಃ, ಶಕ್ರಮುಖದೇವಗಣೈಃ, ಅಚಿಂತ್ಯಮ್, ವಿಷ್ಣೋಃ, ವಾಹತ್ವಮ್, ಆಪ, ಶ್ರೀಃ, ಯತ್ಕಟಾಕ್ಷಬಲವತೀ, ಅಜಿತಮ್, ನಮಾಮಿ।

**ಪ್ರ.ಪ. : ಯದಪಾಂಗಲೇಶಮ್** – ಯಾರ ಕುಡಿನೋಟಲೇಶವನ್ನು; **ಆಶ್ರಿತ್ಯ** – ಆಶ್ರಯಿಸಿ; **ಉಗ್ರಬಲಪೌರುಷಃ** – ಉತ್ಕೃಷ್ಟವಾದ ಬಲ ಹಾಗೂ ಪೌರುಷಗಳಿಂದ ಕೂಡಿದ; **ಉತ್ತಮಜವಃ** – ಉತ್ತಮ ವೇಗವುಳ್ಳ; **ನಾಗಾರಿಃ** – ನಾಗಾರಿಯಾದ ಗರುಡನು; **ಶಕ್ರಮುಖದೇವಗಣೈಃ** – ಇಂದ್ರ ಮೊದಲಾದ ದೇವತೆಗಳ ಗುಂಪುಗಳಿಂದ; **ಅಚಿಂತ್ಯಮ್** – ಚಿಂತಿಸಲೂ ಆಗದ ; **ವಿಷ್ಣೋಃ** – ವಿಷ್ಣುವಿನ; **ವಾಹತ್ವಮ್** – ವಾಹನತ್ವವನ್ನು; **ಆಪ** – ಪಡೆದನೋ; (ಸಾ–ಅಂತಹ) **ಶ್ರೀಃ** – ಮಹಾಲಕ್ಷ್ಮಿಯು; **ಯತ್ಕಟಾಕ್ಷಬಲವತೀ** – ಯಾರ ಕುಡಿನೋಟದಿಂದ ಬಲ ಪಡೆದಿರುವಳೋ; **ಅಜಿತಂ** – ಅಂತಹ ಅಜಿತ ನಾಮಕ ಶ್ರೀಕೃಷ್ಣನನ್ನು; **ನಮಾಮಿ** – ನಮಸ್ಕರಿಸುವೆನು.

**ಉರಗಗಳ ತರಿವಂಥ ಬಹುಬಲನು ವಿಕ್ರಮನು ಹಿರಿವೇಗ ಗರುಡ ತಾನು**
**ಇಂದ್ರಾದಿದಿವಿಜರಿಗೆ ಚಿಂತನೆಗು ನಿಲುಕದಿಹ ಶ್ರೀಹರಿಯ ಹೊರುವ ಭಾಗ್ಯ।**
**ಆರ ಕೊನೆಗಣ್ಣಲವನೋಟವನು ಆಶ್ರಯಿಸಿ ನಲಿವಿಂದ ಪೊಂದಿ ಇಹನೊ**
**ಅಂಥ ಸಿರಿಹಿರಿರಮೆಗು ಚೆಲುನೋಟಲವದಿಂದ ಬಲವೀವ ಹರಿಗೆ ನಮನಂ ೭**

**ಅನು : ಯಾರ ಕುಡಿನೋಟಲೇಶವನ್ನು ಆಶ್ರಯಿಸಿ ಉತ್ಕೃಷ್ಟವಾದ ಬಲ ಹಾಗೂ ಪೌರುಷಗಳಿಂದ ಕೂಡಿದ, ಉತ್ತಮ ವೇಗವುಳ್ಳ ನಾಗಾರಿಯಾದ ಗರುಡನು ಇಂದ್ರ ಮೊದಲಾದ ದೇವತೆಗಳ ಗುಂಪುಗಳಿಂದ ಚಿಂತಿಸಲೂ ಆಗದ ವಿಷ್ಣುವಿನ ವಾಹನತ್ವವನ್ನು ಪಡೆದನೋ, ಅಂತಹ ಮಹಾಲಕ್ಷ್ಮಿಯು ಯಾರ ಕುಡಿನೋಟದಿಂದ ಬಲ ಪಡೆದಿರುವಳೋ ಅಂತಹ ಅಜಿತನಾಮಕ ಶ್ರೀಕೃಷ್ಣನನ್ನು ನಮಸ್ಕರಿಸುವೆನು.**

ವಿ : ೧. ಗರುಡ ಶೇಷ ರುದ್ರರು ತಾರತಮ್ಯದಲ್ಲಿ ಸಮಾನರು; ಶೇಷರುದ್ರರಂತೆ ಗರುಡನು ಸಹ ಲಕ್ಷ್ಮೀನಾರಾಯಣರ ಅನುಗ್ರಹಬಲದಿಂದಲೇ ಶ್ರೀವಿಷ್ಣುವಿನ ವಾಹನ ಎಂಬ ಹಿರಿಮೆಯನ್ನು ಪಡೆದುಕೊಂಡವನು ಎಂದು ಭಾವ.

೨. ಇಂದ್ರಾದಿ ದೇವತೆಗಳಿಗೆ ಚಿಂತನೆಗೂ ಎಟುಕದ, ಗರುಡನಿಗೆ ಶ್ರೇಷ್ಠ ಪದವಿಯನ್ನು ಅನುಗ್ರಹಿಸಿದವಳು ಮಹಾಲಕ್ಷ್ಮಿ ಎಂಬುದು ಇಲ್ಲಿಯ ವಿಶೇಷಾಂಶ. ಇಂದ್ರ ಮಾತ್ರವಲ್ಲದೆ

ಅವನಂತಹವರು ಗುಂಪುಗುಂಪಾಗಿ ಪ್ರಯತ್ನಿಸಿದರೂ ಪಡೆಯಲಾಗದಂತಹ ಶ್ರೇಷ್ಠಪದವಿ ಗರುಡನದು ಎಂದರ್ಥ.

೩. ಗರುಡನು ಉಗ್ರಬಲನೂ, ಉಗ್ರಪೌರುಷನೂ, ಉತ್ತಮ ವೇಗವನ್ನು ಹೊಂದಿದವನೂ ಆದವನು ಎಂಬ ವಿವರ ಮಹಾಭಾರತದಲ್ಲಿ ಬಂದಿದೆ.

೪. ಗರುಡನಿಗೆ ಅವತಾರವಿಲ್ಲ ಎಂಬುದು ವಿಶೇಷ. ಹಾಗಿದ್ದರೂ ಸಹ ಶ್ರೀಹರಿಯ ಆದೇಶದಂತೆ ರಾಮಾಯಣ, ಮಹಾಭಾರತಗಳಲ್ಲಿ ಹರಿದ್ವೇಷಿಗಳ ವಿನಾಶವನ್ನು, ಸಜ್ಜನರ ಸಂರಕ್ಷಣೆಯನ್ನು ಯಥೋಚಿತವಾಗಿ ಅದ್ಭುತರೀತಿಯಲ್ಲಿ ಮಾಡಿದ ವಿವರ ನಿರೂಪಿತವಾಗಿದೆ.

೫. ಇಲ್ಲಿಯ **ಶಕ್ರಮುಖದೇವಗಣೈರಚಿಂತ್ಯಂ** ಹಾಗೂ **ಅನ್ಯಸುರೈರ್ದುರಾಪಾಂ** ಎಂಬ ಹಿಂದಿನ ಶ್ಲೋಕದಲ್ಲಿನ ಮಾತು ಶೇಷ ಹಾಗೂ ಗರುಡರ [೧]ಪದವಿಗಳು ಆಯಾ ಪದವಿಗೆ ಅರ್ಹರಾದವರಿಗೆ ಮಾತ್ರವೇ ಲಕ್ಷ್ಮೀನಾರಾಯಣರ ಅನುಗ್ರಹದಿಂದ ಲಭಿಸುವವು; ಅನರ್ಹರಿಗೆ ಸರ್ವಥಾ ಅಶಕ್ಯ. ಅದಕ್ಕೆ ಮಾಡುವ ಪ್ರಯತ್ನವೂ ಸಹ ಅತ್ಯಂತ ಅನರ್ಥಕರ ಎಂಬ ವಿಶೇಷಾಂಶವನ್ನು ಸೂಚಿಸುವುದು.

**ಆನಂದತೀರ್ಥಮುನಿಸನ್ಮುಖಪಂಕಜೋತ್ಥಂ**
**ಸಾಕ್ಷಾದ್ರಮಾಹರಿಮನಃಪ್ರಿಯಮುತ್ತಮಾರ್ಥಮ್ ।**
**ಭಕ್ತ್ಯಾ ಪಠತ್ಯಜಿತಮಾತ್ಮನಿ ಸನ್ನಿಧಾಯ**
**ಯಃ ಸ್ತೋತ್ರಮೇತದಭಿಯಾತಿ ತಯೋರಭೀಷ್ಟಮ್ ॥ ೯ ॥**

**॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ದ್ವಾದಶಸ್ತೋತ್ರೇ ಸಪ್ತಮೋಽಧ್ಯಾಯಃ ॥**

**ಪ :** ಆನಂದತೀರ್ಥಮುನಿಸನ್ಮುಖಪಂಕಜೋತ್ಥಮ್, ಸಾಕ್ಷಾತ್, ರಮಾಹರಿಮನಃ-ಪ್ರಿಯಮ್, ಉತ್ತಮಾರ್ಥಮ್, ಭಕ್ತ್ಯಾ, ಪಠತಿ, ಅಜಿತಮ್, ಆತ್ಮನಿ, ಸನ್ನಿಧಾಯ, ಯಃ, ಸ್ತೋತ್ರಮ್, ಏತತ್, ಅಭಿಯಾತಿ, ತಯೋಃ, ಅಭೀಷ್ಟಮ್ ।

---

೧. ಏವಂ ಸರ್ವಪದಾನಾಂ ಚ ಯೋಗ್ಯಾಃ ಸಂತಿ ಪೃಥಗ್ಗಣಾಃ ।
ತಸ್ಮಾದನಾದ್ಯನಂತಂ ಹಿ ತಾರತಮ್ಯಂ ಚಿದಾತ್ಮನಾಮ್ ॥
ತಚ್ಚ ನೈವಾನ್ಯಥಾ ಕರ್ತುಂ ಶಕ್ಯಂ ಕೇನಾಪಿ ಕುತ್ರಚಿತ್ ।
ಅಯೋಗ್ಯಮಿಚ್ಛನ್ ಪುರುಷಃ ಪತತ್ಯೇವ ನ ಸಂಶಯಃ ॥
ತಸ್ಮಾದ್ಯೋಗ್ಯಾನುಸಾರೇಣ ಸೇವ್ಯೋ ವಿಷ್ಣುಃ ಸದೈವ ಹಿ । – ಮ.ಭಾ.ತಾ.ನಿ. (೧/೯೪-೯೬)

**ಅ :** ಯಃ, ಅಜಿತಮ್, ಆತ್ಮನಿ, ಸನ್ನಿಧಾಯ, ಆನಂದತೀರ್ಥಮುನಿಸನ್ಮುಖಪಂಕಜೋ- ತ್ಥಮ್, ಉತ್ತಮಾರ್ಥಮ್, ಏತತ್, ಸ್ತೋತ್ರಮ್, ಭಕ್ತ್ಯಾ, ಪಠತಿ, ಸಃ, ತಯೋಃ, ಅಭೀಷ್ಟಮ್, ಅಭಿಯಾತಿ ।

**ಪ್ರ.ಪ. :** **ಯಃ** – ಯಾವನು; **ಅಜಿತಮ್** – ಅಜಿತನಾದ ಶ್ರೀಕೃಷ್ಣನನ್ನು; **ಆತ್ಮನಿ** – ಮನಸ್ಸಿನಲ್ಲಿ; **ಸನ್ನಿಧಾಯ** – ಧ್ಯಾನಿಸುತ್ತಾ; **ಆನಂದತೀರ್ಥಮುನಿಸನ್ಮುಖಪಂಕಜೋತ್ಥಮ್** – ಆನಂದತೀರ್ಥರೆಂಬ ಮುನಿಗಳ ಉತ್ತಮ ಮುಖಕಮಲದಿಂದ ಹೊರಹೊಮ್ಮಿದ; **ಉತ್ತಮಾರ್ಥಮ್** – ಉತ್ತಮವಾದ ಅರ್ಥವುಳ್ಳ; **ಏತತ್** – ಈ; **ಸ್ತೋತ್ರಮ್** – ಸ್ತೋತ್ರವನ್ನು; **ಭಕ್ತ್ಯಾ** – ಭಕ್ತಿಯಿಂದ; **ಪಠತಿ** – ಪಠಿಸುವರೋ; **ಸಃ** – ಅವನು; **ತಯೋಃ** – ಅವರಿಬ್ಬರ ಅನುಗ್ರಹದಿಂದ; **ಅಭೀಷ್ಟಮ್** – ಅಭಿಲಾಷೆಯನ್ನು; **ಅಭಿಯಾತಿ** – ಪೂರೈಸಿಕೊಳ್ಳುವನು.

**ಆನಂದತೀರ್ಥಾರ್ಯಮುನಿವರ್ಯಮುಖವೆಂಬ ಕಮಲದಿಂದುದಿಸಿ ಬಂದ**
**ಶ್ರೀಹರಿಯ ಸಿರಿರಮೆಯ ಮನವನ್ನು ಮೆಚ್ಚಿಸುವ ಪರಮಾರ್ಥಯುಕ್ತವಾದ ।**
**ಹರಿಯನ್ನು ಭಕುತಿಯಲಿ ಮನದೊಳಗೆ ಚಿಂತಿಸುತ ಈ ಸ್ತವನ ಪಠಿಸುವವನು**
**ಹೊಂದುವನು ನಿಶ್ಚಯದಿ ಸರ್ವೇಷ್ಟಸಿದ್ಧಿಯನು ಅವರೀರ್ವರೊಲುಮೆಯಿಂದ ೯**

॥ ದ್ವಾದಶಸ್ತೋತ್ರದ ಕನ್ನಡಪದ್ಯಾನುವಾದದಲ್ಲಿ ಏಳನೆಯ ಅಧ್ಯಾಯ ಮುಕ್ತಾಯವಾಯಿತು ॥

**ಅನು : ಯಾರು ಅಜಿತನಾದ ಶ್ರೀಕೃಷ್ಣನನ್ನು ಮನಸ್ಸಿನಲ್ಲಿ ಧ್ಯಾನಿಸುತ್ತಾ ಆನಂದತೀರ್ಥರೆಂಬ ಮುನಿಗಳ ಉತ್ತಮ ಮುಖಕಮಲದಿಂದ ಹೊರಹೊಮ್ಮಿದ ಉತ್ತಮವಾದ ಅರ್ಥವುಳ್ಳ ಈ ಸ್ತೋತ್ರವನ್ನು ಭಕ್ತಿಯಿಂದ ಪಠಿಸುವರೊ, ಅವರು ಅವರಿಬ್ಬರ ಅನುಗ್ರಹದಿಂದ ತಮ್ಮ ಅಭಿಲಾಷೆಯನ್ನು ಪೂರೈಸಿಕೊಳ್ಳುವರು.**

ವಿ : ೧. ಶ್ರೀಸ್ತುತಿ ಎಂದು ಪ್ರಸಿದ್ಧವಾದ ಇದನ್ನು ಬರೆದವರು ಆನಂದತೀರ್ಥರು ಎಂಬ ಮುನಿಗಳು. ಇದನ್ನು ಶ್ರೀಹರಿಯನ್ನು ಮನಸ್ಸಿನಲ್ಲಿಟ್ಟುಕೊಂಡು ಏಕಾಗ್ರತೆಯಿಂದ ಪಠಿಸುವವರಿಗೆ ದೊರೆಯುವ ಫಲದ ವಿವರ ಇದರಲ್ಲಿದೆ.

೨. ಇಲ್ಲಿ ಮುನಿಯೆಂದರೆ ಹಿಂದೆ ತಿಳಿಸಿರುವಂತೆ, ಓಂಕಾರವನ್ನು ಪರಿಪೂರ್ಣವಾಗಿ ತಿಳಿದು, ಆರಾಧಿಸುವ ಋಜುಯೋಗಿಗಳು ಎಂದರ್ಥ.

೩. **ಸನ್ಮುಖ** ಎಂದರೆ **ಸದಿತಿ ಪ್ರಾಣಃ** ಅವರ ಮುಖದಿಂದ ಹೊರಹೊಮ್ಮಿದ ಎಂದರೆ ಅನಾಯಾಸವಾಗಿ ರಚಿತವಾದ ಎಂದರ್ಥ.

೪. ಲಕ್ಷ್ಮೀನಾರಾಯಣರ ಮನಸ್ಸಿಗೆ ತುಂಬಾ ಪ್ರಿಯವಾದ ಇದನ್ನು ಭಕ್ತಿಪೂರ್ವಕವಾಗಿ ಪಠಿಸುವವರ ಸಕಲ ಅಭೀಷ್ಟಗಳು ಈಡೇರುವುದು ಎಂದು ತಿಳಿಯಬೇಕು.

೫. ಇಲ್ಲಿ **ಅಜಿತ** ಎಂಬುದಕ್ಕೆ ಸಮುದ್ರಮಥನ ಕಾಲದಲ್ಲಿ ವಿಶೇಷವಾಗಿ ಪ್ರಾದುರ್ಭವಿಸಿ, ಅನುಗ್ರಹಿಸಿದ ಅಜಿತ ಎಂಬ ರೂಪ ವಿವಕ್ಷಿತವಾಗಿದ್ದು, ಅದರ ವರ್ಣನೆ ಭಾಗವತದಲ್ಲಿ ಬಂದಿದೆ[೧].

೬. ಅದರಂತೆ ಶ್ರೀಹರಿಯ ಶ್ರೀರಾಮರೂಪ ಹಾಗೂ ಶ್ರೀಕೃಷ್ಣರೂಪಗಳೂ ಸಹ ಅಜಿತ ಎನ್ನಿಸಿವೆ ಎಂಬ ವಿಶೇಷಾಂಶ ಆ ರೂಪಗಳ ಮಂತ್ರಗಳ ಧ್ಯಾನಶ್ಲೋಕದಲ್ಲಿ ಬಂದಿವೆ:

**'...ಹನುಮನ್ಮುಖೇಷು ಸಂದರ್ಶಯಂತಮ್ ಅಜಿತಂ ...' -ರಾಮಮಂತ್ರಧ್ಯಾನಶ್ಲೋಕ**

**'ದೋರ್ಭಿರ್ದಧಾನಮ್ ಅಜಿತಂ ...' - ಕೃಷ್ಣಮಂತ್ರದ ಧ್ಯಾನಶ್ಲೋಕ**

೭. ಶ್ರೀಹರಿಯ ರಾಮರೂಪ ಹಾಗೂ ಕೃಷ್ಣರೂಪಗಳಲ್ಲಿಯೇ ಸಕಲ ದೇವದೈತ್ಯರ ಸಾಧನೆಯ ಸಂಪೂರ್ತಿ ವಿಶೇಷವಾಗಿ ನಡೆಯಿತು ಎಂಬ ಮಹಾಭಾರತತಾತ್ಪರ್ಯನಿರ್ಣಯದ ಮಾತಿನಿಂದ ಈ ಎರಡೂ ರೂಪಗಳ ಸ್ತೋತ್ರಕ್ಕೆ ವಿಶೇಷಮಹತ್ತ್ವವಿದೆ. ಇದಕ್ಕೆ ವಾಸುದೇವ ಎಂಬುದಾಗಿ ಕೃಷ್ಣರೂಪದ ಉಲ್ಲೇಖ ಮೊದಲ ಅಧ್ಯಾಯದ ಮೊದಲ ಶ್ಲೋಕದಲ್ಲೂ, ರಾಮಸ್ಯ ಎಂಬುದಾಗಿ ರಾಮರೂಪದ ಉಲ್ಲೇಖ ಅದರ ಒಂಭತ್ತನೆಯ ಶ್ಲೋಕದಲ್ಲಿಯೂ ಬಂದಿರುವುದು ಗಮಕ. ಈ ಹಿನ್ನೆಲೆಯಲ್ಲಿ ಇದರಲ್ಲಿ ಬಂದಿರುವ ಅಜಿತರೂಪದ ಪ್ರಸ್ತಾಪ ಅತ್ಯಂತವಿಶೇಷಮಹತ್ತ್ವವನ್ನು ಹೊಂದಿದೆ.

೮. ಲಕ್ಷ್ಮೀನಾರಾಯಣರ ಹಿರಿಮೆ ಹಾಗೂ ಬ್ರಹ್ಮಾದಿ ಇತರ ದೇವತೆಗಳ ಉಪಾಸನೆಯ ಬಗೆ ಎರಡನ್ನೂ ಸಹ ಅತ್ಯಂತ ವಿಶಿಷ್ಟರೀತಿಯಲ್ಲಿ ನಿರೂಪಿಸುವ ಈ ಸ್ತೋತ್ರ ತನ್ನ ರಚನಾ ಕೌಶಲದಲ್ಲೂ ಅತ್ಯಪೂರ್ವ. ಒಂದು ರೀತಿಯಲ್ಲಿ ಇದು ಗೋಲಕತ್ರಯ ಚಿಂತನೆಯ ಬಗ್ಗೆಯೂ ಬೆಳಕು ಚೆಲ್ಲುವುದು. ಇಲ್ಲಿಯ 'ಉತ್ತಮಾರ್ಥಂ' ಎಂಬ ಮಾತಿನಿಂದ ಈ ಸ್ತೋತ್ರಕ್ಕೆ ಹಾಗೂ ಇತರ ಸ್ತೋತ್ರಗಳಿಗೆ ಹಾಗೂ ಅವರ ಇತರ ಎಲ್ಲ ಕೃತಿಗಳಿಗೂ ಉತ್ತಮವಾದ ಅರ್ಥವಿದೆ ಎಂದು ಭಾವ.

★★★★★

೧. ಮಥ್ಯಮಾನಾತ್ ತದಾ ಸಿಂಧೋರ್ದೇವಾಸುರವರೂಥಪೈಃ।
ಯದಾ ಸುಧಾ ನ ಜಾಯೇತ ನಿರ್ಮಮಂಥಾಜಿತಃ ಸ್ವಯಮ್ ॥
ಮೇಘಶ್ಯಾಮಃ ಕನಕಪರಿಧಿಃ ಕರ್ಣವಿದ್ಯೋತವಿದ್ಯು-
ನ್ಮೂರ್ಧ್ನಿ ಭ್ರಾಜದ್ವಿಲುಲಿತವನಸ್ರಗ್ಧರೋ ರಕ್ತನೇತ್ರಃ।
ಜೈತ್ರೈರ್ದೋರ್ಭಿರ್ಜಗದಭಯದೈರ್ದಂದಶೂಕಂ ಗೃಹೀತ್ವಾ
ಮಥ್ನನ್ ಮಥ್ನಾ ಪ್ರತಿಗಿರಿರಿವಾಶೋಭತಾಥೋ ಧೃತಾದ್ರಿಃ॥ - ಭಾಗವತ (೮/೭/೧೬,೧೭)

## ೮. ಅಷ್ಟಮಾಧ್ಯಾಯ (ಹರಿಪ್ರಸಾದಪ್ರಾರ್ಥನಾಸ್ತೋತ್ರ)

**ವಂದಿತಾಶೇಷವಂದ್ಯೋರುವೃಂದಾರಕಂ**
**ಚಂದನಾಚರ್ಚಿತೋದಾರಪೀನಾಂಸಕಮ್ ।**
**ಇಂದಿರಾಚಂಚಲಾಪಾಂಗನೀರಾಜಿತಂ**
**ಮಂದರೋದ್ಧಾರಿವೃತ್ತೋದ್ಭುಜಾಭೋಗಿನಮ್ ॥**
**ಪ್ರೀಣಯಾಮೋ ವಾಸುದೇವಂ**
**ದೇವತಾಮಂಡಲಾಖಂಡಮಂಡನಮ್ ॥ ೧ ॥**

**ಪ :** ವಂದಿತಾಶೇಷವಂದ್ಯೋರುವೃಂದಾರಕಮ್, ಚಂದನಾಚರ್ಚಿತೋದಾರ-ಪೀನಾಂಸಕಮ್ ಇಂದಿರಾಚಂಚಲಾಪಾಂಗನೀರಾಜಿತಮ್, ಮಂದರೋದ್ಧಾರಿ-ವೃತ್ತೋದ್ಭುಜಾಭೋಗಿನಮ್, ಪ್ರೀಣಯಾಮಃ, ವಾಸುದೇವಮ್, ದೇವತಾಮಂಡಲಾ-ಖಂಡಮಂಡನಮ್ ।

**ಅ :** ವಂದಿತಾಶೇಷವಂದ್ಯೋರುವೃಂದಾರಕಮ್, ಚಂದನಾಚರ್ಚಿತೋದಾರ-ಪೀನಾಂಸಕಮ್ ಇಂದಿರಾಚಂಚಲಾಪಾಂಗನೀರಾಜಿತಮ್, ಮಂದರೋದ್ಧಾರಿ-ವೃತ್ತೋದ್ಭುಜಾಭೋಗಿನಮ್, ದೇವತಾಮಂಡಲಾಖಂಡಮಂಡನಮ್, ವಾಸುದೇವಮ್, ಪ್ರೀಣಯಾಮಃ ।

**ಪ್ರ.ಪ. : ವಂದಿತಾಶೇಷವಂದ್ಯೋರುವೃಂದಾರಕಮ್** – ವಂದ್ಯರಾದ ಸಕಲ ದೇವತೆಗಳ ವೃಂದದಿಂದ ವಂದ್ಯನಾದ; **ಚಂದನಾಚರ್ಚಿತೋದಾರಪೀನಾಂಸಕಮ್** – ಶ್ರೀಗಂಧಲೇಪಿತವಾದ ಶ್ರೇಷ್ಠವಾದ ಪುಷ್ಟ ಭುಜಗಳುಳ್ಳ; **ಇಂದಿರಾಚಂಚಲಾ-ಪಾಂಗನೀರಾಜಿತಮ್** – ಮಹಾಲಕ್ಷ್ಮಿಯ ಚಂಚಲವಾದ ಕುಡಿನೋಟದಿಂದ ನೀರಾಜಿತನಾದ; **ಮಂದರೋದ್ಧಾರಿವೃತ್ತೋದ್ಭುಜಾಭೋಗಿನಮ್** – ಮಂದರವನ್ನು ಎತ್ತಿದಂತಹ ದುಂಡಾದ ಶ್ರೇಷ್ಠ ಭುಜಗಳಿಂದ ಕೂಡಿದ; **ದೇವತಾಮಂಡಲಾ-ಖಂಡಮಂಡನಮ್** – ದೇವತಾವೃಂದಕ್ಕೆ ಪರಿಪೂರ್ಣ ಅಲಂಕಾರನಾದ; [೧]**ವಾಸುದೇವಮ್** – ವಾಸುದೇವನನ್ನು; **ಪ್ರೀಣಯಾಮಃ** – ಒಲಿಸೋಣ.

**ವಾಸುದೇವ ಶ್ರೀಶ ಹರಿಯ ನಿತ್ಯತೋಷಣ ।**
**ಸಕಲ ದೇವವೃಂದಕೆಲ್ಲ ಅವನೆ ಭೂಷಣ ॥ ಪಲ್ಲವಿ ॥**

---

೧. ವಾನಾತ್ ಸೂತೇರ್ದೇವನಾದ್ವಾಸುದೇವೋ ವಾಸಾದ್ ದ್ಯುತೇಶ್ಛಾದನಾತ್ ಕ್ರೀಡಯಾ ವಾ ।
ಬಲಾದಸುತ್ವಾದ್ ದಾತೃತೋ ವರ್ತನಾಚ್ಚ ತಂ ವಾಸುದೇವಂ ಪ್ರವದಂತಿ ವೇದಾಃ ॥
– ಕರ್ಮನಿರ್ಣಯೋದಾಹೃತಸೌಕರಾಯಣಶ್ರುತಿವಚನ

**ಸರ್ವವಂದ್ಯದೇವವೃಂದವಂದ್ಯ ಮೂರುತಿ**
**ಗಂಧಪೂಸಿದಂಥ ಮೈಯ್ಯ ಸುಂದರಾಕೃತಿ ।**
**ರಮೆಯ ನೋಟ ಇವಗೆ ನಿರುತ ಮಂಗಳಾರತಿ**
**ಮಂದರಾದ್ರಿ ಭುಜದಿ ಪೊತ್ತ ಪೂರ್ಣಮೂರುತಿ ॥ ೧ ॥**

**ಅನು : ವಂದ್ಯರಾದ ಸಕಲ ದೇವತೆಗಳ ವೃಂದದಿಂದ ವಂದ್ಯನಾದ, ಶ್ರೀಗಂಧಲೇಪಿತವಾದ ಶ್ರೇಷ್ಠವಾದ ಪುಷ್ಟ ಭುಜಗಳುಳ್ಳ, ಮಹಾಲಕ್ಷ್ಮಿಯ ಚಂಚಲವಾದ ಕುಡಿನೋಟದಿಂದ ನೀರಾಜಿತನಾದ, ಮಂದರವನ್ನು ಎತ್ತಿದಂತಹ ದುಂಡಾದ ಶ್ರೇಷ್ಠ ಭುಜಗಳಿಂದ ಕೂಡಿದ, ದೇವತಾವೃಂದಕ್ಕೆ ಪರಿಪೂರ್ಣ ಅಲಂಕಾರನಾದ ವಾಸುದೇವನನ್ನು ಒಲಿಸೋಣ.**

ವಿ : ೧. ಈ ಸ್ತೋತ್ರದಲ್ಲಿ ಪ್ರೀಣಯಾವೋ ವಾಸುದೇವಂ ಎಂಬ ಮಾತು ಪಲ್ಲವಿಯಾಗಿದ್ದು ಪ್ರತಿಶ್ಲೋಕಕ್ಕೂ ಅನ್ವಯಿಸುವುದು. ವಾಸುದೇವರೂಪವು ಮುಕ್ತಿಪ್ರದಾಯಕರೂಪವಾದ್ದರಿಂದ ಅದರ ಒಲುಮೆಯನ್ನೇ ಇಲ್ಲಿ ಪ್ರಾರ್ಥಿಸಲಾಗಿದೆ ಎಂದು ತಿಳಿಯಬೇಕು.

೨. ಈ ಉತ್ಕೃಷ್ಟಗೇಯ ಗೀತೆಯು ದ್ವಿತೀಯಾಕ್ಷರ ಪ್ರಾಸ ಹಾಗೂ ಹೆಚ್ಚಾಗಿ ಪ್ರತಿಪಾದದ ಕೊನೆಯಲ್ಲಿ ಅನುಸ್ವಾರದಿಂದ ಕೂಡಿದ್ದು, ಶ್ರೇಷ್ಠ ಹಾಡುಗಬ್ಬ ಎನಿಸಿದೆ.

೩. ಶ್ರೀಹರಿಯು ಸಕಲ ಶ್ರೇಷ್ಠ ದೇವತೆಗಳಿಂದ ವಂದಿತನಾದವನು ಎಂದರೆ ಸರ್ವಶ್ರೇಷ್ಠ ಎಂದರ್ಥ. ಚಂದನ ಎಂದರೆ ಶ್ರೀಗಂಧ ಎಂದರ್ಥ. ಗಂಧ ಎಂಬುದಕ್ಕೆ ಲೇಶ ಎಂದು ಅರ್ಥವಿದೆ. ಇದರಿಂದ ಶ್ರೀಹರಿಗೆ ಮಾಡುವ ಪ್ರತಿಯೊಂದು ಅಲಂಕಾರವೂ ಸಹ ಅವನ ಒಟ್ಟು ಹಿರಿಮೆಗೆ ಅತ್ಯಲ್ಪವೇ ಹೊರತು ಸರ್ವಥಾ ಅನುರೂಪ ಎನಿಸಲಾರದು ಎಂಬ ವಿಶೇಷಾಂಶ ಇದರಿಂದ ಸೂಚಿತ.

೪. ಮಹಾಲಕ್ಷ್ಮಿಯ ಚಂಚಲ ಕುಡಿನೋಟದಿಂದ ರಾಜಿತ ಎಂಬ ಕಾವ್ಯ ಸೌಂದರ್ಯ ಅದ್ಭುತವಾದುದು. ಇದರಿಂದ ಸರ್ವೋತ್ಕೃಷ್ಟಸ್ತ್ರೀಯಾದ ಮಹಾಲಕ್ಷ್ಮಿಯು ಶ್ರೀಹರಿಯ ಅದ್ಭುತವಾದ ಸೊಬಗನ್ನು ಅನವರತ ಆಸ್ವಾದಿಸುತ್ತಿರುವಳು ಎಂಬ ವಿಶೇಷಾಂಶ ಇದರಿಂದ ಸೂಚಿತ.

೫. ಇದು ಒಂದು ರೀತಿಯಲ್ಲಿ ನೀರಾಜನದ ಅಂತರಾರ್ಥವನ್ನು ತಿಳಿಸಿಕೊಡುವ ಅಪೂರ್ವತೆಯನ್ನು ಹೊಂದಿದೆ.

೬. ಶ್ರೀಹರಿಯ ತೋಳುಗಳು ಎಷ್ಟು ಆಕರ್ಷಕವಾದವೋ, ಅಷ್ಟೇ ಬಲಿಷ್ಠವಾದುವು ಎಂಬುದನ್ನು ಅವುಗಳು ಮಂದರಪರ್ವತವನ್ನು ಎತ್ತಿದ ಉಲ್ಲೇಖದಿಂದ ತಿಳಿಸಲಾಗಿದೆ.

ಸಕಲ ದೇವತೆಗಳು ಒಟ್ಟಾಗಿ ಪ್ರಯತ್ನಿಸಿದರೂ ಅದನ್ನು ಎತ್ತಲು ಊಹಿಸಲು ಸಾಧ್ಯವಾಗದ ಕಾರ್ಯವನ್ನು ಕೇವಲ ತನ್ನ ತೋಳುಗಳಿಂದ ಎತ್ತಿದ ಶ್ರೀಹರಿಯ ಸಾಮರ್ಥ್ಯ ಅನುಪಮ ಎಂದು ಭಾವ.

೭. ಇಂತಹ ಶ್ರೀಹರಿಯನ್ನು ಸಂತೋಷಪಡಿಸೋಣ ಎಂಬ ಮಾತಿನಿಂದ ಅವನ ಪ್ರಸಾದಕ್ಕೆ ಭಾಗಿಯಾಗೋಣ ಎಂಬ ಅರ್ಥ ಸೂಚಿತ. ಅಂತಹ ಪ್ರಸಾದವು ಮುಕ್ತಿಗೆ ಸಾಧನ ಎಂಬುದು ವಿಶೇಷ. ಅಂತಹ ಪ್ರಸಾದವು ಉತ್ತಮ, ಮಧ್ಯಮ, ಹಾಗೂ ಅಧಮ ಎಂದು ಮೂರುಬಗೆಯಾಗಿದ್ದು, ಅಧಮ ಪ್ರಸಾದದಿಂದ ಸ್ವರ್ಗಲೋಕಪ್ರಾಪ್ತಿ, ಮಧ್ಯಮ ಪ್ರಸಾದದಿಂದ ಜನೋಲೋಕಾದಿಪ್ರಾಪ್ತಿ ಹಾಗೂ ಉತ್ತಮಪ್ರಸಾದದಿಂದ ವೈಕುಂಠಪ್ರಾಪ್ತಿ. ಅಂತಹ ಉತ್ತಮಪ್ರಸಾದ ಲಭಿಸುವುದು ಜ್ಞಾನದಿಂದ ಮಾತ್ರ. ಆದ್ದರಿಂದ ತತ್ತ್ವಜ್ಞಾನವು ಲಭಿಸಿ, ಮುಕ್ತಿಪ್ರಾಪ್ತಿಗೆ ಕಾರಣವಾಗುವ ಉತ್ತಮಪ್ರಸಾದವನ್ನು ಪಡೆಯೋಣ ಎಂದು ಭಾವ.

**[೧]ಸೃಷ್ಟಿಸಂಹಾರಲೀಲಾವಿಲಾಸಾತತಂ**
**ಪುಷ್ಟಷಾಡ್ಗುಣ್ಯಸದ್ವಿಗ್ರಹೋಲ್ಲಾಸಿನಮ್ ।**
**ದುಷ್ಟನಿಃಶೇಷಸಂಹಾರಕರ್ಮೋದ್ಯತಂ**
**ಹೃಷ್ಟಪುಷ್ಟಾತಿಶಿಷ್ಟಪ್ರಜಾಸಂಶ್ರಯಮ್ ॥**
**ಪ್ರೀಣಯಾಮೋ ವಾಸುದೇವಂ**
**ದೇವತಾಮಂಡಲಾಖಂಡಮಂಡನಮ್ ॥ ೨ ॥**

ಪ: ಸೃಷ್ಟಿಸಂಹಾರಲೀಲಾವಿಲಾಸಾತತಮ್, ಪುಷ್ಟಷಾಡ್ಗುಣ್ಯಸದ್ವಿಗ್ರಹೋಲ್ಲಾಸಿನಮ್, ದುಷ್ಟನಿಃಶೇಷಸಂಹಾರಕರ್ಮೋದ್ಯತಮ್, ಹೃಷ್ಟಪುಷ್ಟಾತಿಶಿಷ್ಟಪ್ರಜಾಸಂಶ್ರಯಮ್, ಪ್ರೀಣಯಾಮಃ, ವಾಸುದೇವಮ್, ದೇವತಾಮಂಡಲಾಖಂಡಮಂಡನಮ್ ।

---

೧. ಸೃಷ್ಟ್ಯಾದಿಕಂ ಹರಿರ್ನೈವ ಪ್ರಯೋಜನಮಪೇಕ್ಷ್ಯ ತು ।
ಕುರುತೇ ಕೇವಲಾನಂದಾದ್ ಯಥಾ ಮತ್ತಸ್ಯ ನರ್ತನಮ್ ॥
ಪೂರ್ಣಾನಂದಸ್ಯ ತಸ್ಯೇಹ ಪ್ರಯೋಜನಮತಿಃ ಕುತಃ ।
ಮುಕ್ತಾ ಅಪ್ಯಾಪ್ತಕಾಮಾಃ ಸ್ಯುಃ ಕಿಮು ತಸ್ಯಾಖಿಲಾತ್ಮನಃ ॥ – ಬ್ರ.ಸೂ.ಭಾ.(೨/೧/೩೪)
ದೇವಸ್ಯೈಷ ಸ್ವಭಾವೋಽಯಮಾಪ್ತಕಾಮಸ್ಯ ಕಾ ಸ್ಪೃಹಾ । – ಮಾಂಡೂಕೋಪನಿಷತ್ (೧/೧೫)
ಅತೃಪ್ತಸ್ಯೈವ ಭೋಗಾರ್ಥಂ ಕ್ರೀಡಾರ್ಥಂ ತು ವಿಪಶ್ಚಿತಃ ।
ಸಾ ಚ ಕ್ರೀಡಾ ಸ್ವಭಾವೋಽಸ್ಯ ಕುತೋಽತೃಪ್ತ್ಯಾ ಸ್ಪೃಹಾ ವಿಭೋಃ ॥
– ಮಾಂಡೂಕಭಾಷ್ಯ (೧/೧೫)

**ಅ**: ಸೃಷ್ಟಿಸಂಹಾರಲೀಲಾವಿಲಾಸಾತತಮ್, ಪುಷ್ಟಷಾಡ್ಗುಣ್ಯಸದ್ವಿಗ್ರಹೋಲ್ಲಾಸಿನಮ್, ದುಷ್ಟನಿಃಶೇಷಸಂಹಾರಕರ್ಮೋದ್ಯತಮ್, ಹೃಷ್ಟಪುಷ್ಟಾತಿಶಿಷ್ಟಪ್ರಜಾಸಂಶ್ರಯಮ್, ದೇವತಾಮಂಡಲಾಖಂಡಮಂಡನಮ್, ವಾಸುದೇವಮ್, ಪ್ರೀಣಯಾಮಃ।

**ಪ್ರ.ಪ. : ಸೃಷ್ಟಿಸಂಹಾರಲೀಲಾವಿಲಾಸಾತತಮ್** –ಸೃಷ್ಟಿಸಂಹಾರರೂಪವಾದ ಲೀಲಾವಿಲಾಸದಿಂದ ಕೂಡಿರುವ; **ಪುಷ್ಟಷಾಡ್ಗುಣ್ಯಸದ್ವಿಗ್ರಹೋಲ್ಲಾಸಿನಮ್** – ಪೂರ್ಣವಾದ ಷಡ್ಗುಣಗಳ ಉತ್ತಮ ದೇಹದಿಂದ ಶೋಭಿಸುವ; **ದುಷ್ಟನಿಃಶೇಷಸಂಹಾರಕರ್ಮೋದ್ಯತಮ್** – ದುಷ್ಟರನ್ನು ನಿಃಶೇಷವಾಗಿ ಸಂಹರಿಸುವ ಕಾರ್ಯದಲ್ಲಿ ತೊಡಗಿರುವ; **ಹೃಷ್ಟಪುಷ್ಟಾತಿಶಿಷ್ಟಪ್ರಜಾಸಂಶ್ರಯಮ್** – ಹರ್ಷದಿಂದ ತುಂಬಿದ ತುಂಬಾ ವಿಶಿಷ್ಟರಾದ ಪ್ರಜೆಗಳಿಗೆ ಆಸರೆಯಾದ; **ದೇವತಾಮಂಡಲಾಖಂಡಮಂಡನಮ್** – ದೇವತಾವೃಂದಕ್ಕೆ ಪರಿಪೂರ್ಣ ಅಲಂಕಾರನಾದ; **ವಾಸುದೇವಮ್** – ವಾಸುದೇವನನ್ನು; **ಪ್ರೀಣಯಾಮಃ** – ಒಲಿಸೋಣ.

**ಸೃಷ್ಟಿಪ್ರಳಯಯೆಂಬ ಎಲ್ಲ ಲೀಲೆ ಮಾಡುವ**
**ತುಂಬುಗುಣದ ರೂಪನಾಗಿ ನಿರುತ ಹೊಳೆಯುವ।**
**ದುಷ್ಟ ಜನರ ವೃಂದವನ್ನು ತರಿದು ಹಾಕುವ**
**ಶಿಷ್ಟ ಜನಕೆ ನೆಲೆಯು ಎನಿಸಿ ಮೋದಪಡಿಸುವ ॥ ೨ ॥**

**ಅನು: ಶ್ರೀಹರಿಯು ಸೃಷ್ಟಿಸಂಹಾರರೂಪದ ಲೀಲಾವಿಲಾಸದಿಂದ ಕೂಡಿದವನು, ಪೂರ್ಣವಾದ ಷಡ್ಗುಣಗಳ ಉತ್ತಮದೇಹದಿಂದ ಕಂಗೊಳಿಸುವವನು, ದುಷ್ಟರನ್ನು ನಿಃಶೇಷವಾಗಿ ಸಂಹರಿಸುವ ಕಾರ್ಯದಲ್ಲಿ ತೊಡಗಿದವನು, ಹರುಷದಿಂದ ತುಂಬಿದವನು, ತುಂಬಾ ವಿಶಿಷ್ಟರಾದ ಪ್ರಜೆಗಳಿಗೆ ಆಸರೆಯಾದವನು, ದೇವತಾವೃಂದಕ್ಕೆ ಪರಿಪೂರ್ಣ ಅಲಂಕಾರನಾದ ಅಂತಹ ವಾಸುದೇವನನ್ನು ಒಲಿಸೋಣ.**

ವಿ : ೧. ಶ್ರೀಹರಿಯು ಮಾಡುವ ಶ್ರೇಷ್ಠವಾದ ಲೋಕೋಪಕಾರ ಕಾರ್ಯವೆಂದರೆ ಜಗತ್ತಿನ ಸೃಷ್ಟಿಯಿಂದ ಸಂಹಾರದವರೆಗಿನ ಸಮಗ್ರ ಕಾರ್ಯ. ಇದು ಇತರ ದೇವತೆಗಳಿಗೆ ಚಿಂತನೆಗೂ ಎಟುಕದ ಕಾರ್ಯವಾದರೆ; ಇದು ಅವನಿಗೆ ಕೇವಲ ಲೀಲೆ ಮಾತ್ರ. ಇದರಿಂದ ಅವನಿಗೆ ಯಾವ ಪ್ರಯೋಜನವೂ ಸರ್ವಥಾ ಇಲ್ಲ ಎಂದು ಭಾವ ಎಂಬ ವಿಶೇಷಾಂಶ ಇದರಿಂದ ಸೂಚಿತ.

೨. ಶ್ರೀಹರಿಯ ಆಕಾರವು ಪೂರ್ಣವಾದ ಐಶ್ವರ್ಯಾದಿ ಗುಣಗಳಿಂದ ಕಂಗೊಳಿಸುತ್ತಿದೆ; ಎಂದರೆ ಅವನದು ಪ್ರಾಕೃತ ದೇಹವಾಗಿರದೆ, ಜ್ಞಾನಾನಂದಮಯವಾದ ಅಪ್ರಾಕೃತ ದೇಹ; ಆದ್ದರಿಂದ ಅವನಿಗೆ ಹುಟ್ಟು, ಸಾವು, ರೋಗ ಯಾವ ವಿಕಾರವೂ ಸರ್ವಥಾ ಇರುವುದಿಲ್ಲ ಎಂದು ಭಾವ.

೩. ಅವನು ಮಾಡುವ ಶ್ರೇಷ್ಠವಾದ ಕಾರ್ಯವೆಂದರೆ ದುಷ್ಟರನ್ನು ಸಂಪೂರ್ಣವಾಗಿ ನಾಶ ಮಾಡುವ ಮಹತ್ಕಾರ್ಯ; ಇದು ಭಗವದ್ಗೀತೆಯ **'ವಿನಾಶಾಯ ಚ ದುಷ್ಕೃತಾಂ'** (ಗೀತಾ ೪/೮) ಎಂಬ ಮಾತಿನ ಭಾವವಾಗಿದೆ; ಸಕಲದೇವತೆಗಳು ಒಟ್ಟಾಗಿ ಸೇರಿಯೂ ಮಾಡಲಾಗದ ಸಮಸ್ತ ದುಷ್ಟ ಸಂಹಾರದ ಕಾರ್ಯವನ್ನು ಶ್ರೀಹರಿಯು ಕೇವಲ ಲೀಲೆಯಿಂದಲೇ ಮಾಡುವನು ಎಂದು ಭಾವ. ಅವನ ಪ್ರತಿಯೊಂದು ಅವತಾರವೂ ಸಕಲದೇವತೆಗಳ ಭಕ್ತಿಪೂರ್ವಕ ಪ್ರಾರ್ಥನೆಯ ಬಳಿಕವೇ ಆಗಿದೆ ಎಂಬುದು ಇದಕ್ಕೆ ಗಮಕ. ಆದ್ದರಿಂದ ಇದು ಅವರಿಂದ ಸರ್ವಥಾ ಆಗದ ಕೆಲಸ ಎಂಬುದು ಸ್ಪಷ್ಟ ಇಂತಹ ಕಾರ್ಯಕ್ಕೆ ಶ್ರೀಹರಿಯು ಸದಾಸಿದ್ಧ; ಎಂದರೆ ಅವನಿಗೆ ಹಾಗೆ ಮಾಡಲು ದೇಶಕಾಲಗಳ ಇತಿಮಿತಿಯಾಗಲಿ ಶಸ್ತ್ರಾಸ್ತ್ರಗಳ ನೆರವಿನ ಅಗತ್ಯ ಸರ್ವಥಾ ಇಲ್ಲ ಎಂದರ್ಥ. ಅರ್ಜುನ ಮೊದಲಾದವರಿಗೆ ಗಾಂಡೀವ ಮೊದಲಾದವುಗಳ ಅಗತ್ಯವಿದ್ದಂತೆ ಅವನಿಗೆ ಅಸ್ತ್ರಶಸ್ತ್ರಾದಿಗಳ ನೆರವಿನ ಅಗತ್ಯ ಎಂದೂ ಇರದು ಎಂದರ್ಥ.

೪. ಇದರಿಂದಾಗಿ ಅವನ ಆರಾಧಕರಾದ ಭಕ್ತರು ಸದಾ ಹರ್ಷದಿಂದ ಕೂಡಿರುವರು. ಹಾಗೂ ಸಕಲ ಭೋಗಭಾಗ್ಯಗಳನ್ನು ಹೊಂದಿರುವರು. ಹೀಗೆ ಅವರ ಅಪೇಕ್ಷೆಯನ್ನು ಪೂರೈಸಿಯೂ ಅವರಿಗೆ ರಕ್ಷಕನಾಗಿ ಇರುವನು ಎಂಬುದು ಅವನ ಹಿರಿಮೆಯ ಇನ್ನೊಂದು ಮುಖ; ಅವನ ಭಕ್ತರೆಲ್ಲ ಅತ್ಯಂತ ಸಾತ್ವಿಕರು; ಸದಾ ಇತರರ ಒಳಿತನ್ನು ಬಯಸುವವರು ಎಂದರ್ಥ. ಇತರ ದೇವತೆಗಳ ಭಕ್ತರಂತೆ ಲೋಕನಾಶಾದಿ ಕಾರ್ಯಗಳಲ್ಲಿ ವಿಷ್ಣುಭಕ್ತರು ಸರ್ವಥಾ ತೊಡಗರು ಎಂದರ್ಥ.

**ಉನ್ನತಪ್ರಾರ್ಥಿತಾಶೇಷಸಂಸಾಧಕಂ**
**ಸನ್ನತಾಲೌಕಿಕಾನಂದದಶ್ರೀಪದಮ್ ।**
**ಭಿನ್ನಕರ್ಮಾಶಯಪ್ರಾಣಿಸಂಪ್ರೇರಕಂ**
**ತನ್ನ ಕಿಂ ನೇತಿ ವಿದ್ವತ್ಸು ಮೀಮಾಂಸಿತಮ್ ॥**
**ಪ್ರೀಣಯಾಮೋ ವಾಸುದೇವಂ**
**ದೇವತಾಮಂಡಲಾಖಂಡಮಂಡನಮ್ ॥ ೩ ॥**

**ಪ :** ಉನ್ನತಪ್ರಾರ್ಥಿತಾಶೇಷಸಂಸಾಧಕಮ್, ಸನ್ನತಾಲೌಕಿಕಾನಂದದಶ್ರೀಪದಮ್, ಭಿನ್ನ ಕರ್ಮಾಶಯಪ್ರಾಣಿಸಂಪ್ರೇರಕಮ್, ತತ್, ನ, ಕಿಮ್, ನ, ಇತಿ, ವಿದ್ವತ್ಸು ಮೀಮಾಂಸಿತಮ್, ಪ್ರೀಣಯಾಮಃ, ವಾಸುದೇವಮ್, ದೇವತಾಮಂಡಲಾಖಂಡಮಂಡನಮ್ ।

**ಅ :** ಉನ್ನತಪ್ರಾರ್ಥಿತಾಶೇಷಸಂಸಾಧಕಮ್, ಸನ್ನತಾಲೌಕಿಕಾನಂದದಶ್ರೀಪದಮ್, ಭಿನ್ನಕರ್ಮಾಶಯಪ್ರಾಣಿಸಂಪ್ರೇರಕಮ್, ತತ್, ನ, ಕಿಮ್, ನ, ಇತಿ, ವಿದ್ವತ್ಸು

ಮೀಮಾಂಸಿತಮ್, ದೇವತಾಮಂಡಲಾಖಂಡಮಂಡನಮ್, ವಾಸುದೇವಮ್, ಪ್ರೀಣಯಾಮಃ।

ಪ್ರ.ಪ. : **ಉನ್ನತಪ್ರಾರ್ಥಿತಾಶೇಷಸಂಸಾಧಕಮ್** - ಶ್ರೇಷ್ಠರಿಂದ ಪ್ರಾರ್ಥಿತನಾಗಿ ಸಕಲವನ್ನು ಈಡೇರಿಸಿ ಕೊಡುವ; **ಸನ್ನತಾಲೌಕಿಕಾನಂದದಶ್ರೀಪದಮ್** - ತನಗೆ ಶರಣಾದವರಿಗೆ ಅಲೌಕಿಕವಾದ ಆನಂದವನ್ನು ನೀಡುವ ಮೋಕ್ಷ ಪದವಿಯನ್ನು ನೀಡುವ; **ಭಿನ್ನಕರ್ಮಾಶಯಪ್ರಾಣಿಸಂಪ್ರೇರಕಮ್** - ಯೋಗ್ಯತೆಗೆ ಅನುಗುಣವಾಗಿ ಬಗೆಬಗೆಯ ಕರ್ಮಗಳಿಂದೊಡಗೂಡಿದ ಜೀವಿಗಳನ್ನು ಪ್ರೇರಣೆ ಮಾಡುವ; **ತತ್** - ಅವನು; ನ - ಇಲ್ಲದಿರಲು ಸಾಧ್ಯವೇ?; **ಕಿಮ್** - ಏತಕ್ಕೆ; ನ - ಇಲ್ಲ; **ಇತಿ** - ಎಂಬುದಾಗಿ ; **ವಿದ್ವತ್ಸು ಮೀಮಾಂಸಿತಮ್** - ವಿದ್ವಾಂಸರಲ್ಲಿ ಚರ್ಚಿಸಲ್ಪಡುವ; **ದೇವತಾಮಂಡಲಾಖಂಡಮಂಡನಮ್** - ದೇವತಾವೃಂದಕ್ಕೆ ಪರಿಪೂರ್ಣ ಅಲಂಕಾರನಾದ; **ವಾಸುದೇವಮ್** - ವಾಸುದೇವನನ್ನು; **ಪ್ರೀಣಯಾಮಃ** - ಒಲಿಸೋಣ.

**ಭಕ್ತಿಯಿಂದ ಬೇಡುವರಿಗೆ ಎಲ್ಲ ಕೊಡುವನ**
**ಶಕ್ತಿಯಿಂದ ಭಜಿಪ ಜನಕೆ ಮೋಕ್ಷವೀವನ।**
**ಭಿನ್ನಭಿನ್ನ ಜೀವತತಿಯ ಅಂತೆ ಪೊರೆವನ**
**ಎಂತು! ಇಲ್ಲ! ಎಂದು ಬಲ್ಲ ಜನದಿ ಮೆರೆವನ ॥ ೩ ॥**

**ಅನು : ಶ್ರೀಹರಿಯು ಶ್ರೇಷ್ಠರಿಂದ ಪ್ರಾರ್ಥಿತನಾಗಿ ಸಕಲವನ್ನು ಈಡೇರಿಸಿ ಕೊಡುವನು, ತನಗೆ ಶರಣಾದವರಿಗೆ ಅಲೌಕಿಕವಾದ ಆನಂದವನ್ನು ನೀಡುವ ಮೋಕ್ಷಪದವಿಯನ್ನು ನೀಡುವನು, ಯೋಗ್ಯತೆಗೆ ಅನುಗುಣವಾಗಿ ಬಗೆಬಗೆಯ ಕರ್ಮಗಳಿಂದೊಡಗೂಡಿದ ಜೀವಿಗಳನ್ನು ಪ್ರೇರಣೆ ಮಾಡುವವನು; ಅವನು ಇಲ್ಲದಿರಲು ಸಾಧ್ಯವೇ? ಏತಕ್ಕೆ ಇಲ್ಲ? ಎಂಬುದಾಗಿ ವಿದ್ವಾಂಸರಲ್ಲಿ ಚರ್ಚಿಸಲ್ಪಡುವನು, ದೇವತಾವೃಂದಕ್ಕೆ ಪರಿಪೂರ್ಣ ಅಲಂಕಾರನಾದ ವಾಸುದೇವನನ್ನು ಒಲಿಸೋಣ.**

ವಿ : ೧. ಶ್ರೀಹರಿಯು ಶ್ರೇಷ್ಠ ಭಕ್ತರ ಮಾತನ್ನು ಪೂರ್ಣವಾಗಿ ನಡೆಸಿಕೊಡುವವನು. ಅದರಂತೆ ತನಗೆ ಉತ್ತಮವಾಗಿ ಶರಣುಬರುವವರ ಕೋರಿಕೆಗಳನ್ನು ಸಂಪೂರ್ಣವಾಗಿ ಈಡೇರಿಸುವವನು; ಎಂದರೆ ಶ್ರೇಷ್ಠ ಜನರನ್ನು ಮುಂದೆ ಮಾಡಿಕೊಂಡು ಅವರ ಮಾರ್ಗದರ್ಶನದಲ್ಲಿ ತನ್ನನ್ನು ಆರಾಧಿಸುವವರನ್ನು ಉದ್ಧರಿಸುವವನು ಎಂದರ್ಥ; **'ಅಪ್ಯಚ್ಯುತೋ ಗುರುದ್ವಾರಾ ಪ್ರಸಾದಕೃದಹಂ ತ್ವಿತಿ'** (ಮ.ಭಾ.ತಾ.ನಿ. ೨೬/೫೨). ಭೂದೇವಿ ಬ್ರಹ್ಮಾದಿದೇವತೆಗಳ ಮೂಲಕ ಶ್ರೀಹರಿಯನ್ನು ಪ್ರಾರ್ಥಿಸಿದ್ದು, ನಾಭಿರಾಜ ತನ್ನ ಋತ್ವಿಕ್ಕುಗಳ ಮೂಲಕ ಶ್ರೀಹರಿಯ ಅವತಾರಕ್ಕಾಗಿ ಪ್ರಾರ್ಥಿಸಿದ್ದು ಮೊದಲಾದ ಅನೇಕ

ಪ್ರಸಂಗಗಳು ಅತ್ಯಂತ ಮುಖ್ಯವಾಗಿ ಸಕಲಜೀವರಲ್ಲೂ ಉನ್ನತರಾದ ಶ್ರೀವಾಯುದೇವರ ಮೂಲಕ ಶ್ರೀಹರಿಯನ್ನು ಪ್ರಾರ್ಥಿಸಿ ಜ್ಞಾನಾದಿಗಳನ್ನು ಪಡೆದು ಮುಕ್ತಿಯನ್ನು ಹೊಂದುವ ಪ್ರಸಂಗ ಇದಕ್ಕೆ ಅತ್ಯುತ್ತಮ ನಿದರ್ಶನ.

೨. ಇಲ್ಲಿ ಉನ್ನತರು ಎಂದರೆ ಸ್ವೋತ್ತಮರು, ತನಗಿಂತ ಶ್ರೇಷ್ಠರಾದವರು ಎಂದರ್ಥ. ಅದಕ್ಕಿಂತ ಮುಖ್ಯವಾಗಿ ಬಿಂಬಭೂತರಾದವರು ಎಂದು ಭಾವ; ಇದರಿಂದ '**ಯಥಾ ದೇವೇ ತಥಾ ಗುರೌ**' (ಶ್ವೇತಾಶ್ವತರೋಪನಿಷತ್) ಎಂಬ ಉಪನಿಷತ್ತಿನ ಭಾವ ಸೂಚಿತ.

೩. **ಸನ್ನತ - ಸತ್** ಎಂದರೆ ಮುಖ್ಯಪ್ರಾಣ ('**ಸದಿತಿ ಪ್ರಾಣಃ**'); ಸನ್ನತ ಎಂದರೆ ಸಚ್ಛಬ್ದವಾಚ್ಯರಾದ ವಾಯುದೇವರ ಮೂಲಕ ಶರಣಾಗುವವರಿಗೆ ಅಲೌಕಿಕವಾದ ಆನಂದವನ್ನು ಎಂದರೆ ಮುಕ್ತಿಯನ್ನು ನೀಡುವವನು ಎಂದರ್ಥ. ಅವರಿಗೆ ಭಗವಂತ ನೀಡುವ ಆನಂದ ಅಲೌಕಿಕವಾದದು; ಎಂದರೆ ನಿತ್ಯವಾದದು, ಪೂರ್ಣವಾದುದು ಎಂದರ್ಥ; ಮೋಕ್ಷ ಎಂದು ಮುಖ್ಯಾರ್ಥ. ಶ್ರೀವಾಯುದೇವರು ಶ್ರೀಹರಿಯ ಆಜ್ಞೆಯಂತೆ ಮೋಕ್ಷನೀಡುವ ಸಾಮರ್ಥ್ಯ ಹೊಂದಿರುವವರು ಎಂಬ ವಿಶೇಷಾರ್ಥ ಇದರಿಂದ ಸೂಚಿತ: **ವಿಷ್ಣುರ್ಹಿ ದಾತಾ ಮೋಕ್ಷಸ್ಯ ವಾಯುಶ್ಚ ತದನುಜ್ಞಯಾ** (ಮ.ಭಾ.ತಾ.ನಿ. ೧/೭೮). ರಾವಣಾದಿಗಳು ಜೀವೋತ್ತಮರಾದ ಬ್ರಹ್ಮದೇವರನ್ನು ಆಶ್ರಯಿಸಿದರೂ, ಶ್ರೀಹರಿಯನ್ನು ಆರಾಧಿಸದಿದ್ದರಿಂದ ದುರಂತ ಕಾಣುವಂತಾಯಿತು ಎಂಬುದು ಇದಕ್ಕೆ ನಿದರ್ಶನ.

೪. ಅಂತಹ ಆನಂದವೇ ನಿಜವಾದ ಸಂಪತ್ತು ಎಂಬುದು ಇಲ್ಲಿಯ ಅಲೌಕಿಕ ಹಾಗೂ ಶ್ರೀ ಎಂಬ ಪದದಿಂದ ಸೂಚಿತ. ಇಲ್ಲಿ ಪದ ಎಂಬುದಕ್ಕೆ ಪಾದ ಹಾಗೂ ಸ್ವರೂಪ ಎಂಬ ಅರ್ಥಗಳೂ ವಿವಕ್ಷಿತ.

೫. ಜೀವಿಗಳ ರೀತಿ ಒಂದು ಬಗೆಯಲ್ಲ; ಅನೇಕ ಬಗೆಯದು; ಅವು ಭೇದದೊಂದಿಗೆ ತಾರತಮ್ಯವನ್ನು ಸಹ ಹೊಂದಿರುವವು; ಹೀಗೆ ಬಹು ಬಗೆಯ ಸಕಲ ಜೀವಿಗಳನ್ನು ಸಹ ಶ್ರೀಹರಿಯು ಅವರ ಯೋಗ್ಯತೆಗನುಗುಣವಾಗಿ ಸಾಧನೆಯತ್ತ ಪ್ರೇರೇಪಿಸುವವನು ಎಂಬುದು ವಿಶೇಷ. ಇದರಿಂದ ಪ್ರತಿಯೊಬ್ಬರ, ಪ್ರತಿಯೊಂದು ಕ್ಷಣವೂ ಸಹ ಅವರ ಗಮ್ಯಸ್ಥಾನದತ್ತಲ್ಲೆ ಸಾಗುವಂತೆ ಶ್ರೀಹರಿಯು ಮಾಡುವವನು ಎಂದು ಭಾವ; ಇಲ್ಲಿ ಆಶಯ ಎಂದರೆ ಸ್ವರೂಪಯೋಗ್ಯತೆ ಎಂದರ್ಥ.

೬. ಅವನ ಪ್ರತಿಯೊಂದು ಕಾರ್ಯವು ಸಹ ಬೇರಾರಿಗೂ ಸಂಪೂರ್ಣ ಅರಿವಾಗಲು ಸಾಧ್ಯವಿಲ್ಲ. ವಿದ್ವಾಂಸರೆಲ್ಲರೂ ಸಹ ಅದು ಹೀಗಲ್ಲ ಹೀಗೇಕೆ ಆಗಬಾರದು ಎಂಬ ಚರ್ಚೆಯಲ್ಲಿ ತೊಡಗುವಂತೆ ಮಾಡುವ ವಿಶೇಷತೆಯನ್ನು ಹೊಂದಿರುವುದು ಎಂದರ್ಥ.

೭. ಇಲ್ಲಿ ವಿದ್ವಾಂಸರಿಂದ ಚರ್ಚಿಸಲ್ಪಡುವ ವಿಷಯ ಎಂದರೆ ಅಭಿಪ್ರಾಯಭೇದ ಎಂಬ ಅರ್ಥದಲ್ಲಿ ಅಲ್ಲ. ವಿಶೇಷ ಜಿಜ್ಞಾಸೆಗೋಸ್ಕರ ಮಾತ್ರ ಎಂದು ತಿಳಿಯಬೇಕು.

ಬ್ರಹ್ಮಸೂತ್ರಗಳಲ್ಲಿ ಬಂದಿರುವ ಬಾದರಿ, ಜೈಮಿನಿ ಮೊದಲಾದವರ ಪ್ರಸ್ತಾಪ ಹೇಗೋ ಹಾಗೆ. ಮೀಮಾಂಸಿತಂ ಎಂಬ ಪದದಿಂದ ಬ್ರಹ್ಮಮೀಮಾಂಸೆ, ದೈವೀಮೀಮಾಂಸೆ ಹಾಗೂ ಕರ್ಮಮೀಮಾಂಸೆ ಎಂಬ [೧]ಮೂರುವಿಧಮೀಮಾಂಸೆಗಳಿಂದ ಎಂದೂ, ವಿಶೇಷವಾಗಿ ಬ್ರಹ್ಮಮೀಮಾಂಸೆಯಿಂದ ಎಂದೂ ಅರ್ಥ.

೮. ಭಗವತ್ಸ್ವರೂಪವು ಅತ್ಯಂತ ವಿಲಕ್ಷಣವೂ, ಸಾಕಲ್ಯೇನ ಅಜ್ಞೇಯವೂ ಆಗಿರುವುದರಿಂದ ಆ ಬಗೆಯ ಸತತ ಚರ್ಚೆ ವಿದ್ವಾಂಸರಲ್ಲಿ ನಡೆಯುತ್ತಿರುವುದು ಎಂದು ಭಾವ. ಅಂತಹ ಚರ್ಚೆಯಿಂದ ಜ್ಞಾನವಿಶೇಷವು ಲಭಿಸುವುದರಿಂದ ಫಲದಲ್ಲೂ ವಿಶೇಷತೆ ಲಭಿಸುವುದು ಎಂದರ್ಥ.

೯. **ಸಂಪ್ರೇರಕಂ** ಎಂಬ ಪದದಿಂದ ಆಯಾ ಜೀವಿಗಳ ಸ್ವರೂಪ, ಅನಾದಿಕರ್ಮ ಹಾಗೂ ಪ್ರಯತ್ನಗಳಿಗೆ ಅನುಗುಣವಾಗಿ ಶ್ರೀಹರಿಯು ಪ್ರೇರೇಪಿಸುವನು ಎಂಬ ವಿಶೇಷಾಂಶ [೨]ಸೂಚಿತ.

**ವಿಪ್ರಮುಖ್ಯೈಃ ಸದಾ ವೇದವಾದೋನ್ಮುಖೈಃ**
**ಸುಪ್ರತಾಪೈಃ ಕ್ಷಿತೀಶೇಶ್ವರೈಶ್ಚಾರ್ಚಿತಮ್ ।**
**ಅಪ್ರತರ್ಕ್ಯೋರುಸಂವಿದ್ಗುಣಂ ನಿರ್ಮಲಂ**
**ಸುಪ್ರಕಾಶಾಜರಾನಂದರೂಪಂ ಪರಮ್ ॥**
**ಪ್ರೀಣಯಾಮೋ ವಾಸುದೇವಂ**
**ದೇವತಾಮಂಡಲಾಖಂಡಮಂಡನಮ್ ॥ ೪ ॥**

**ಪ** : ವಿಪ್ರಮುಖ್ಯೈಃ, ಸದಾ, ವೇದವಾದೋನ್ಮುಖೈಃ, ಸುಪ್ರತಾಪೈಃ, ಕ್ಷಿತೀಶೇಶ್ವರೈಃ, ಚ, ಅರ್ಚಿತಮ್ ಅಪ್ರತರ್ಕ್ಯೋರುಸಂವಿದ್ಗುಣಮ್, ನಿರ್ಮಲಮ್, ಸುಪ್ರಕಾಶಾಜರಾನಂದರೂಪಮ್, ಪರಮ್, ಪ್ರೀಣಯಾಮಃ, ವಾಸುದೇವಮ್, ದೇವತಾಮಂಡಲಾಖಂಡಮಂಡನಮ್ ।

**ಅ** : ವೇದವಾದೋನ್ಮುಖೈಃ, ವಿಪ್ರಮುಖ್ಯೈಃ, ಸುಪ್ರತಾಪೈಃ, ಕ್ಷಿತೀಶೇಶ್ವರೈಃ, ಚ, ಸದಾ, ಅರ್ಚಿತಮ್, ಅಪ್ರತರ್ಕ್ಯೋರುಸಂವಿದ್ಗುಣಮ್, ನಿರ್ಮಲಮ್, ಸುಪ್ರಕಾಶಾಜರಾನಂದರೂಪಮ್, ಪರಮ್, ದೇವತಾಮಂಡಲಾಖಂಡಮಂಡನಮ್, ವಾಸುದೇವಮ್, ಪ್ರೀಣಯಾಮಃ ।

---

೧. ಮೀಮಾಂಸಾ ತ್ರಿವಿಧಾ ಪ್ರೋಕ್ತಾ ಬ್ರಾಹ್ಮೀ ದೈವೀ ಚ ಕಾರ್ಮಿಕೀ । – ಗೀ.ತಾ.(೨/೩೯)

೨. ಸ್ವಭಾವಾಖ್ಯಾ ಯೋಗ್ಯತಾ ಯಾ ಹಠಾಖ್ಯಾ ಯಾऽನಾದಿಸಿದ್ಧಾ ಸರ್ವಜೀವೇಷು ನಿತ್ಯಾ । – ಮ.ಭಾ.ತಾ.ನಿ.(೨೨/೮೪)

ಪ್ರ.ಪ. : **ವೇದವಾದೋನ್ಮುಖೈಃ** – ವೇದಾರ್ಥ ಚಿಂತನೆಯಲ್ಲಿ ತೊಡಗಿದ; **ವಿಪ್ರಮುಖ್ಯೈಃ** – ವಿಪ್ರಶ್ರೇಷ್ಠರಿಂದ; **ಚ** – ಹಾಗೂ; **ಸುಪ್ರತಾಪೈಃ** – ಮಹಾಪ್ರತಾಪಿಗಳಾದ; **ಕ್ಷಿತೀಶೇಶ್ವರೈಃ** – ಚಕ್ರವರ್ತಿಗಳಿಂದ; **ಸದಾ** – ಯಾವಾಗಲೂ; **ಅರ್ಚಿತಮ್** – ಪೂಜಿತನಾದ; **ಅಪ್ರತರ್ಕ್ಯೋರುಸಂವಿದ್ಗುಣಮ್** – ತರ್ಕಕ್ಕೆ ನಿಲುಕದ ಶ್ರೇಷ್ಠವಾದ ಜ್ಞಾನಾದಿ ಗುಣಗಳಿಂದ ಕೂಡಿದ; **ನಿರ್ಮಲಮ್** – ದೋಷರಹಿತನಾದ; **ಸುಪ್ರಕಾಶಾಜರಾನಂದರೂಪಮ್** – ಪ್ರಕಾಶಯುಕ್ತವಾದ, ಮುಪ್ಪಿರದ ಆನಂದಸ್ವರೂಪನಾದ; **ಪರಮ್** – ಸರ್ವೋತ್ತಮನಾದ; **ದೇವತಾಮಂಡಲಾಖಂಡಮಂಡನಮ್** – ದೇವತಾವೃಂದಕ್ಕೆ ಪರಿಪೂರ್ಣ ಅಲಂಕಾರನಾದ; **ವಾಸುದೇವಮ್** – ವಾಸುದೇವನನ್ನು; **ಪ್ರೀಣಯಾಮಃ** – ಒಲಿಸೋಣ.

**ವೇದಬಲ್ಲ ವಿಪ್ರರಿಂದ ನಿರುತ ಪೂಜಿತ**
**ಕಾದಬಲ್ಲ ಕ್ಷತ್ರರಿಂದ ಸತತ ವಂದಿತ ।**
**ವಾದಿವೃಂದಕೆಂದು ಸಿಗದ ಗುಣದಿ ಭೂಷಿತ**
**ಬೋಧರೂಪ ಪೂರ್ಣಸುಖದಿ ನಿರುತ ರಾಜಿತ ॥ ೪ ॥**

**ಅನು: ವೇದಾರ್ಥ ಚಿಂತನೆಯಲ್ಲಿ ತೊಡಗಿದ ವಿಪ್ರಶ್ರೇಷ್ಠರೇ ಮೊದಲಾದವರಿಂದ ಹಾಗೂ ಮಹಾಪ್ರತಾಪಿಗಳಾದ ಚಕ್ರವರ್ತಿಗಳಿಂದ ಯಾವಾಗಲೂ ಪೂಜಿತನಾದ, ತರ್ಕಕ್ಕೆ ನಿಲುಕದ ಶ್ರೇಷ್ಠವಾದ ಜ್ಞಾನಾದಿ ಗುಣಗಳಿಂದ ಕೂಡಿದ, ದೋಷರಹಿತನಾದ, ಪ್ರಕಾಶಯುಕ್ತವಾದ, ಮುಪ್ಪಿರದ ಆನಂದಸ್ವರೂಪನಾದ, ಸರ್ವೋತ್ತಮನಾದ, ದೇವತಾವೃಂದಕ್ಕೆ ಪರಿಪೂರ್ಣ ಅಲಂಕಾರನಾದ ವಾಸುದೇವನನ್ನು ಒಲಿಸೋಣ.**

ವಿ : ೧. ಶ್ರೀಹರಿಯು ವಿಪ್ರಶ್ರೇಷ್ಠರಿಂದ ವೇದಗಳ ಚರ್ಚೆಗಳ ಮೂಲಕ ಆರಾಧಿತನಾದವನು; ಎಂದರೆ ವೇದಾಧ್ಯಯನವು ವಿಪ್ರರ ಪ್ರಧಾನವಾದ ಕಾರ್ಯ: ವಿಪ್ರಸ್ಯ ಜಪೋಪದೇಶೌ. ಅದನ್ನು ಮಾಡುವುದೇ ಶ್ರೀಹರಿಗೆ ಪೂಜೆ ಎಂದರ್ಥ. ಇದರಿಂದ ವಿಪ್ರ ಮೊದಲಾದ ಸಕಲರೂ ಸಹ ತಮ್ಮ ಪಾಲಿಗೆ ವಿಹಿತವಾದ ಕರ್ತವ್ಯ ಕರ್ಮಗಳ ಮೂಲಕವೇ ಭಗವಂತನನ್ನು ಆರಾಧಿಸಬೇಕು ಎಂದು ಅರ್ಥ.

೨. ಮಹಾಪರಾಕ್ರಮಿಗಳಾದ ಕ್ಷತ್ರಿಯರು ತಮಗೆ ವಿಹಿತವಾದ ಮಹಾ ಪ್ರತಾಪದಿಂದಲೇ ಲೋಕರಕ್ಷಣೆಯನ್ನು ಮಾಡುವ ಮೂಲಕ ಶ್ರೀಹರಿಯನ್ನು ಆರಾಧಿಸಬೇಕೆಂದು ಅರ್ಥ.

೩. ಶ್ರೀಹರಿಯ ಜ್ಞಾನಾನಂದಾದಿಗುಣಗಳು ಎಲ್ಲ ತರ್ಕಕ್ಕೂ ಮೀರಿದವು; ಎಂದರೆ ತರ್ಕ ಮಾಡುವುದರಿಂದ ಶ್ರೀಹರಿಯ ವೈಭವವನ್ನು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ ಎಂದು ಭಾವ: ನೈಷಾ ತರ್ಕೇಣ ಮತಿರಾಪನೇಯಾ (ಕಠೋಪನಿಷತ್ತು).

೪. ಶ್ರೀಹರಿಯು ನಿರ್ದೋಷನಾದವನು ಎಂದರೆ ಜೀವಿಗಳಿಗಿರುವ ಚಿಂತೆ, ರೋಗ, ರುಜಿನ ಮೊದಲಾದವುಗಳು ಅವನಿಗಿರುವುದಿಲ್ಲ ಎಂದರ್ಥ.

೫. ಶ್ರೀಹರಿಯು ಅತ್ಯಂತ ಶ್ರೇಷ್ಠವಾದ ಜ್ಞಾನಮಯದೇಹವನ್ನು ಹೊಂದಿರುವನು. ಆದ್ದರಿಂದಲೇ ಆನಂದಸ್ವರೂಪನಾಗಿರುವವನು, ಆದ್ದರಿಂದ ಅವನನ್ನು ಹೀಗೆ ತಿಳಿದೇ ಆರಾಧಿಸಬೇಕು ಎಂದರ್ಥ.

**ಅತ್ಯಯೋ ಯಸ್ಯ [1]ಕೇನಾಪಿ ನ ಕ್ವಾಪಿ ಹಿ**
**ಪ್ರತ್ಯಯೋ ಯದ್ಗುಣೇಷೂತ್ತಮಾನಾಂ ಪರಃ।**
**ಸತ್ಯಸಂಕಲ್ಪ ಏಕೋ ವರೇಣ್ಯೋ ವಶೀ**
**ಮತ್ಯನೂನೈಃ ಸದಾ [2]ವೇದವಾದೋದಿತಃ ॥**
**ಪ್ರೀಣಯಾಮೋ ವಾಸುದೇವಂ**
**ದೇವತಾಮಂಡಲಾಖಂಡಮಂಡನಮ್ ॥ ೫ ॥**

**ಪ :** ಅತ್ಯಯಃ, ಯಸ್ಯ, ಕೇನ, ಅಪಿ, ನ, ಕ್ವಾಪಿ, ಹಿ, ಪ್ರತ್ಯಯಃ, ಯದ್ಗುಣೇಷು, ಉತ್ತಮಾನಾಮ್, ಪರಃ, ಸತ್ಯಸಂಕಲ್ಪಃ, ಏಕಃ, ವರೇಣ್ಯಃ, ವಶೀ, ಮತ್ಯನೂನೈಃ, ಸದಾ, ವೇದವಾದೋದಿತಃ, ಪ್ರೀಣಯಾಮಃ, ವಾಸುದೇವಮ್, ದೇವತಾಮಂಡಲಾಖಂಡ-ಮಂಡನಮ್।

---

೧. ತಂ ದೇವಾಃ ಸರ್ವೇ ಅರ್ಪಿತಾಸ್ತದು ನಾತ್ಯೇತಿ ಕಶ್ಚನ। ಏತದ್ವೈ ತತ್।- ಕಠೋಪನಿಷತ್ (೨/೯)
ತಸ್ಮಿನ್ ಲೋಕಾಃ ಶ್ರಿತಾಃ ಸರ್ವೇ ತದು ನಾತ್ಯೇತಿ ಕಶ್ಚನ। - ಕಾಠಕೋಪನಿಷತ್ (೨/೩/೨)
ಸಾಮ್ಯಂ ನ ಚಾಸ್ಯ ಪರಮಸ್ಯ ಚ ಕೇನ ಚಾಪ್ಯಂ ಮುಕ್ತೇನ ಚ ಕ್ವಚಿದತಸ್ತ್ವಭಿದಾ ಕುತೋಽಸ್ಯ।
ಪ್ರಾಪ್ಯೇತ ಚೇತನಗಣೈಃ ಸತತಾಸ್ವತಂತ್ರೈರ್ನಿತ್ಯಸ್ವತಂತ್ರವಪುಷಃ ಪರಮಾತ್ ಪರಸ್ಯ ॥
- ಮ.ಭಾ.ತಾ.ನಿ. (೧/೨೧)

ವಿಜಾನತೋ ಮುನೇರಾತ್ಮಾ ವಾಯುರಪಿ ತಾದೃಗೇವ ಭವತಿ ನ ತು ಸ ಏವ ಭವತಿ। ಕಿಮ್ವನ್ಯೇ ಜೀವಾಃ।

'ಸರ್ವೇಷಾಂ ಜ್ಞಾನಿನಾಮಾತ್ಮಾ ದೇವಾನಾಂ ಚ ವಿಶೇಷತಃ।
ಮುಕ್ತೋ ವಾಯುಶ್ಚ ಸಾದೃಶ್ಯಮೇವಂ ವಿಷ್ಣೋಸ್ತು ಗಚ್ಛತಿ ॥
ನ ತು ತದ್ರೂಪತಾಂ ಯಾತಿ ಕಿಮ್ವನ್ಯೇ ದೇವಮಾನುಷಾಃ।
ಆಭಾಸಾಭಾಸರೂಪಾಸ್ತು ವಾಯೋರ್ದೇವಸ್ಯ ಸರ್ವಶಃ ॥ ಇತಿ ಭವಿಷ್ಯತ್ಪರ್ವಣಿ ॥
- ಕಾಠಕಭಾಷ್ಯ (೨/೧೫)

೨. ಅರ್ಥೋಽಯಮೇವ ನಿಖಿಲೈರಪಿ ವೇದವಾಕ್ಯೈ ರಾಮಾಯಣೈಃ ಸಹಿತಭಾರತಪಂಚರಾತ್ರೈಃ।
ಅನ್ಯೈಶ್ಚ ಶಾಸ್ತ್ರವಚನೈಃ ಸಹ ತತ್ತ್ವಸೂತ್ರೈರ್ನಿರ್ಣೀಯತೇ ಸಹೃದಯಂ ಹರಿಣಾ ಸದೈವ ॥
-ಮ.ಭಾ.ತಾ.ನಿ. (೧/೨೨)

**ಅ :** ಕೇನ, ಅಪಿ, ಯಸ್ಯ, ಅತ್ಯಯಃ, ಕ್ವಾಪಿ, ಹಿ, ನ, ಉತ್ತಮಾನಾಮ್, ಯದ್ಗುಣೇಷು, ಪರಃ, ಪ್ರತ್ಯಯಃ, ಸತ್ಯಸಂಕಲ್ಪಃ, ಏಕಃ, ವರೇಣ್ಯಃ, ವಶೀ, ಮತ್ಯನೂನ್ಯೈಃ, ಸದಾ, ವೇದವಾದೋದಿತಃ, ದೇವತಾಮಂಡಲಾಖಂಡಮಂಡನಮ್, ವಾಸುದೇವಮ್, ಪ್ರೀಣಯಾಮಃ।

**ಪ್ರ.ಪ. : ಕೇನ ಅಪಿ** – ಯಾರಿಂದಲೂ; **ಯಸ್ಯ** – ಯಾರನ್ನು; **ಅತ್ಯಯಃ** – ಮೀರಿಸಲು; **ಕ್ವಾಪಿ** – ಎಲ್ಲೂ; **ನ ಹಿ** – ಸಾಧ್ಯವೇ ಇಲ್ಲವೋ; **ಯದ್ಗುಣೇಷು** – ಯಾರ ಗುಣಗಳಲ್ಲಿ; **ಉತ್ತಮಾನಾಮ್** – ಉತ್ತಮರಾದವರಿಗೆ; **ಪರಃ** – ಶ್ರೇಷ್ಠವಾದಂತಹ; **ಪ್ರತ್ಯಯಃ** – ವಿಶ್ವಾಸವು ಇರುವುದೋ; **ಸತ್ಯಸಂಕಲ್ಪಃ** – ಸತ್ಯಸಂಕಲ್ಪನು; **ಏಕಃ** – ಸ್ವತಂತ್ರನು; **ವರೇಣ್ಯಃ** – ಭಜನೀಯನು; **ವಶೀ** – ಎಲ್ಲವನ್ನೂ ವಶದಲ್ಲಿರಿಸಿಕೊಂಡವನು; **ಮತ್ಯನೂನ್ಯೈಃ** – ಮಹಾಪ್ರಾಜ್ಞರಿಂದ; **ಸದಾ** – ಸದಾ; **ವೇದವಾದೋದಿತಃ** – ವೇದಗಳ ಚರ್ಚೆಯಿಂದ ವ್ಯಕ್ತನಾಗುವವನು ಅಂತಹ; **ದೇವತಾಮಂಡಲಾಖಂಡಮಂಡನಮ್** – ದೇವತಾವೃಂದಕ್ಕೆ ಪರಿಪೂರ್ಣ ಅಲಂಕಾರನಾದ; **ವಾಸುದೇವಮ್** – ವಾಸುದೇವನನ್ನು; **ಪ್ರೀಣಯಾಮಃ** – ಒಲಿಸೋಣ.

**ಎಂದು ಎಲ್ಲು ಭಂಗವಿಲ್ಲ ಇವನ ಶ್ರೈಷ್ಠ್ಯಕೆ**
**ಇವನ ಗುಣಗಳಲ್ಲಿ ನಿಷ್ಠೆ ಜ್ಞಾನಿವೃಂದಕೆ।**
**ಸತ್ಯಸಂಕಲ್ಪ ಸ್ವಾಮಿ ಇವನು ಲೋಕಕೆ**
**ಸರ್ವವೇದದಿಂದ ಸ್ತುತ್ಯ ಸುಜನವ್ರಾತಕೆ** ॥ ೫ ॥

**ಅನು : ಶ್ರೀಹರಿಯನ್ನು ಮೀರಿಸಲು ಯಾರಿಂದಲೂ, ಎಲ್ಲೂ ಸಾಧ್ಯವೇ ಇಲ್ಲ, ಉತ್ತಮರಾದವರಿಗೆ ಅವನ ಗುಣಗಳಲ್ಲಿ ಶ್ರೇಷ್ಠವಾದ ವಿಶ್ವಾಸವು ಇರುವುದು, ಅವನು ಸತ್ಯಸಂಕಲ್ಪನು, ಸ್ವತಂತ್ರನು, ಭಜನೀಯನು, ಎಲ್ಲವನ್ನೂ ವಶದಲ್ಲಿರಿಸಿಕೊಂಡವನು, ಮಹಾಪ್ರಾಜ್ಞರಿಂದ ಸದಾ ವೇದಗಳ ಚರ್ಚೆಯಿಂದ ವ್ಯಕ್ತನಾಗುವವನು, ಅಂತಹ ದೇವತಾವೃಂದಕ್ಕೆ ಪರಿಪೂರ್ಣ ಅಲಂಕಾರನಾದ ವಾಸುದೇವನನ್ನು ಒಲಿಸೋಣ.**

ವಿ : ೧. ಶ್ರೀಹರಿಯ ಹಿರಿಮೆಯನ್ನು ಮೀರಿಸಲು ರಮಾಬ್ರಹ್ಮ (ಕ ಎಂದರೆ ಬ್ರಹ್ಮ ವಾಯು ಎಂದರ್ಥ) ಮೊದಲಾಗಿ ಯಾರಿಗೂ ಸಾಧ್ಯವಿಲ್ಲ, ಎಲ್ಲೂ ಸಾಧ್ಯವಿಲ್ಲ; ಅದರಂತೆ ಅವನನ್ನು ಯಾರೂ, ಎಲ್ಲೂ ಮೀರಿ ನಡೆಯಲು ಸರ್ವಥಾ ಅಸಮರ್ಥರು; ಇದರಿಂದ ಇತರರ ಆದೇಶಾದಿಗಳಿಗೆ ಭಂಗವಾಗುವ ಪ್ರಸಂಗವಿರುವುದು; ಮಹಾವಿಷ್ಣುವಿನ ಆಜ್ಞೆಗೆ ಮಾತ್ರ ಸರ್ವಥಾ ಭಂಗವಿಲ್ಲ. ಬ್ರಹ್ಮರುದ್ರಾದಿಗಳ ವರವನ್ನು ಮಹಾವಿಷ್ಣುವು ಭಂಗಗೊಳಿಸಿರುವುದುಂಟು. ಆದರಂತೆ ವಿಷ್ಣುವಿನ ವರವನ್ನು

ಬ್ರಹ್ಮಾದಿಗಳನ್ನೊಳಗೊಂಡಂತೆ ಭಂಗಗೊಳಿಸಲು ಯಾರಿಗೂ ಸಾಧ್ಯವಿಲ್ಲ. ಈ ವಿವರಗಳು ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಬಂದಿವೆ.

೨. ರಾಮಾಯಣದಲ್ಲಿ ಬರುವ ವಿಭೀಷಣ ಶರಣಾಗತಿಪ್ರಸಂಗದಲ್ಲಿ ಶ್ರೀರಾಮ ಹೇಳುವ ಮಾತು ಇಲ್ಲಿ ಅತ್ಯಂತ ಗಮನಾರ್ಹ: **'ಸಬ್ರಹ್ಮಕಾಃ ಸುರಗಣಾಃ ಸಹದೈತ್ಯಮರ್ತ್ಯಾಃ ಸರ್ವೇ ಸಮೇತ್ಯ ಚ ಮದಂಗುಲಿಚಾಲನೇಽಪಿ। ನೇಶಾ ಭಯಂ ನ ಮಮ ...'** (ಮ.ಭಾ. ತಾ.ನಿ. ೮/೭). ಅದರಂತೆ **'ಯದ್ಭೀಷಾ ಉದ್ಯೈತಿ ಸೂರ್ಯಃ'** ಇತ್ಯಾದಿ ಉಪನಿಷತ್ತಿನ ಮಾತುಗಳು ಸಹ ಇದಕ್ಕೆ ನಿದರ್ಶನ.

೩. ಉತ್ತಮರು ಎಂದರೆ ದೈವೀಸಂಪತ್ತಿನ ಸಾತ್ತ್ವಿಕ ಜನತೆ ಎಂದರ್ಥ. ಅವರಿಗೆ ಶ್ರೀಹರಿಯ ಗುಣಪೂರ್ಣತ್ವ, ನಿರ್ದೋಷತ್ವಾದಿ ವಿಷಯದ ಬಗ್ಗೆ ಯಾವ ಕಾಲಕ್ಕೂ, ಯಾವಕಾರಣಕ್ಕೂ, ಯಾವರೀತಿಯ ಗೊಂದಲವೂ ಸಹ ಸರ್ವಥಾ ಇರುವುದಿಲ್ಲ: **'ರಕ್ಷತೀತ್ಯೇವ ವಿಶ್ವಾಸಃ'** (ಗೀ.ತಾ. ೧೮/೬೬); **'ಅನನ್ಯಾಶ್ಚಿಂತಯಂತೋ ಮಾಂ'** (ಗೀತಾ. ೯/೨೨) ಎಂಬ ಮಾತುಗಳು ಪ್ರಹ್ಲಾದ, ಜಡಭರತ ಮೊದಲಾದವರು ಪ್ರಾಣಾಪಾಯ ಒದಗಿದ ಸಂದರ್ಭದಲ್ಲೂ ಸಹ ಶ್ರೀಹರಿಯಲ್ಲಿ ಅಚಲವಾದ ವಿಶ್ವಾಸವನ್ನು ಹೊಂದಿ, ಎಲ್ಲ ಅಪಾಯಗಳಿಂದ ಪಾರಾಗಿ ಸಿದ್ಧಿ ಪಡೆದ ವಿವರ ಇದಕ್ಕೆ ನಿದರ್ಶನ. ಅದರಂತೆ ಬ್ರಹ್ಮನಿರ್ಗುಣ ಇತ್ಯಾದಿ ಮಾತುಗಳನ್ನು ಅವರು ತಪ್ಪಾಗಿ ಅರ್ಥಮಾಡಿಕೊಳ್ಳದೆ, ಸದ್ಗುಣ ಎಂಬುದಕ್ಕೆ ಪ್ರಾಕೃತ ಗುಣರಹಿತ ಎಂಬ ಮುಖ್ಯಭಾವವನ್ನು ಗ್ರಹಿಸಿ, ಅವನನ್ನು ಗುಣಪೂರ್ಣ ಎಂದೇ ಉಪಾಸನೆ ಮಾಡುವರು ಎಂದೂ ಇದಕ್ಕೆ ಅರ್ಥವಾಗುವುದು.

೪. **ಸತ್ಯಸಂಕಲ್ಪಃ** – ಶ್ರೀಹರಿಯ ಸಂಕಲ್ಪಕ್ಕೆ ಅನುಗುಣವಾಗಿಯೇ ಸಕಲವೂ ಸರ್ವಥಾ ತಪ್ಪದೆ ನಡೆಯುವುದು ಎಂದು ಭಾವ. ಅವನು ಸತ್ಯಸಂಕಲ್ಪನಾದ್ದರಿಂದ, ಅವನ ಸಂಕಲ್ಪಕ್ಕೆ ಎಂದೂ ಚ್ಯುತಿ ಬಾರದು. ಸ್ವತಃ ಅವನೂ ಸಹ ತನ್ನ ಸಂಕಲ್ಪವನ್ನು ತೊರೆಯನು ಎಂದೂ ಅರ್ಥ: **'ಸತ್ಯಸಂಕಲ್ಪತೋ ವಿಷ್ಣುರ್ನಾನ್ಯಥಾ ತು ಕರಿಷ್ಯತಿ '**(ಮ.ಭಾ.ತಾ.ನಿ. ೧/೯೭). ಅಪೂರ್ಣಜ್ಞಾನಿಗಳು ಆ ಕಾರಣದಿಂದಲೆ ತಪ್ಪಾಗಿ ಸಂಕಲ್ಪಮಾಡಿ, ಅದು ವಿಫಲವಾದಾಗ, ಅದಕ್ಕಾಗಿ ವ್ಯಥೆ ಪಡುವರು. ಬೇರೊಂದು ಮಾರ್ಗವನ್ನು ಹಿಡಿಯುವರು. ಆದರೆ ಶ್ರೀಹರಿ ಹಾಗಲ್ಲ, ಸರ್ವಜ್ಞನಾದ ಅವನು ಎಂದೂ ಸತ್ಯಸಂಕಲ್ಪವನ್ನು ಸರ್ವಥಾ ಮಾಡಲಾರನಾದ್ದರಿಂದ, ಅದು ಮೋಘವೆನ್ನಿಸುವ ಪ್ರಸಂಗವೇ ಇರದು ಎಂದು ಭಾವ. ಸಂಕಲ್ಪವು ನಡೆಯದಿರಲು ಅಸಾಮರ್ಥ್ಯ ಇನ್ನೊಂದು ಕಾರಣ. ಆದರೆ ಶ್ರೀಹರಿಯು ಸರ್ವತಂತ್ರಸ್ವತಂತ್ರನಾದ್ದರಿಂದ ಅಶಕ್ತಿಗೆ ಅವಕಾಶವೇ ಇಲ್ಲದ್ದರಿಂದ, ಅವನ ಸಂಕಲ್ಪ ನಡೆಯುವುದು ನಿಶ್ಚಿತ ಎಂದು ಭಾವ. ಅವನ ಭಕ್ತರ ಸಂಕಲ್ಪವೇ ವ್ಯರ್ಥವಾಗದು ಎಂದ

ಮೇಲೆ, ಸರ್ವಸ್ವಾಮಿಯಾದ ಅವನ ಸಂಕಲ್ಪ ಸರ್ವಥಾ ವ್ಯರ್ಥವಾಗದು ಎಂಬುದು ಕೈಮುತ್ಯಸಿದ್ಧ ಎಂಬ ಭಾವವೂ ಇದರಲ್ಲಿದೆ.

೫. **ಏಕಃ** – ಏಕ ಎಂಬುದಕ್ಕೆ ಸ್ವತಂತ್ರ ಎಂದರ್ಥ. ಇದು ವಿಷ್ಣುಸಹಸ್ರನಾಮದಲ್ಲಿ ಬಂದಿರುವ ಮಾತು (**'ಏಕೋ ನೈಕಃ'**). ಇದಕ್ಕೆ ಸ್ವಗತಭೇದವಿವರ್ಜಿತ, ಇತರರ ಸಹಾಯದ ಅಗತ್ಯವಿಲ್ಲದ ಸರ್ವಸಮರ್ಥ ಮೊದಲಾದ ಅನೇಕಾರ್ಥಗಳು ಸಹ ಇದಕ್ಕಿವೆ. **'ಏಕಮೇವಾದ್ವಿತೀಯಂ ಬ್ರಹ್ಮ'** ಎಂಬ ಶ್ರುತ್ಯರ್ಥವೂ ಇದಾಗಿದೆ.

೬. **ವರೇಣ್ಯಃ** – ಇದು ಗಾಯತ್ರೀಮಂತ್ರದಲ್ಲಿ ಬಂದಿರುವ ಪದ. ಸರ್ವರಿಂದಲೂ ಭಜನೀಯನಾದವನು ಎಂದು ಇದರ ಭಾವ. ಗಾಯತ್ರೀಮಂತ್ರ ಪ್ರತಿಪಾದ್ಯನಾದವನು ಶ್ರೀಹರಿಯೇ ಎಂಬುದಕ್ಕೆ ಇದು ಸೂಚಕ.

೭. **ವಶೀ** – ವಶೀ ಎಂದರೆ ಸರ್ವವನ್ನೂ, ಸರ್ವದಾ, ಸರ್ವಥಾ ತನ್ನ ಅಧೀನದಲ್ಲಿ ಇರಿಸಿಕೊಂಡವನು ಎಂದರ್ಥ. ಇದರಿಂದ ರಮಾಬ್ರಹ್ಮಾದಿಸಮಸ್ತರೂ, ಸರ್ವದಾ, ಸರ್ವರೀತಿಯಲ್ಲೂ ಅವನ ಅಧೀನರು ಎಂಬ ವಿಶೇಷಾಂಶ ನಿರೂಪಿತವಾಗುವುದು. ಇದು **'ವಶೀ ವಶೇ ನ ಕಸ್ಯಾಪಿ'** ಎಂಬ ಎರಡನೆಯ ಅಧ್ಯಾಯದ ಮಾತಿನ ಭಾವವೂ ಆಗಿದೆ. ವಶಿತ್ವ ಎಂಬುದು ಒಂದು ಬಗೆಯ ಯೋಗಸಿದ್ಧಿಯಾಗಿದ್ದು, ಅದು ಶ್ರೀಹರಿಗೆ ಸ್ವಾಭಾವಿಕವಾಗಿಯೇ ಸದಾ ಇರುವುದು ಎಂದೂ ಅರ್ಥ. ಅದರಂತೆ ಇತರ ಸಕಲಯೋಗಸಿದ್ಧಿಗಳು ಸಹ ಅವನಿಗೆ ಸ್ವಾಭಾವಿಕವಾಗಿದ್ದು ನಿತ್ಯವೆನ್ನಿಸಿವೆ. ಅವನು ಯೋಗೇಶ್ವರ ಎಂಬುದು ಇದರ ಮುಖ್ಯಭಾವ.

೮. **ಮತ್ಯನೂನೈಃ** – ಮತಿಯಿಂದ ಅನೂನರು ಎಂದರೆ ಪ್ರಾಜ್ಞರು ಎಂದರ್ಥ. ಪ್ರಾಜ್ಞರಾದವರು ಅಪ್ರಾಮಾಣಿಕವಾದ ಶಾಸ್ತ್ರಗಳನ್ನು ಅವಲಂಬಿಸದೆ, ಅಪೌರುಷೇಯ ಮೊದಲಾದ ಕಾರಣಗಳಿಂದ ಪರಮಪ್ರಮಾಣವೆನ್ನಿಸಿದ ವೇದವನ್ನಾಧರಿಸಿದ ಚಿಂತನೆಯನ್ನು ಹೊಂದಿ, ಆ ಮೂಲಕ ಶ್ರೀಹರಿಯನ್ನು ಅರಿಯುವರು ಎಂದರ್ಥ. **ವೇದವಾದೋದಿತಃ** ಎಂಬ ಪದ **ಶಾಸ್ತ್ರಯೋನಿತ್ವಾತ್** ಎಂಬ ಬ್ರಹ್ಮಸೂತ್ರದ ಅರ್ಥವೂ ಆಗಿದೆ. ವೇದ ಎಂಬುದರಿಂದ ಇತಿಹಾಸಪುರಾಣಾದಿಗಳು ಉಪಲಕ್ಷಿತ. ಶ್ರೀಹರಿಯನ್ನು ಅಂತಹ ಸದಾಗಮಗಳಿಂದಲೇ ತಿಳಿಯಬೇಕು ಹಾಗೂ ಇತರರಿಗೆ ತಿಳಿಸಬೇಕು ಎಂದು ಭಾವ. ಸದಾ ಎಂಬ ಇಲ್ಲಿಯ ಪದದಿಂದ ಶ್ರೀಹರಿಯು ಪ್ರತ್ಯಕ್ಷ, ಅನುಮಾನಾದಿಗಳಿಂದಾಗಲಿ, ವೇದಾದಿಗಳ ಆಪಾತತಃ ಅರ್ಥದಿಂದಾಗಲಿ, ಸರ್ವಥಾ ತಿಳಿಯಲ್ಪಡುವವನಲ್ಲ ಎಂಬ ವಿಶೇಷಾರ್ಥವೂ ಸೂಚಿತ: **'ಸದಾಗಮೈಕವಿಜ್ಞೇಯಂ'** (ವಿಷ್ಣುತತ್ತ್ವನಿರ್ಣಯ) – ಸದಾ ಸದಾಗಮಗಳಿಂದಲೇ ತಿಳಿಯಲ್ಪಡುವವನು ಎಂದರ್ಥ.

೯. **ವೇದವಾದೋದಿತಃ** ಎಂಬ ಪದದಿಂದ ಶ್ರೀಹರಿಯು ಸಕಲ ವೇದಾದಿಗಳಿಂದ ಪರಮಮುಖ್ಯವೃತ್ತಿಯಿಂದ ಪ್ರತಿಪಾದಿತನಾದವನು, ಸರ್ವಥಾ ಅವಾಚ್ಯನಲ್ಲ ಎಂದು ಭಾವ.

**ಪಶ್ಯತಾಂ ದುಃಖಸಂತಾನನಿರ್ಮೂಲನಂ**
**ದೃಶ್ಯತಾಂ ದೃಶ್ಯತಾಮಿತ್ಯಜೇಶಾರ್ಚಿತಮ್ ।**
**ನಶ್ಯತಾಂ ದೂರಗಂ ಸರ್ವದಾಽಪ್ಯಾತ್ಮಗಂ**
**ವಶ್ಯತಾಂ ಸ್ವೇಚ್ಛಯಾ ಸಜ್ಜನೇಷ್ವಾಗತಮ್ ॥**
**ಪ್ರೀಣಯಾಮೋ ವಾಸುದೇವಂ**
**ದೇವತಾಮಂಡಲಾಖಂಡಮಂಡನಮ್ ॥ ೬ ॥**

**ಪ :** ಪಶ್ಯತಾಮ್, ದುಃಖಸಂತಾನನಿರ್ಮೂಲನಮ್, ದೃಶ್ಯತಾಮ್, ದೃಶ್ಯತಾಮ್, ಇತಿ, ಅಜೇಶಾರ್ಚಿತಮ್, ನಶ್ಯತಾಮ್, ದೂರಗಮ್, ಸರ್ವದಾ, ಅಪಿ, ಆತ್ಮಗಮ್, ವಶ್ಯತಾಮ್, ಸ್ವೇಚ್ಛಯಾ, ಸಜ್ಜನೇಷು, ಆಗತಮ್, ಪ್ರೀಣಯಾಮಃ, ವಾಸುದೇವಮ್, ದೇವತಾಮಂಡಲಾಖಂಡಮಂಡನಮ್ ।

**ಅ :** ಪಶ್ಯತಾಮ್, ದುಃಖಸಂತಾನನಿರ್ಮೂಲನಮ್, ದೃಶ್ಯತಾಮ್, ದೃಶ್ಯತಾಮ್, ಇತಿ, ಅಜೇಶಾರ್ಚಿತಮ್, ನಶ್ಯತಾಮ್, ದೂರಗಮ್, ಸರ್ವದಾ, ಅಪಿ, ಆತ್ಮಗಮ್, ಸಜ್ಜನೇಷು, ಸ್ವೇಚ್ಛಯಾ, ವಶ್ಯತಾಮ್, ಆಗತಮ್, ದೇವತಾಮಂಡಲಾಖಂಡಮಂಡನಮ್, ವಾಸುದೇವಮ್, ಪ್ರೀಣಯಾಮಃ।

ಪ್ರ.ಪ. : **ಪಶ್ಯತಾಮ್** – ಅಪರೋಕ್ಷಜ್ಞಾನಿಗಳ; **ದುಃಖಸಂತಾನನಿರ್ಮೂಲನಮ್** – ದುಃಖದ ಪರಂಪರೆಯನ್ನೇ ಸಂಪೂರ್ಣವಾಗಿ ನಾಶ ಮಾಡುವ; **ದೃಶ್ಯತಾಮ್** – ಕಾಣಿರಿ; **ದೃಶ್ಯತಾಮ್** – ಕಾಣಿರಿ; ಇತಿ – ಎಂಬುದಾಗಿ; **ಅಜೇಶಾರ್ಚಿತಮ್** – ಬ್ರಹ್ಮರುದ್ರರಿಂದ ಪೂಜಿತನಾದ; **ನಶ್ಯತಾಮ್** – ನಾಶ ಹೊಂದುವ ಅಯೋಗ್ಯರಿಗೆ; **ದೂರಗಮ್** – ಸದಾ ದೂರನಾದ; **ಸರ್ವದಾ ಅಪಿ** – ಸದಾ ಕಾಲವೂ; **ಆತ್ಮಗಮ್** – ಅಂತರ್ಯಾಮಿಯಾಗಿ ನೆಲೆಸಿರುವ; **ಸಜ್ಜನೇಷು** – ಸಜ್ಜನರಿಗೆ; **ಸ್ವೇಚ್ಛಯಾ** – ತನ್ನ ಇಚ್ಛೆಯಿಂದಲೇ; **ವಶ್ಯತಾಮ್** – ಅಧೀನನಾಗಿ; **ಆಗತಮ್** – ಇರುವ; **ದೇವತಾಮಂಡಲಾಖಂಡಮಂಡನಮ್** – ದೇವತಾವೃಂದಕ್ಕೆ ಪರಿಪೂರ್ಣ ಅಲಂಕಾರನಾದ; **ವಾಸುದೇವಮ್** – ವಾಸುದೇವನನ್ನು; **ಪ್ರೀಣಯಾಮಃ** – ಒಲಿಸೋಣ.

**ಬಿಂಬರೂಪ ಕಾಂಬ ಜನರ ಬಂಧ ಕಳೆವನ**
**ಎಂದು ಕಾಂಬೆವೆಂದು ಬ್ರಹ್ಮರುದ್ರನಮಿತನ ।**

**ಕುಜನವೃಂದಕೆಂದು ಸಿಗದ ಸರ್ವವ್ಯಾಪ್ತನ**
**ಸುಜನವೃಂದಕೊಲಿದು ನಿತ್ಯ ಬಳಿಯಲಿರುವನ ॥ ೬ ॥**

**ಅನು : ಅಪರೋಕ್ಷಜ್ಞಾನಿಗಳ ದುಃಖದ ಪರಂಪರೆಯನ್ನೇ ಸಂಪೂರ್ಣವಾಗಿ ನಾಶ ಮಾಡುವ, ನೋಡಿರಿ, ನೋಡಿರಿ, ಎಂಬುದಾಗಿ ಬ್ರಹ್ಮರುದ್ರರಿಂದ ಪೂಜಿತನಾದ, ನಾಶ ಹೊಂದುವ ಅಯೋಗ್ಯರಿಗೆ ಸದಾ ದೂರನಾದ, ಸದಾಕಾಲವೂ ಬಿಂಬರೂಪಿಯಾಗಿ ನೆಲೆಸಿರುವ, ಸಜ್ಜನರಿಗೆ ತನ್ನ ಇಚ್ಛೆಯಿಂದಲೇ ವಶನಾಗಿರುವ, ದೇವತಾವೃಂದಕ್ಕೆ ಪರಿಪೂರ್ಣ ಅಲಂಕಾರನಾದ ವಾಸುದೇವನನ್ನು ಒಲಿಸೋಣ.**

ವಿ: ೧. ಶ್ರೀಹರಿಯನ್ನು ನೋಡುವವರಿಗೆ, ಎಂದರೆ ಸಾಕ್ಷಾತ್ಕರಿಸಿಕೊಂಡವರಿಗೆ ಎಂದರ್ಥ. ಇಲ್ಲಿಯೂ ಸಹ ಸಾಕ್ಷಾತ್ಕಾರ ಎಂದರೆ ಬಿಂಬರೂಪದ ಸಾಕ್ಷಾತ್ಕಾರವೆಂದೇ ತಿಳಿಯಬೇಕು; ದುಃಖ ಪರಂಪರೆ ನಾಶವಾಗುವುದು ಎಂದರೆ ಕರ್ಮಕ್ಷಯವಾಗಿ ಮುಕ್ತಿ ದೊರಕುವುದು ಎಂದರ್ಥ; ಇದು ಬ್ರಹ್ಮಸೂತ್ರದ ಫಲಾಧ್ಯಾಯದ ಕರ್ಮಕ್ಷಯಪಾದದ ಅರ್ಥವಾಗಿದೆ: '**ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ ತದ್ವ್ಯಪದೇಶಾತ್**' (ಬ್ರಹ್ಮಸೂತ್ರ ೪/೧/೧೩); '**ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ। ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ**' (ಅಥರ್ವಣೋಪನಿಷತ್).

೨. ಬ್ರಹ್ಮರುದ್ರಾದಿಗಳು ಸಹ ಅವನನ್ನು ಕಾಣಿರಿ, ಕಾಣಿರಿ ಎನ್ನುವ ಮೂಲಕ ಅಪರೋಕ್ಷ ಜ್ಞಾನಿಗಳಾಗಿರಿ ಎಂದು ಉಪದೇಶಿಸುತ್ತಿರುವರು; ಬ್ರಹ್ಮಾದಿದೇವತೆಗಳನ್ನು ಸಾಕ್ಷಾತ್ಕಾರ ಮಾಡಿಕೊಂಡು ಅವರಿಂದ ವರಪಡೆದ ರಾವಣಾದಿಗಳು ಸರ್ವನಾಶ ಹೊಂದಿರುವುದು ಪ್ರಸಿದ್ಧ; ಎಂದರೆ ಕೇವಲ ಅವರ ಸಾಕ್ಷಾತ್ಕಾರದಿಂದ ಮುಕ್ತಿ ಲಭಿಸದು ಎಂದರ್ಥ. ಶ್ರೀಹರಿಯ ಸಾಕ್ಷಾತ್ಕಾರವೇ ಅಪರೋಕ್ಷಜ್ಞಾನವೆನ್ನಿಸಿ ಮುಕ್ತಿಗೆ ಸಾಧನವಾಗುವುದು ಎಂಬುದು ತಾತ್ಪರ್ಯ.

೩. ಶ್ರೀಹರಿಯು ಸರ್ವರಲ್ಲಿ ಅಂತರ್ಯಾಮಿಯಾಗಿ ಒಳಗೆ ನೆಲೆಸಿರುವನು; ಆದರೆ ತನ್ನನ್ನು ನಂಬದವರಿಗೆ ಮಾತ್ರ ದೂರವೇ ಆಗಿರುವನು; ಎಂದರೆ ಅವರಿಗೆ ಅವನ ಅನುಗ್ರಹ ಲಭಿಸದು ಎಂದರ್ಥ. ಕುರುಡನಿಗೆ ಎದುರಿಗೆ ಇರುವ ಪದಾರ್ಥಗಳು ಕಾಣದೇ ಹೋಗುವಂತೆ, ಜ್ಞಾನಹೀನಜನರಿಗೆ ಶ್ರೀಹರಿಯು ಬಿಂಬರೂಪಿಯಾಗಿ ಒಳಗೆ ನೆಲೆಸಿದ್ದರೂ ಸಹ ಗೋಚರಿಸನು ಎಂದು ಭಾವ: '**ವಿಮೂಢಾ ನಾನುಪಶ್ಯಂತಿ ಪಶ್ಯಂತಿ ಜ್ಞಾನಚಕ್ಷುಷಃ**' (ಗೀತಾ. ೧೫/೧೦).

೪. ಹಾಗಿದ್ದರೆ ಸಜ್ಜನರಿಗೆ ಅವನು ಒಲಿಯುವನು; ಅಭೀಷ್ಟಗಳನ್ನು ಈಡೇರಿಸುವನು; ಭಕ್ತಪರಾಧೀನ ಎನ್ನುವುದು ಹೇಗೆ ಎಂಬುದಕ್ಕೆ ಉತ್ತರ ಇದಾಗಿದೆ. ಅವನು ತನ್ನ ಭಕ್ತರ

ಮೇಲಿನ ಪ್ರೀತಿಯಿಂದ ಅವರನ್ನು ಅನುಗ್ರಹಿಸುವನು. ಕ್ಷುದ್ರಶಕ್ತಿಗಳು ತಮ್ಮ ಉಪಾಸಕರಿಗೆ ವಶವಾಗುವಂತೆ ವಶನಾಗುವವನಲ್ಲ ಎಂದು ತಿಳಿಯಬೇಕು; ಅಂಬರೀಷಪ್ರಸಂಗದಲ್ಲಿ ಈ ವಿವರ ಬಂದಿದೆ.

**ಅಗ್ರಜಂ ಯಃ ಸಸರ್ಜಾಜಮಗ್ರ್ಯಾಕೃತಿಂ**
**ವಿಗ್ರಹೋ ಯಸ್ಯ ಸರ್ವೇ ಗುಣಾ ಏವ ಹಿ ।**
**ಉಗ್ರ ಆದ್ಯೋಽಪಿ ಯಸ್ಯಾತ್ಮಜಾಗ್ರ್ಯಾತ್ಮಜಃ**
**ಸದ್ಗೃಹೀತಃ ಸದಾ ಯಃ ಪರಂ ದೈವತಮ್ ॥**
**ಪ್ರೀಣಯಾಮೋ ವಾಸುದೇವಂ**
**ದೇವತಾಮಂಡಲಾಖಂಡಮಂಡನಮ್** ॥ ೭ ॥

**ಪ :** ಅಗ್ರಜಮ್, ಯಃ, ಸಸರ್ಜ, ಅಜಮ್, ಅಗ್ರ್ಯಾಕೃತಿಮ್, ವಿಗ್ರಹಃ, ಯಸ್ಯ, ಸರ್ವೇ, ಗುಣಾಃ, ಏವ, ಹಿ, ಉಗ್ರಃ, ಆದ್ಯಃ, ಅಪಿ, ಯಸ್ಯ, ಆತ್ಮಜಾಗ್ರ್ಯಾತ್ಮಜಃ, ಸದ್ಗೃಹೀತಃ, ಸದಾ, ಯಃ, ಪರಮ್, ದೈವತಮ್, ಪ್ರೀಣಯಾಮಃ, ವಾಸುದೇವಮ್, ದೇವತಾಮಂಡಲಾಖಂಡಮಂಡನಮ್ ।

**ಅ :** ಯಃ , ಅಗ್ರ್ಯಾಕೃತಿಮ್, ಅಜಮ್, ಅಗ್ರಜಮ್, ಸಸರ್ಜ, ಯಸ್ಯ, ಸರ್ವೇ, ಗುಣಾಃ, ಏವ, ವಿಗ್ರಹಃ, ಹಿ, ಆದ್ಯಃ, ಉಗ್ರಃ, ಅಪಿ, ಯಸ್ಯ, ಆತ್ಮಜಾಗ್ರ್ಯಾತ್ಮಜಃ, ಯಃ, ಪರಮ್, ದೈವತಮ್ , ಸದಾ , ಸದ್ಗೃಹೀತಃ, ದೇವತಾಮಂಡಲಾಖಂಡಮಂಡನಮ್, ವಾಸುದೇವಮ್, ಪ್ರೀಣಯಾಮಃ ।

**ಪ್ರ.ಪ. : ಯಃ** – ಯಾರು; **ಅಗ್ರ್ಯಾಕೃತಿಮ್** – ಶ್ರೇಷ್ಠರೂಪದ; **ಅಜಮ್** – ಬ್ರಹ್ಮನನ್ನು; **ಅಗ್ರಜಮ್** – ಮೊದಲನೆಯವನನ್ನಾಗಿ; **ಸಸರ್ಜ** – ಸೃಷ್ಟಿಸಿದನೋ; **ಯಸ್ಯ** – ಯಾರಿಗೆ; **ಸರ್ವೇ** – ಸಕಲ; **ಗುಣಾಃ** – ಗುಣಗಳು; ಏವ – ಮಾತ್ರವೇ; **ವಿಗ್ರಹಃ ಹಿ** – ದೇಹವಾಗಿವೆಯೋ; **ಆದ್ಯಃ** – ಮೊದಲನೆಯವನು ಎನ್ನಿಸಿದ; **ಉಗ್ರಃ** – ಶಿವನು; **ಅಪಿ** – ಸಹ; **ಯಸ್ಯ** – ಯಾರಿಗೆ; **ಆತ್ಮಜಾಗ್ರ್ಯಾತ್ಮಜಃ** – ಮಗನಿಗೆ ಮಗನೋ; **ಯಃ** – ಯಾರು; **ಪರಮ್** – ಸರ್ವಶ್ರೇಷ್ಠನಾದ; **ದೈವತಮ್** – ದೇವತೆ ಎಂಬುದಾಗಿ ; **ಸದಾ** – ಸದಾ; **ಸದ್ಗೃಹೀತಃ** – ಸಜ್ಜನರಿಂದ ಗೃಹೀತನಾಗಿರುವನೋ; **ದೇವತಾಮಂಡಲಾಖಂಡಮಂಡನಮ್** – ದೇವತಾವೃಂದಕ್ಕೆ ಪರಿಪೂರ್ಣ ಅಲಂಕಾರನಾದ; **ವಾಸುದೇವಮ್** – ವಾಸುದೇವನನ್ನು; **ಪ್ರೀಣಯಾಮಃ** – ಒಲಿಸೋಣ.

**ಜಗವನೆಲ್ಲ ಸೃಜಿಪ ಬ್ರಹ್ಮ ಇವನ ಕುವರನು**
**ಸರ್ವಗುಣದ ರಾಶಿಯಾದ ದಿವ್ಯದೇಹನು ।**

**ದಿವಿಜರೆಲ್ಲ ಮಣಿವ ರುದ್ರ ಇವನ ಪೌತ್ರನು**
**ಪರಮದೈವವೆಂದು ನಿರುತ ಸುಜನವಂದ್ಯನು ॥ ೭ ॥**

**ಅನು: ಯಾರು ಶ್ರೇಷ್ಠರೂಪದ ಬ್ರಹ್ಮನನ್ನು ಮೊದಲನೆಯವನನ್ನಾಗಿ ಸೃಷ್ಟಿಸಿದನೋ, ಯಾರಿಗೆ ಸಕಲಗುಣಗಳು ಮಾತ್ರವೇ ದೇಹವಾಗಿವೆಯೋ, ಯಾರಿಗೆ ಮೊದಲನೆಯವನು ಎನ್ನಿಸಿದ ಶಿವನು ಸಹ ಮಗನಿಗೆ ಮಗನೋ, ಯಾರು ಸರ್ವಶ್ರೇಷ್ಠನಾದ ದೇವತೆ ಎಂಬುದಾಗಿ ಸದಾ ಸಜ್ಜನರಿಂದ ಗೃಹೀತನಾಗಿರುವನೋ, ಅಂತಹ ದೇವತಾವೃಂದಕ್ಕೆ ಪರಿಪೂರ್ಣ ಅಲಂಕಾರನಾದ ವಾಸುದೇವನನ್ನು ಒಲಿಸೋಣ.**

ವಿ : ೧. ಶ್ರೀಹರಿಯ ಸೃಷ್ಟಿಯಲ್ಲಿ ಮೊದಲ ಸೃಷ್ಟಿಯೆಂದರೆ ಬ್ರಹ್ಮದೇವರು; ಅದು ಅವನ ಪರಿಪೂರ್ಣವಾದ ಸೃಷ್ಟಿಯೆಂಬುದು ವಿಶೇಷ; ಸಾಮಾನ್ಯವಾಗಿ ಮೊದಲ ಸೃಷ್ಟಿ ಸಾಮಾನ್ಯವಾಗಿದ್ದು, ಅನಂತರದ್ದು ಹೆಚ್ಚು ಶ್ರೇಷ್ಠ ಎಂಬುದು ಲೋಕರೂಢಿ. ಆದರೆ ಶ್ರೀಹರಿಯ ಸೃಷ್ಟಿ ಹಾಗಲ್ಲ; ಅವನ ಮೊದಲ ಸೃಷ್ಟಿಯೇ ಸರ್ವಶ್ರೇಷ್ಠವಾದ ಸೃಷ್ಟಿ ಎಂಬುದು ವಿಶೇಷ. ಇದರಿಂದ ಇತರರಂತೆ ಇರದೆ ಅವರೆಲ್ಲರಿಗಿಂತ ವಿಲಕ್ಷಣನಾಗಿದ್ದು ಸರ್ವೋತ್ತಮನಾಗಿರುವನು ಎಂದರ್ಥ.

೨. ಅವನ ಸಕಲಗುಣಗಳು ಸಹ ಅವನ ಸ್ವರೂಪವೇ ಆಗಿದ್ದು ಅನಾದಿ ಹಾಗೂ ನಿತ್ಯವಾಗಿವೆ. ಅವನು[೧] ಅಪ್ರಾಕೃತ; ಅವನ ಗುಣಗಳು ಸಹ ಅಪ್ರಾಕೃತ ಎಂದರ್ಥ. ಶ್ರೀಹರಿಯು ಅಪ್ರಾಕೃತಶರೀರನಾಗಿದ್ದು, ಜ್ಞಾನಾನಂದಮಯನಾದ ಶರೀರನಾಗಿರುವನು, ನಿರಾಕಾರನಲ್ಲ, ಅಪ್ರಾಕೃತಾಕಾರ ಎಂದು ಭಾವ : **'ನಾರಾಯಣಂ ನಿಖಿಲಪೂರ್ಣಗುಣೈಕದೇಹಮ್'** (ಅನುವ್ಯಾಖ್ಯಾನ. ೧/೧/೧).

೩. ಅನಂತರದ ಸೃಷ್ಟಿಯಲ್ಲಿ ಮೊದನೆಯವರೆನ್ನಿಸಿದ ರುದ್ರದೇವರು ಸಹ ಅವನಿಗೆ ಮೊಮ್ಮಗನೇ ಆಗಿರುವರು[೨]; ಹೀಗೆ ಇವನಿಗೆ ಬ್ರಹ್ಮನು ಮಗ, ರುದ್ರನು ಮೊಮ್ಮಗನಾಗಿ

---

೧. ನ ತಸ್ಯ ಪ್ರಾಕೃತಾ ಮೂರ್ತಿರ್ಮಾಂಸಮೇದೋಽಸ್ಥಿಸಂಭವಾ ।
ನ ಯೋಗಿತ್ವಾದೀಶ್ವರತ್ವಾತ್ ಸತ್ಯರೂಪಾಚ್ಚ್ಯುತೋ ವಿಭುಃ ॥
ಸದ್ದೇಹಃ ಸುಖಗಂಧಶ್ಚ ಜ್ಞಾನಭಾಃ ಸತ್ಪರಾಕ್ರಮಃ ।
ಜ್ಞಾನಜ್ಞಾನಃ ಸುಖಸುಖಃ ಸ ವಿಷ್ಣುಃ ಪರಮೇಶ್ವರಃ ॥ ಇತಿ ಪೈಂಗಿಖಿಲೇ । - ಗೀ.ಭಾ. (೨/೭೨)

೨. ಬ್ರಹ್ಮಣಃ ಪ್ರಥಮೇ ಕಲ್ಪೇ ಶಿವಃ ಪ್ರಥಮಜಃ ಸ್ಮೃತಃ ।
ಸನಕಾದ್ಯಾಸ್ತು ವಾರಾಹೇ ಬ್ರಹ್ಮಾ ವಿಷ್ಣೋಃ ಸುತೋಽಗ್ರಜಃ ॥ ಇತಿ ಬ್ರಹ್ಮಾಂಡೇ ।
- ಅಥರ್ವಣೋಪನಿಷದ್ಭಾಷ್ಯ

ಕಲತ್ರಂ ಕಮಲಾ ಯಸ್ಯ ಪುತ್ರಃ ಕಮಲಸಂಭವಃ ।
ಶಿವಾದ್ಯಾಃ ಸೇವಕಾ ಯಸ್ಯ ನಮೋ ವಿಶ್ವಕುಟುಂಬಿನೇ ॥ - ವಿಷ್ಣುತತ್ತ್ವವಿನಿರ್ಣಯಟೀಕಾ

ಇರುವರು; ಶ್ರೀಹರಿಯೇ ಸರ್ವೋತ್ತಮ ಎಂದರ್ಥ. ರುದ್ರದೇವರು ವರಾಹಕಲ್ಪದ ಸೃಷ್ಟಿಯಲ್ಲಿ ಬ್ರಹ್ಮದೇವರ ಹಿರಿಯಪುತ್ರ ಎನ್ನಿಸಿದ ವಿವರ ಆಥರ್ವಣಭಾಷ್ಯದಲ್ಲಿದೆ.

೪. ಆವನನ್ನು ಸಜ್ಜನರೆಲ್ಲಾ ಸದಾ ಪರದೇವತೆ ಎಂದೇ ಆರಾಧಿಸುವರು. ಇಲ್ಲಿ ಸಜ್ಜನರು ಎಂದರೆ ಧ್ರುವ, ಪ್ರಹ್ಲಾದಾದಿಗಳು ಎಂದರ್ಥ; ದ್ರುಪದ ವಿರಾಟ ಮೊದಲಾದವರು ಒಂದುಕಾಲದಲ್ಲಿ ಜರಾಸಂಧನ ಅನುಯಾಯಿಗಳಾಗಿದ್ದು, ಕೃಷ್ಣನ ವಿರೋಧಿಗಳಾಗಿದ್ದರು. ಆದರೆ, ಮುಂದೆ, ಕೃಷ್ಣಭೀಮರ ಮಾಹಾತ್ಮ್ಯವನ್ನು ಕಂಡ ಮೇಲೆ ಜರಾಸಂಧನನ್ನು ತೊರೆದು ಇವರ ಅನುಯಾಯಿಗಳಾದರು. ಎಂದರೆ ಕಾರಣಾಂತರದಿಂದ ಸಜ್ಜನರು ಶ್ರೀಹರಿಗೆ ವಿಮುಖರಂತೆ ತೋರಿದರೂ, ಮೂಲತಃ ಅವರು ವೈಷ್ಣವರೇ ಆಗಿರುವ ಸಾತ್ತ್ವಿಕರು ಎಂದರ್ಥ.

೫. ಇಲ್ಲಿ **ಸದ್ಗೃಹೀತ** ಎಂಬುದಕ್ಕೆ ಸತ್ ಎಂಬ ಹೆಸರಿನ ಮುಖ್ಯಪ್ರಾಣದಿಂದ ಸದಾ ಗೃಹೀತ ಎಂದರ್ಥ. ಇತರ ಭಕ್ತರೂ ಸಹ ಹಾಗೆಯೇ ಆದರೂ ಒಮ್ಮೊಮ್ಮೆ ಅವನನ್ನು ಮರೆಯುವುದುಂಟು. ಆದರೆ ಶ್ರೀವಾಯುದೇವರು ಹಾಗಲ್ಲ; ಅವರು ಪ್ರಳಯಕಾಲದಲ್ಲೂ ಅವನನ್ನು ಪರಿಪೂರ್ಣವಾಗಿ ಆರಾಧಿಸುವವರು ಎಂದರ್ಥ; ಇದಕ್ಕೆ ಮುಖ್ಯಪ್ರಾಣನ ಮೂಲಕ ಆರಾಧಿಸುವವರಿಗೆ ಸದಾ ಪರದೇವತೆ ಎಂಬುದಾಗಿಯೇ ಗೃಹೀತ ಎಂಬ ಮತ್ತೊಂದು ಅರ್ಥವೂ ವಿವಕ್ಷಿತ.

**ಅಚ್ಯುತೋ ಯೋ ಗುಣೈರ್ನಿತ್ಯಮೇವಾಖಿಲೈಃ**
**ಪ್ರಚ್ಯುತೋಽಶೇಷದೋಷೈಃ ಸದಾ ಪೂರ್ತಿತಃ ।**
**ಉಚ್ಯತೇ ಸರ್ವವೇದೋರುವಾದೈರಜಃ**
**ಸ್ವರ್ಚ್ಯತೇ ಬ್ರಹ್ಮರುದ್ರೇಂದ್ರಪೂರ್ವೈಃ ಸದಾ ॥**
**ಪ್ರೀಣಯಾಮೋ ವಾಸುದೇವಂ**
**ದೇವತಾಮಂಡಲಾಖಂಡಮಂಡನಮ್** ॥ ೮ ॥

**ಪ** : ಅಚ್ಯುತಃ, ಯಃ, ಗುಣೈಃ, ನಿತ್ಯಮ್, ಏವ, ಅಖಿಲೈಃ, ಪ್ರಚ್ಯುತಃ, ಅಶೇಷ-ದೋಷೈಃ, ಸದಾ, ಪೂರ್ತಿತಃ, ಉಚ್ಯತೇ, ಸರ್ವವೇದೋರುವಾದೈಃ, ಅಜಃ, ಸ್ವರ್ಚ್ಯತೇ, ಬ್ರಹ್ಮರುದ್ರೇಂದ್ರಪೂರ್ವೈಃ, ಸದಾ, ಪ್ರೀಣಯಾಮಃ, ವಾಸುದೇವಮ್, ದೇವತಾಮಂಡಲಾ-ಖಂಡಮಂಡನಮ್ ।

**ಅ** : ಯಃ, ಅಖಿಲೈಃ, ಗುಣೈಃ, ನಿತ್ಯಮ್, ಏವ, ಅಚ್ಯುತಃ, ಸದಾ, ಪೂರ್ತಿತಃ, ಅಶೇಷದೋಷೈಃ, ಪ್ರಚ್ಯುತಃ, ಅಜಃ, ಸರ್ವವೇದೋರುವಾದೈಃ, ಉಚ್ಯತೇ, ಬ್ರಹ್ಮರುದ್ರೇಂದ್ರಪೂರ್ವೈಃ, ಸದಾ, ಸ್ವರ್ಚ್ಯತೇ, ದೇವತಾಮಂಡಲಾಖಂಡಮಂಡನಮ್, ವಾಸುದೇವಮ್, ಪ್ರೀಣಯಾಮಃ ।

**ಪ್ರ.ಪ. : ಯಃ** – ಯಾರು; **ಅಖಿಲೈಃ** – ಸಕಲ; **ಗುಣೈಃ** – ಗುಣಗಳಿಂದ; **ನಿತ್ಯಮ್ ಏವ** – ಸದಾ ಕಾಲವೂ; **ಅಚ್ಯುತಃ** – ಅಚ್ಯುತನಾಗಿರುವನೋ; **ಸದಾ** – ಸರ್ವದಾ; **ಪೂರ್ತಿತಃ** – ಗುಣಪೂರ್ಣನಾದ್ದರಿಂದ; **ಅಶೇಷದೋಷೈಃ** – ಸಕಲ ದೋಷಗಳಿಂದ; **ಪ್ರಚ್ಯುತಃ** – ರಹಿತನಾಗಿರುವನೋ; **ಅಜಃ** – ಹುಟ್ಟಿಲ್ಲದವನಾದ ಅವನು; **ಸರ್ವವೇದೋರುವಾದ್ಯೈಃ** – ಸಕಲ ವೇದಗಳ ಮಹಾತಾತ್ಪರ್ಯ ಎಂಬುದಾಗಿ; **ಉಚ್ಯತೇ** – ಹೇಳಲ್ಪಡುವವನು; **ಬ್ರಹ್ಮರುದ್ರೇಂದ್ರಪೂರ್ವೈಃ** – ಬ್ರಹ್ಮ, ರುದ್ರ, ಇಂದ್ರ ಮೊದಲಾ- ದವರಿಂದ; **ಸದಾ** – ಯಾವಾಗಲೂ; **ಸ್ವರ್ಚ್ಯತೇ** – ಚೆನ್ನಾಗಿ ಪೂಜಿಸಲ್ಪಡುವನೋ; **ದೇವತಾಮಂಡಲಾಖಂಡಮಂಡನಮ್** – ದೇವತಾವೃಂದಕ್ಕೆ ಪರಿಪೂರ್ಣ ಅಲಂಕಾರನಾದ; **ವಾಸುದೇವಮ್** – ವಾಸುದೇವನನ್ನು; **ಪ್ರೀಣಯಾಮಃ** – ಒಲಿಸೋಣ.

**ಸಕಲಗುಣಗಳಿಂದ ನಿತ್ಯ ತುಂಬಿ ಇರುವನು**
**ಸಕಲದೋಷದಿಂದ ದೂರ ಅದಕೆ ಈತನು ।**
**ಸಕಲವೇದವೃಂದದಿಂದ ಮುಖ್ಯವಾಚ್ಯನು**
**ಸಕಲಬ್ರಹ್ಮರುದ್ರರಿಂದ ನಿತ್ಯಪೂಜ್ಯನು ॥ ೮ ॥**

**ಅನು : ಯಾರು ಸಕಲ ಗುಣಗಳಿಂದ ಸದಾ ಕಾಲವೂ ಅಚ್ಯುತನಾಗಿರುವನೋ, ಸರ್ವದಾ ಗುಣಪೂರ್ಣನಾದ್ದರಿಂದ ಸಕಲ ದೋಷಗಳಿಂದ ರಹಿತನಾಗಿರುವನೋ, ಹುಟ್ಟಿಲ್ಲದವನಾದ ಅವನು ಬ್ರಹ್ಮ, ರುದ್ರ, ಇಂದ್ರ ಮೊದಲಾದವರಿಂದ ಸಕಲ ವೇದಗಳ ಮಹಾತಾತ್ಪರ್ಯ ಎಂಬುದಾಗಿ ಯಾವಾಗಲೂ ಚೆನ್ನಾಗಿ ಪೂಜಿಸಲ್ಪಡುವನೋ, ದೇವತಾವೃಂದಕ್ಕೆ ಪರಿಪೂರ್ಣ ಅಲಂಕಾರನಾದ ವಾಸುದೇವನನ್ನು ಒಲಿಸೋಣ.**

ವಿ: ೧. ಶ್ರೀಹರಿಯು ಸಕಲಗುಣಗಳಿಂದಲೂ ಸದಾ ಪೂರ್ಣ; ಎಂದರೆ ವರಾದಿಗಳಿಂದ ಅಥವಾ ಹೆಚ್ಚಿನ ಸಾಧನೆಗಳಿಂದ ಅವುಗಳನ್ನು ಪಡೆದುಕೊಂಡವನಲ್ಲ; ಬ್ರಹ್ಮಾದಿದೇವತೆಗಳು ಸಾಧನೆಯ ಅನಂತರ ಅವುಗಳನ್ನು ಪಡೆದುಕೊಂಡಂತೆ ಶ್ರೀಹರಿಯು ಪಡೆದುಕೊಂಡಿಲ್ಲ ಎಂದರ್ಥ. ಇದು ಬ್ರಹ್ಮಸೂತ್ರದ ಸಮನ್ವಯಾಧ್ಯಾಯದ ಅರ್ಥವಾಗಿದೆ. ಶ್ರೀಹರಿಯು ಗುಣಪೂರ್ಣ ಎಂದರೆ ಆನಂದಾದಿ ಸಕಲಗುಣಗಳಿಂದ ಪರಿಪೂರ್ಣ, ನಿತ್ಯದಲ್ಲೂ ಎಂದರೆ, ಅನಾದಿಕಾಲದಿಂದ ಅನಂತಕಾಲದವರೆಗೂ ಸಹ ಗುಣಪೂರ್ಣನೇ ಆಗಿರುವನು ಎಂದು ಭಾವ.

೨. ಶ್ರೀಹರಿಯು ಗುಣಪೂರ್ಣನಾಗಿರುವಂತೆ ದೋಷದೂರನು ಆಗಿರುವನು. ಇಲ್ಲಿ ದೋಷದೂರ ಎಂದರೆ ಚಿಂತಾಸಂತಾಪಾದಿಸಕಲದೋಷದೂರ ಎಂದರ್ಥ. ಅವನ ದೋಷದೂರತ್ವವು ಸಹ ಗುಣಪೂರ್ಣತ್ವದಂತೆ ನಿತ್ಯವಾದುದು. ಎಂದರೆ, ಅವನು ಗುಣಪೂರ್ಣನಾದ್ದರಿಂದಲೇ, ಸದಾ ದೋಷದೂರನೂ ಆಗಿರುವನು ಎಂದರ್ಥ.

೩. ಸರ್ವವೇದವಾದಗಳಿಂದ ಎಂದರೆ, ಸಮಸ್ತಶಾಸ್ತ್ರಪ್ರಪಂಚದಿಂದ ಶ್ರೀಹರಿಯು **ಅಜ** (ಅಜ ಎಂದರೆ ಸರ್ವಥಾ ಹುಟ್ಟಿಲ್ಲದವನು)ಎಂಬುದಾಗಿಯೇ ಹೇಳಲ್ಪಡುವನು. ಇಲ್ಲಿ ಸರ್ವವೇದಗಳು ಎಂದರೆ ಋಗ್ವೇದ ಮೊದಲಾದ ನಾಲ್ಕು ವೇದಗಳೊಂದಿಗೆ ಪಂಚಮವೇದವೆನ್ನಿಸಿದ ಮಹಾಭಾರತವೇ ಮೊದಲಾದ ಇತಿಹಾಸ ಹಾಗೂ ಪುರಾಣಾದಿ ಇತರಸಕಲಸಚ್ಛಾಸ್ತ್ರಗಳಿಂದಲೂ, ಪರಮಮುಖ್ಯವೃತ್ತಿಯಿಂದ ಸದಾ ಪ್ರತಿಪಾದಿತನಾದವನು ಎಂದರ್ಥ. ವೇದವಾದ ಎಂಬುದಕ್ಕೆ ವೇದಗಳ ಅಕ್ಷರ, ಪದ, ವಾಕ್ಯ, ಮಂತ್ರ, ಸೂಕ್ತ, ಸ್ವರ ಮೊದಲಾದ ಎಲ್ಲವುಗಳಿಂದಲೂ, ಸರ್ವೋತ್ತಮ ಎಂಬುದಾಗಿಯೇ [೧]ಪ್ರತಿಪಾದಿತ ಎಂದರ್ಥ. ಇಲ್ಲಿ '**ಉರುವಾದ**' ಎಂದರೆ ಮಹಾತಾತ್ಪರ್ಯ ಎಂದರ್ಥ. '**ಅಜ**' ಎಂದರೆ ಅನಾದಿ ಎಂದರ್ಥ.

೪. **ಸ್ವರ್ಚ್ಯತೇ** - ಶ್ರೀಹರಿಯು ಬ್ರಹ್ಮರುದ್ರಾದಿ ಸಮಸ್ತದೇವತೆಗಳು ಸದಾ ಸರ್ವದೇವೋತ್ತಮ, ಸರ್ವೋತ್ತಮ ಎಂದೇ ಸದಾ ಪೂಜಿತ. '**ಸ್ವರ್ಚ್ಯತೇ**' ಎಂಬುದಕ್ಕೆ ಜ್ಞಾನಭಕ್ತ್ಯಾದಿಗಳಿಂದ ಕೂಡಿದವನಾಗಿಯೇ ಸದಾ ಸರ್ವೋತ್ತಮ ಎಂಬ ದೃಢನಿಶ್ಚಯದಿಂದಲೇ ಸಕಲಬಗೆಯ ಪೂಜೆಯನ್ನು ಸಹ ರಮಾಬ್ರಹ್ಮಾದಿಸಮಸ್ತರೂ ಶ್ರೀಹರಿಗೆ ಸಲ್ಲಿಸುವರು ಎಂದರ್ಥ. ಪೂಜೆ ಉತ್ತಮ ಎನ್ನಿಸುವುದು ಅಂತರಂಗದಲ್ಲಿ ಭಕ್ತಿ ಹಾಗೂ ಬಾಹ್ಯದಲ್ಲಿಸಕಲಪೂಜಾದ್ರವ್ಯಗಳು ಪೂರ್ಣಪ್ರಮಾಣದಲ್ಲಿಲಭ್ಯವಿದ್ದಾಗ. ಅಂತಹ ಉತ್ತಮಪೂಜೆ ಶ್ರೀಹರಿಗೆ ಬ್ರಹ್ಮಾದಿಗಳಿಂದ ಸಲ್ಲುವುದು ಎಂದರ್ಥ. ಇಲ್ಲಿ ಬ್ರಹ್ಮಶಬ್ದಕ್ಕೆ ಚತುರ್ಮುಖಬ್ರಹ್ಮದೇವರು ಎಂಬ ಅರ್ಥದೊಂದಿಗೆ ಮಹಾಲಕ್ಷ್ಮಿ ಎಂಬ ಅರ್ಥವೂ ಸಹ ಗ್ರಾಹ್ಯ: '**ಪ್ರಕೃತಿಃ ಪರಮಂ ಬ್ರಹ್ಮ**' (ವಿಷ್ಣುತತ್ತ್ವನಿರ್ಣಯ); '**ಮಮ ಯೋನಿರ್ಮಹದ್ಬ್ರಹ್ಮ**' (ಗೀತಾ. ೧೪/೩); ಆದರಿಂದ ರಮಾಬ್ರಹ್ಮಾದಿಸಕಲದೇವತೆಗಳಿಂದ ಶ್ರೀಹರಿಯು ಪೂಜಿತ ಎಂಬ ವಿಶೇಷಾರ್ಥ ಲಭಿಸುವುದು.

---

೧. **ಸರ್ವೈಶ್ಚ ವೈದಿಕಪದೈರಪಿ ಲೋಕಶಬ್ದೈ-**
**ರ್ಮೇಘಾಗ್ನಿವಾರಿಧಿತಲಾದಿರವೈಶ್ಚ ಸರ್ವೈಃ।**
**ಏಕೋಽಭಿಧೇಯಪರಿಪೂರ್ಣಗುಣಃ ಪ್ರಿಯೋಽಲಂ**
**ನಾರಾಯಣೋ ಮಮ ಸದೈವ ಸುತುಷ್ಟಿಮೇತು ॥** – ಐತರೇಯಭಾಷ್ಯ

**ಧಾರ್ಯತೇ ಯೇನ ವಿಶ್ವಂ ಸದಾಽಜಾದಿಕಂ**
**ವಾರ್ಯತೇಽಶೇಷದುಃಖಂ ನಿಜಧ್ಯಾಯಿನಾಮ್ ।**
**ಪಾರ್ಯತೇ ಸರ್ವಮನ್ಯೈರ್ನ ಯತ್ಪಾರ್ಯತೇ**
**ಕಾರ್ಯತೇ ಚಾಖಿಲಂ ಸರ್ವಭೂತೈಃ ಸದಾ ॥**
**ಪ್ರೀಣಯಾಮೋ ವಾಸುದೇವಂ**
**ದೇವತಾಮಂಡಲಾಖಂಡಮಂಡನಮ್ ॥ ೯ ॥**

**ಪ :** ಧಾರ್ಯತೇ, ಯೇನ, ವಿಶ್ವಮ್, ಸದಾ, ಅಜಾದಿಕಮ್, ವಾರ್ಯತೇ, ಅಶೇಷದುಃಖಮ್, ನಿಜಧ್ಯಾಯಿನಾಮ್, ಪಾರ್ಯತೇ, ಸರ್ವಮ್, ಅನ್ಯೈಃ, ನ, ಯತ್, ಪಾರ್ಯತೇ, ಕಾರ್ಯತೇ, ಚ, ಅಖಿಲಮ್, ಸರ್ವಭೂತೈಃ, ಸದಾ, ಪ್ರೀಣಯಾಮಃ, ವಾಸುದೇವಮ್, ದೇವತಾಮಂಡಲಾಖಂಡಮಂಡನಮ್ ।

**ಅ :** ಯೇನ, ಅಜಾದಿಕಮ್, ವಿಶ್ವಮ್, ಸದಾ, ಧಾರ್ಯತೇ, ನಿಜಧ್ಯಾಯಿನಾಮ್, ಅಶೇಷದುಃಖಮ್, ವಾರ್ಯತೇ, ಅನ್ಯೈಃ, ಯತ್, ನ, ಪಾರ್ಯತೇ, ಸರ್ವಮ್, ತತ್, ಪಾರ್ಯತೇ, ಚ, ಅಖಿಲಮ್, ಸರ್ವಭೂತೈಃ, ಸದಾ, ಕಾರ್ಯತೇ, ದೇವತಾಮಂಡಲಾ-ಖಂಡಮಂಡನಮ್, ವಾಸುದೇವಮ್, ಪ್ರೀಣಯಾಮಃ ।

ಪ್ರ.ಪ. : **ಯೇನ** – ಯಾರಿಂದ; **ಅಜಾದಿಕಮ್** – (ರಮಾ) ಬ್ರಹ್ಮಮೊದಲಾದವರಿಂದ ಕೂಡಿದ; **ವಿಶ್ವಮ್** – ಸಕಲಜಗತ್ತು; **ಸದಾ** – ಸದಾಕಾಲವೂ; **ಧಾರ್ಯತೇ** – ಧರಿಸಲ್ಪಟ್ಟಿದೆಯೋ; **ನಿಜಧ್ಯಾಯಿನಾಮ್** – ತನ್ನನ್ನು ಸರಿಯಾಗಿ ಧ್ಯಾನಿಸುವವರ; **ಅಶೇಷದುಃಖಮ್** – ಸಕಲ ದುಃಖವು; **ವಾರ್ಯತೇ** – ಪರಿಹರಿಸಲ್ಪಡುವುದೋ; **ಅನ್ಯೈಃ** – ಇತರರಿಂದ; **ಯತ್** – ಯಾವುದು; **ನ ಪಾರ್ಯತೇ** – ಮಾಡಲು ಅಸಾಧ್ಯವಾದುದೋ; **ತತ್** – ಅಂತಹ; **ಸರ್ವಮ್** – ಎಲ್ಲವೂ; **ಪಾರ್ಯತೇ** – ಮಾಡಲ್ಪಡುವುದೋ; **ಚ** – ಮತ್ತು; **ಸರ್ವಭೂತೈಃ** – ಸಕಲ ಜೀವಿಗಳಿಂದ; **ಅಖಿಲಮ್** – ಸಕಲವೂ; **ಸದಾ** – ಸದಾಕಾಲವೂ; **ಕಾರ್ಯತೇ** – ಮಾಡಿಸಲ್ಪಡುವುದೋ ಅಂತಹ; **ದೇವತಾಮಂಡಲಾಖಂಡಮಂಡನಮ್** – ದೇವತಾವೃಂದಕ್ಕೆ ಪರಿಪೂರ್ಣ ಅಲಂಕಾರನಾದ; **ವಾಸುದೇವಮ್** – ವಾಸುದೇವನನ್ನು; **ಪ್ರೀಣಯಾಮಃ** – ಒಲಿಸೋಣ.

**ಅಜಭವಾದಿಲೋಕಕೆಲ್ಲ ಇವನೆ ಧಾರಕ**
**ಭಜಿಪಜನರ ದುಃಖರಾಶಿ ನಿರುತ ವಾರಕ ।**
**ಅನ್ಯರೆಂದು ಮಾಡದಂಥ ಕಾರ್ಯಕಾರಕ**
**ಸಕಲಜನರ ಕಾರ್ಯಗಳಿಗು ತಾನೆ ಪ್ರೇರಕ ॥ ೯ ॥**

**ಅನು : ಶ್ರೀಹರಿಯು (ರಮಾ)ಬ್ರಹ್ಮ ಮೊದಲಾದವರಿಂದ ಕೂಡಿದ ಸರ್ವ ಜಗತ್ತು ಸದಾಕಾಲವೂ ಧರಿಸಿದವನು, ತನ್ನನ್ನು ಸರಿಯಾಗಿ ಧ್ಯಾನಿಸುವವರ ಸಕಲ ದುಃಖವು ಪರಿಹರಿಸುವವನು, ಇತರರಿಂದ ಅಸಾಧ್ಯವಾದುದನ್ನು ಮಾಡುವವನು, ಎಲ್ಲವನ್ನು ಮಾಡುವವನು ಮತ್ತು ಸಕಲಜೀವಿಗಳಿಂದ ಸಕಲವವನ್ನೂ, ಸದಾಕಾಲವೂ ಮಾಡಿಸುವವನು, ಅಂತಹ ದೇವತಾವೃಂದಕ್ಕೆ ಪರಿಪೂರ್ಣಅಲಂಕಾರನಾದ ವಾಸುದೇವನನ್ನು ಒಲಿಸೋಣ.**

ವಿ : ೧. ಶ್ರೀಹರಿಯು ಬ್ರಹ್ಮಾದಿಗಳಿಂದ ಕೂಡಿದ ವಿಶ್ವವನ್ನು ಸದಾ ಧರಿಸಿರುವನು ಎಂದರೆ ಕೂರ್ಮರೂಪದಿಂದ ಬ್ರಹ್ಮಾಂಡವನ್ನು ಧರಿಸಿರುವನು; ಒಟ್ಟಾಗಿ ಪ್ರತಿಯೊಂದನ್ನೂ, ಪ್ರತಿಯೊಬ್ಬರನ್ನೂ, ಪ್ರತಿಯೊಂದು ಕ್ಷಣದಲ್ಲೂ, ಪ್ರತಿಯೊಂದು ಸ್ಥಳದಲ್ಲೂ ಸಂರಕ್ಷಿಸುವವನು ಶ್ರೀಹರಿಯೇ ಎಂದರ್ಥ: **ಧಾರಯಾಮ್ಯಹಮೋಜಸಾ** (ಗೀತಾ ೧೫/೧೩); ಹೊರಗೆ ಮಾತ್ರವಲ್ಲದೆ ಒಳಗೆ ಬಿಂಬಮೂರ್ತಿಯಾಗಿದ್ದು ಸಹ ಧರಿಸಿರುವನು. ಆದರಂತೆ ಇಡೀ ವಿಶ್ವದಲ್ಲಿ ಒಳಗೂ, ಹೊರಗೂ ಸಹ ನೆಲೆಸಿರುವನು ಎಂಬ [೧]ವಿಶೇಷಾಂಶವನ್ನು ತಿಳಿಯಬೇಕು.

೨. ಶ್ರೀಹರಿಯು ತನ್ನನ್ನು ಸದಾ ಧ್ಯಾನಿಸುವವರ ಸಕಲ ದುಃಖಗಳನ್ನೂ ಸಂಪೂರ್ಣವಾಗಿ ಪರಿಹರಿಸುವನು; ಅಂತಹ ಸಾಮರ್ಥ್ಯ ಸ್ವಾತಂತ್ರ್ಯೇಣ ಬೇರಾವ ದೇವತೆಗೂ ಇಲ್ಲ ಎಂದರ್ಥ; ಧ್ರುವ, ಪ್ರಹ್ಲಾದ, ಗಜೇಂದ್ರ ಮೊದಲಾದ ಅಸಂಖ್ಯ ಭಕ್ತರನ್ನು ಹಾಗೆ ಉದ್ಧರಿಸಿರುವ ಪ್ರಸಂಗಗಳು ಶ್ರೀಮದ್ಭಾಗವತಾದಿಗಳಲ್ಲಿ ನಿರೂಪಿತವಾಗಿವೆ; ಇಲ್ಲಿ ಮುಖ್ಯವಾಗಿ ದುಃಖ ಎಂದರೆ ಸಂಸಾರಬಂಧನವೆಂದೇ ಅರ್ಥ; ಅದರಿಂದ ಪಾರುಮಾಡಬಲ್ಲವನು ಅವನೊಬ್ಬನೇ: '**ಭವಬಂಧೈಕಮೋಚಕಃ**'. ಇತರರಿಂದ ದಾಟಿಸಲಾಗದ ಸಂಸಾರಸಾಗರವನ್ನು ಶ್ರೀಹರಿಯು ದಾಟಿಸುವನು ಎಂಬುದು ಇದರ ಮುಖ್ಯಭಾವ. ಅದರಂತೆ ಇತರರು ಸ್ವತಃ ಮಾಡಲಾಗದ ಕಾರ್ಯಗಳನ್ನು ಶ್ರೀಹರಿಯು ತಾನು ಅನಾಯಾಸದಿಂದ ಮಾಡುವನು ಎಂಬ ಅರ್ಥವೂ ಸೂಚಿತ; ಇಲ್ಲಿಯ **ಸ್ವರ್ಚ್ಯತೇ** ಎಂಬ ಪದದಿಂದ ಸ್ಮರ್ಯತೇ ಇತ್ಯಾದಿ ಕೃಷ್ಣಾಮೃತಮಹಾರ್ಣವದ ಮಂಗಲಶ್ಲೋಕದಲ್ಲಿನ ಇತರ ವಿವರಗಳು ಉಪಲಕ್ಷಿತ.

೩. ಶ್ರೀಹರಿಯು ತಾನು ಎಲ್ಲವನ್ನೂ ಮಾಡುವನು ಮಾತ್ರವಲ್ಲದೆ, ಇತರ ಸಕಲರಿಂದಲೂ ಸಹ ಮಾಡಿಸುವನು ಸಹ ಎಂಬುದು ಮತ್ತೊಂದು ಹಿರಿಮೆ ಎಂದು ಭಾವ. ಸೃಷ್ಟ್ಯಾದಿಕಾರ್ಯಗಳನ್ನು ತಾನು ಮಾಡುವುದಲ್ಲದೆ, ಬ್ರಹ್ಮಾದಿದೇವತೆಗಳಲ್ಲಿದ್ದು ಸಹ

---

೧. ಯಚ್ಚ ಕಿಂಚಿತ್ ಜಗತ್ಸರ್ವಂ ದೃಶ್ಯತೇ ಶ್ರೂಯತೇಽಪಿ ವಾ ।
ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ ॥ – ಮಹಾನಾರಾಯಣೋಪನಿಷತ್

ಮಾಡಿಸುವನು. ಅದರಂತೆ ಪ್ರತಿಯೊಬ್ಬರ ಪ್ರತಿಕಾರ್ಯವನ್ನು ಸಹ ಶ್ರೀಹರಿಯು ತಾನೇ ಮುಖ್ಯವಾಗಿ ಅವರಲ್ಲಿ[೧]ನೆಲೆಸಿದ್ದು ಮಾಡುವನು ಎಂದು ಭಾವ.

೪. '**ಅಖಿಲಂ**' ಎಂಬ ಪದದಿಂದ ಸಮಸ್ತಕಾರ್ಯಗಳು ಎಂದೂ, ಅವರವರ ಯೋಗ್ಯತೆಗೆ ತಕ್ಕಂತೆ ಪೂರ್ಣವಾಗಿ ಎಂದೂ ಅರ್ಥ. 'ಸರ್ವಭೂತೈಃ' ಎಂಬುದಕ್ಕೆ ಸರ್ವಪ್ರಾಣಿಗಳಿಂದ ಎಂಬುದು ಸಾಮಾನ್ಯವಾದ ಅರ್ಥ. ಬ್ರಹ್ಮಾದಿದೇವತೆಗಳಿಂದಲೂ ಸಹ ಎಂಬುದು ಮುಖ್ಯವಾದ ಅರ್ಥ: '**ಬ್ರಹ್ಮಾದಯೋ ಹಿ ಭೂತಾನಿ ತೇಷಾಮಂತರ್ಗತೋ ಹರಿಃ । ಸಮಃ ಸ ಸರ್ವಭೂತೇಷು ಯ ಏವಂ ವೇದ ತತ್ತ್ವವಿತ್ ॥** ಇತಿ ಭಾರತೇ' (ಬೃಹದ್ಭಾಷ್ಯ).

೫. ಇಲ್ಲಿ 'ಸದಾ' ಎಂಬ ಪದ ಪ್ರತಿಪಾದದೊಂದಿಗೂ ಅನ್ವಯವಾಗಿ ಶ್ರೀಹರಿಯು ಸದಾ ಸರ್ವಧಾರಕ, ತನ್ನವರಿಗೆ ಸರ್ವದುಃಖನಿವಾರಕ, ಸರ್ವ ಆಪತ್ತುಗಳಿಂದ ಪಾರಕ, ಸದಾ ಸರ್ವರಿಂದ ಕಾರಕ, ಎಂಬ ವಿಶೇಷಾರ್ಥ ಕೊಡುವುದು. ಒಟ್ಟಾಗಿ ಶ್ರೀಹರಿಯು 'ಕರ್ತುಂ ಅಕರ್ತುಂ ಅನ್ಯಥಾಕರ್ತುಮಪಿ ಸಮರ್ಥಃ' ಆಗಿರುವಂತೆ, 'ಕಾರಯಿತುಂ ಅಕಾರಯಿತುಂ ಅನ್ಯಥಾಕಾರಯಿತುಮಪಿ ಸಮರ್ಥಃ' ಎಂಬ ವಿಶೇಷಾರ್ಥವು ಲಭಿಸುವುದು.

೬. ಇಲ್ಲಿ ನಿಜ ಎಂಬುದಕ್ಕೆ ಸ್ವಾಭಾವಿಕವಾಗಿ ಎಂದೂ, ನಿಸ್ಪೃಹವಾಗಿ ಎಂದೂ, ನಿಷ್ಕಪಟವಾಗಿ ಎಂದೂ ಅನೇಕ ಬಗೆಯ ಅರ್ಥಗಳು ವಿವಕ್ಷಿತ.

೭. ಇತರರು ಮಾಡಲಾಗದ್ದನ್ನೆಲ್ಲಾ ಶ್ರೀಹರಿಯು ಲೀಲೆಯಿಂದ ಮಾಡುವನು; ಎಂದರೆ ಅವನು ಎಲ್ಲವನ್ನೂ ಮಾಡುವನು ಹಾಗೂ ಅದಕ್ಕಾಗಿ ಯಾವ ಆಯಾಸಕ್ಕೂ ತುತ್ತಾಗದವನು; ಬ್ರಹ್ಮವರ ಶಿವವರ ಮೊದಲಾದ ಕಾರಣದಿಂದ ವಿಶ್ವಕ್ಕೆ ಸಮಸ್ಯೆಯಾಗಿದ್ದ ಹಿರಣ್ಯಕಶಿಪು, ಹಿರಣ್ಯಾಕ್ಷ, ರಾವಣ, ಕುಂಭಕರ್ಣ ಮೊದಲಾದವರ ಸಂಹಾರ ಮೊದಲಾದವು ಇದಕ್ಕೆ ನಿದರ್ಶನ; ಅದರಂತೆ ಶಿವಧನುರ್ಭಂಗ, ದ್ವಾರಕಾನಿರ್ಮಾಣ, ಸೇತುನಿರ್ಮಾಣ ಇತ್ಯಾದಿ ಅಸಂಖ್ಯ ಕಾರ್ಯಗಳೂ ಸಹ.

೮. ಇತರ ಎಲ್ಲಾ ಜೀವಿಗಳಿಂದ ನಡೆಯುವ ಎಲ್ಲಾ ಕಾರ್ಯಗಳನ್ನು ಅವರ ಒಳಗೆ ಹಾಗೂ ಹೊರಗೆ ನೆಲೆಸಿದ್ದು ಮಾಡುವವನು ಹಾಗೂ ಮಾಡಿಸುವವನು ಅವನೇ ಎಂದರ್ಥ; ಇದು ಶ್ರೀಹರಿಯು ಸರ್ವರಿಗೂ ಬಿಂಬ ಎಂಬುದಕ್ಕೆ ವಿವರಣೆಯಾಗಿದೆ. '**ಪಶ್ಯನ್ ಶೃಣ್ವನ್**' ಎಂಬ ಭಗವದ್ಗೀತೆಯ ಮಾತು ಇಲ್ಲಿ ಗಮನಾರ್ಹ.

---

೧. ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್ನಶ್ನನ್ ಗಚ್ಛನ್ ಸ್ವಪನ್ ಶ್ವಸನ್ ॥
ಪ್ರಲಪನ್ ವಿಸೃಜನ್ ಗೃಹ್ಣನ್ನುನ್ಮಿಷನ್ನಿಮಿಷನ್ನಪಿ। – ಗೀತಾ (೫/೮,೯)

**ಸರ್ವಪಾಪಾನಿ ಯತ್ಸಂಸ್ಮೃತೇಃ ಸಂಕ್ಷಯಂ**
**ಸರ್ವದಾ ಯಾಂತಿ ಭಕ್ತ್ಯಾ ವಿಶುದ್ಧಾತ್ಮನಾಮ್ ।**
**ಶರ್ವಗುರ್ವಾದಿಗೀರ್ವಾಣಸಂಸ್ಥಾನದಃ**
**ಕುರ್ವತೇ ಕರ್ಮ ಯತ್ಪ್ರೀತಯೇ ಸಜ್ಜನಾಃ ॥**
**ಪ್ರೀಣಯಾಮೋ ವಾಸುದೇವಂ**
**ದೇವತಾಮಂಡಲಾಖಂಡಮಂಡನಮ್** ॥ ೧೦ ॥

**ಪ :** ಸರ್ವಪಾಪಾನಿ, ಯತ್ಸಂಸ್ಮೃತೇಃ, ಸಂಕ್ಷಯಮ್, ಸರ್ವದಾ, ಯಾಂತಿ, ಭಕ್ತ್ಯಾ ವಿಶುದ್ಧಾತ್ಮನಾಮ್, ಶರ್ವಗುರ್ವಾದಿಗೀರ್ವಾಣಸಂಸ್ಥಾನದಃ, ಕುರ್ವತೇ, ಕರ್ಮ, ಯತ್ಪ್ರೀತಯೇ, ಸಜ್ಜನಾಃ, ಪ್ರೀಣಯಾಮಃ, ವಾಸುದೇವಮ್, ದೇವತಾಮಂಡಲಾ-ಖಂಡಮಂಡನಮ್ ।

**ಅ :** ಭಕ್ತ್ಯಾ ಯತ್ಸಂಸ್ಮೃತೇಃ, ವಿಶುದ್ಧಾತ್ಮನಾಮ್, ಸರ್ವಪಾಪಾನಿ, ಸರ್ವದಾ, ಸಂಕ್ಷಯಮ್, ಯಾಂತಿ, ಯತ್ಪ್ರೀತಯೇ, ಸಜ್ಜನಾಃ, ಕರ್ಮ, ಕುರ್ವತೇ, ಶರ್ವಗುರ್ವಾದಿಗೀರ್ವಾಣಸಂಸ್ಥಾನದಃ, ದೇವತಾಮಂಡಲಾಖಂಡಮಂಡನಮ್, ವಾಸುದೇವಮ್, ಪ್ರೀಣಯಾಮಃ।

**ಪ್ರ.ಪ. : ಭಕ್ತ್ಯಾ** – ಭಕ್ತಿಪೂರ್ವಕವಾದ; **ಯತ್ಸಂಸ್ಮೃತೇಃ** – ಸಂಸ್ಮರಣೆಯಿಂದ; **ವಿಶುದ್ಧಾತ್ಮನಾಮ್** – ಶುದ್ಧಸ್ವರೂಪರಾದವರ; **ಸರ್ವಪಾಪಾನಿ** – ಸಕಲಪಾಪಗಳು; **ಸರ್ವದಾ** – ಸದಾ; **ಸಂಕ್ಷಯಮ್** – ಸಂಪೂರ್ಣ ವಿನಾಶವನ್ನು; **ಯಾಂತಿ** – ಹೊಂದುವವೋ; **ಯತ್ಪ್ರೀತಯೇ** – ಯಾರ ಅನುಗ್ರಹಕ್ಕೋಸ್ಕರ; **ಸಜ್ಜನಾಃ** – ಸಜ್ಜನರು; **ಕರ್ಮ** – ಸಕಲ ಕಾರ್ಯಗಳನ್ನು; **ಕುರ್ವತೇ** – ಮಾಡುವರೋ ಅಂತಹ; **ಶರ್ವಗುರ್ವಾದಿಗೀರ್ವಾಣಸಂಸ್ಥಾನದಃ** – ಬ್ರಹ್ಮ, ರುದ್ರ ಮೊದಲಾದವರಿಗೆ ನೆಲೆಯನ್ನು ಕಲ್ಪಿಸಿದ; **ದೇವತಾಮಂಡಲಾಖಂಡಮಂಡನಮ್** – ದೇವತಾವೃಂದಕ್ಕೆ ಪರಿಪೂರ್ಣ ಅಲಂಕಾರನಾದ; **ವಾಸುದೇವಮ್** – ವಾಸುದೇವನನ್ನು; **ಪ್ರೀಣಯಾಮಃ** – ಒಲಿಸೋಣ.

**ಇವನ ದಿವ್ಯಸ್ಮರಣೆಯಿಂದ ಪಾಪಸಂಕ್ಷಯ**
**ಭಕ್ತಿಯಿಂದ ಭಜಿಪ ಜನಕೆ ಇದುವೆ ನಿಶ್ಚಯ ।**
**ಬ್ರಹ್ಮಮುಖ್ಯದೇವಪದಕು ಇವನೆ ಸಂಶ್ರಯ**
**ಇವನ ಒಲುಮೆಗೆಂದೆ ಬುಧರ ಕರ್ಮಸಂಚಯ** ॥ ೧೦ ॥

**ಅನು :** ಭಕ್ತಿಪೂರ್ವಕವಾದ ಯಾರ ಸಂಸ್ಮರಣೆಯಿಂದ ಶುದ್ಧಸ್ವರೂಪರಾದವರ ಸಕಲಪಾಪಗಳು ಸದಾ ಸಂಪೂರ್ಣ ವಿನಾಶವನ್ನು ಹೊಂದುವವೋ, ಯಾರ

**ಅನುಗ್ರಹಕ್ಕೋಸ್ಕರ ಸಜ್ಜನರು ಸಕಲ ಕಾರ್ಯಗಳನ್ನು ಮಾಡುವರೋ, ಅಂತಹ ಬ್ರಹ್ಮ, ರುದ್ರ ಮೊದಲಾದವರಿಗೆ ನೆಲೆಯನ್ನು ಕಲ್ಪಿಸಿದ ದೇವತಾವೃಂದಕ್ಕೆ ಪರಿಪೂರ್ಣ ಅಲಂಕಾರನಾದ ವಾಸುದೇವನನ್ನು ಒಲಿಸೋಣ.**

ವಿ : ೧. ಸ್ಮರಣೆ ಮಾತ್ರದಿಂದಲೇ ಸಕಲ ಪಾಪಗಳು ಪರಿಹಾರ; ಇಲ್ಲಿ ಸಂಸ್ಮರಣೆ ಎಂದರೆ ಭಕ್ತಿಜ್ಞಾನಪೂರ್ವಕವಾದ ಪರಿಪೂರ್ಣವಾದ ಸ್ಮರಣೆ ಎಂದರ್ಥ; ಇಂತಹ ಸ್ಮರಣೆ ಸಾಧ್ಯವಾಗುವುದು ಅಪರೋಕ್ಷಜ್ಞಾನಿಗಳಿಗೆ ಮಾತ್ರ ಎಂಬುದು ವಿಶೇಷ:

**ಸ್ಮರಣಾದೇವ ಕೃಷ್ಣಸ್ಯ ಪಾಪಸಂಘಾತಪಂಜರಃ ।**
**ಶತಧಾ ಭೇದಮಾಯಾತಿ ಗಿರಿರ್ವಜ್ರಹತೋ ಯಥಾ ॥**
**(ಕೃಷ್ಣಾಮೃತಮಹಾರ್ಣವ)**

– ಅಜಾಮಿಳ ಮೊದಲಾದವರ ಪ್ರಸಂಗದಲ್ಲಿ ಶ್ರೀಹರಿಯ ಸ್ಮರಣೆಮಾತ್ರದಿಂದಲೇ ಅವರ ಸಕಲಪಾಪಗಳು ಪರಿಹಾರವಾದ ವಿವರ ಸ್ಫುಟವಾಗಿ ನಿರೂಪಿತವಾಗಿದೆ. ಇಲ್ಲಿ ಸಂಸ್ಮೃತಿ ಎಂದರೆ ಹಿಂದೆ ತಿಳಿಸಿದಂತೆ ಭಕ್ತಿಪೂರ್ವಕವಾದ ಸ್ಮರಣೆ ಎಂದರ್ಥ:

**ಕೃತೇ ಪಾಪೇಽನುತಾಪೋ ವೈ ಯಸ್ಯ ಪುಂಸಃ ಪ್ರಜಾಯತೇ ।**
**ಪ್ರಾಯಶ್ಚಿತ್ತಂ ತು ತಸ್ಯೋಕ್ತಂ ಹರಿಸಂಸ್ಮರಣಂ ಪರಮ್॥**
**(ಕೃಷ್ಣಾಮೃತಮಹಾರ್ಣವ)**

೨. ಭಕ್ತಿಯಿಂದ ಮಾಡುವ ಶ್ರೀಹರಿಯ ಸ್ಮರಣೆಯು ದೇಹಶುದ್ಧಿ ಮನಃಶುದ್ಧಿಗಳಿಗೆ ಕಾರಣವಾಗಿ, ಮುಂದೆ ಮುಕ್ತಿಗೆ ಸಾಧನವಾಗುವುದು ಎಂದರ್ಥ. ಭಕ್ತಿಗಿಂತ ಮಿಗಿಲಾದ ಬೇರೊಂದು ಸಾಧನೆ ಮುಕ್ತಿಪ್ರಾಪ್ತಿಗೆ ಇಲ್ಲವೇ ಇಲ್ಲ ಎಂದು ಭಾವ.

೩. **ಶರ್ವಗುರು..** ಎಂದು ಅರ್ಥಮಾಡಿಕೊಂಡರೆ ಬ್ರಹ್ಮ ಎಂದಾಗುವುದು; ಅದರಂತೆ ಶರ್ವ ಎಂದರೆ ಶಿವ, ಗುರು ಎಂದರೆ ಬೃಹಸ್ಪತಿ ಎಂಬ ಅರ್ಥವೂ ಇದಕ್ಕೆ ವಿಹಿತ. ಬ್ರಹ್ಮಾದಿ ಸಕಲರಿಗೂ ಅವರವರ ಪದವಿಯನ್ನು ಅನುಗ್ರಹಿಸುವವನು ಶ್ರೀಹರಿ. ಈ ವಿವರವು '**ಪಾರಮೇಷ್ಠ್ಯಾದಿ ಪದದಾಯಿ**' ಎಂಬುದಾಗಿ ಮೊದಲ ಅಧ್ಯಾಯದಲ್ಲೂ, '**ಶ್ರೀಯರ್ಯತ್ಕಟಾಕ್ಷಬಲವತೀ**' ಎಂಬುದಾಗಿ ಏಳನೆಯ ಅಧ್ಯಾಯದಲ್ಲೂ ಬಂದಿದೆ. ಸಂಸ್ಥಾನ ಎಂಬುದಕ್ಕೆ ಪದವಿಪ್ರದಾನ ಹಾಗೂ ಮುಕ್ತಿಯಲ್ಲೂ ಅದಕ್ಕನುಗುಣವಾದ ಸ್ಥಾನ ಎಂಬ ಎರಡೂ ಅರ್ಥಗಳು ವಿವಕ್ಷಿತ.

೪. ಸಜ್ಜನರು ಸಕಲ ಕಾರ್ಯಗಳನ್ನು ಮಾಡುವುದು ಮುಖ್ಯವಾಗಿ ಅವನ ಪ್ರೀತಿಗೆ. ಸರ್ಕಾರಿ ನೌಕರರು ಮಾಡುವ ಪ್ರತಿಯೊಂದು ಕಾರ್ಯವು ಸಾರ್ವಜನಿಕ ಸೇವೆ ಎನ್ನಿಸುವಂತೆ

ಭಗವದ್ಭಕ್ತರು ತಮ್ಮ ಸರ್ವಕಾರ್ಯಗಳನ್ನೂ ಅವನ ಆದೇಶ ಎಂದು ತಿಳಿದು ಅವನ ಪ್ರೀತಿಯ ಸಂಪಾದನೆಗೋಸ್ಕರವಾಗಿಯೇ ಪೂರ್ಣವಾಗಿ ಆಚರಿಸುವರು ಎಂದರ್ಥ:

**ಮಯಿ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯಾಧ್ಯಾತ್ಮಚೇತಸಾ ।**
**ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ ॥**

-ಗೀತಾ (೩/೩೦)

೫. **ಸಜ್ಜನಾಃ** – ಎಂದರೆ ಸದಿತಿ ಪ್ರಾಣಃ ಮುಖ್ಯಪ್ರಾಣನಿಗೆ ಸೇರಿದ ಸಾತ್ವಿಕ ಜನತೆ ಎಂದರ್ಥ.

**ಅಕ್ಷಯಂ ಕರ್ಮ ಯಸ್ಮಿನ್ ಪರೇ ಸ್ವರ್ಪಿತಂ**
**ಪ್ರಕ್ಷಯಂ ಯಾಂತಿ ದುಃಖಾನಿ ಯನ್ನಾಮತಃ ।**
**ಅಕ್ಷರೋ ಯೋಽಜರಃ ಸರ್ವದೈವಾಮೃತಃ**
**ಕುಕ್ಷಿಗಂ ಯಸ್ಯ ವಿಶ್ವಂ ಸದಾಽಜಾದಿಕಮ್ ॥**
**ಪ್ರೀಣಯಾಮೋ ವಾಸುದೇವಂ**
**ದೇವತಾಮಂಡಲಾಖಂಡಮಂಡನಮ್** ॥ ೧೧ ॥

**ಪ** : ಅಕ್ಷಯಮ್, ಕರ್ಮ, ಯಸ್ಮಿನ್, ಪರೇ, ಸ್ವರ್ಪಿತಮ್, ಪ್ರಕ್ಷಯಮ್, ಯಾಂತಿ, ದುಃಖಾನಿ, ಯನ್ನಾಮತಃ, ಅಕ್ಷರಃ, ಯಃ, ಅಜರಃ, ಸರ್ವದಾ, ಏವ, ಅಮೃತಃ, ಕುಕ್ಷಿಗಮ್, ಯಸ್ಯ, ವಿಶ್ವಮ್, ಸದಾ, ಅಜಾದಿಕಮ್, ಪ್ರೀಣಯಾಮಃ, ವಾಸುದೇವಮ್, ದೇವತಾಮಂಡಲಾ- ಖಂಡಮಂಡನಮ್ ।

**ಅ** : ಪರೇ, ಯಸ್ಮಿನ್, ಸ್ವರ್ಪಿತಮ್, ಕರ್ಮ, ಅಕ್ಷಯಮ್, ಯನ್ನಾಮತಃ, ದುಃಖಾನಿ, ಪ್ರಕ್ಷಯಮ್, ಯಾಂತಿ, ಯಃ, ಅಕ್ಷರಃ, ಅಜರಃ, ಸರ್ವದಾ, ಏವ, ಅಮೃತಃ, ಅಜಾದಿಕಮ್, ವಿಶ್ವಮ್, ಯಸ್ಯ, ಸದಾ, ಕುಕ್ಷಿಗಮ್, ದೇವತಾಮಂಡಲಾಖಂಡಮಂಡನಮ್, ವಾಸುದೇವಮ್, ಪ್ರೀಣಯಾಮಃ ।

**ಪ್ರ.ಪ.** : **ಪರೇ** – ಸರ್ವೋತ್ತಮನಾದ; **ಯಸ್ಮಿನ್** – ಯಾರಲ್ಲಿ; **ಸ್ವರ್ಪಿತಮ್** – ಚೆನ್ನಾಗಿ ಅರ್ಪಿತವಾಗುವ; **ಕರ್ಮ** – ಕರ್ಮವು; **ಅಕ್ಷಯಮ್** – ಅಕ್ಷಯವಾಗುವುದೋ; **ಯನ್ನಾಮತಃ** – ಯಾರ ನಾಮೋಚ್ಚಾರಣೆಯಿಂದ; **ದುಃಖಾನಿ** – ದುಃಖಗಳು; **ಪ್ರಕ್ಷಯಮ್** – ಸಂಪೂರ್ಣ ವಿನಾಶವನ್ನು; **ಯಾಂತಿ** – ಹೊಂದುವವೋ; **ಯಃ** – ಯಾವನು; **ಅಕ್ಷರಃ** – ನಾಶರಹಿತನೋ; **ಅಜರಃ** – ಮುಪ್ಪಿಲ್ಲದವನೋ; **ಸರ್ವದಾ ಏವ** – ಸದಾ ಕಾಲವೂ; **ಅಮೃತಃ** – ಅಮೃತಸ್ವರೂಪನೋ; **ಸದಾ** – ಯಾವಾಗಲೂ

**ಅಜಾದಿಕಮ್** - ಬ್ರಹ್ಮ ಮೊದಲಾದವರನ್ನೊಳಗೊಂಡ; **ವಿಶ್ವಮ್** - ವಿಶ್ವವು; **ಯಸ್ಯ** - ಯಾರ; **ಸದಾ** - ಸದಾ; **ಕುಕ್ಷಿಗಮ್** - ಉದರದಲ್ಲಿ ನೆಲೆಸಿದೆಯೋ ಅಂತಹ; **ದೇವತಾಮಂಡಲಾಖಂಡಮಂಡನಮ್** - ದೇವತಾವೃಂದಕ್ಕೆ ಪರಿಪೂರ್ಣ ಅಲಂಕಾರನಾದ; **ವಾಸುದೇವಮ್** - ವಾಸುದೇವನನ್ನು; **ಪ್ರೀಣಯಾಮಃ** - ಒಲಿಸೋಣ.

**ಇವನಿಗೆನ್ನೆ ವಿಹಿತಕರ್ಮಫಲವು ಅಕ್ಷಯ**
**ಇವನ ನಾಮಮಾತ್ರದಿಂದೆ ದುಃಖಸಂಕ್ಷಯ ।**
**ಜರೆಯು ಮೃತಿಯು ಇರದ ದೇವ ನಿತ್ಯಚಿನ್ಮಯ**
**ಇವನ ಒಡಲೆ ಅಜಭವಾದಿಲೋಕಕಾಶ್ರಯ ॥ ೧೧ ॥**

**ಅನು : ಸರ್ವೋತ್ತಮನಾದ ಯಾರಲ್ಲಿ ಭಕ್ತಿಪೂರ್ವಕವಾಗಿ ಅರ್ಪಿತವಾಗುವ ಕರ್ಮವು ಅಕ್ಷಯವಾಗುವುದೋ, ಯಾರ ನಾಮೋಚ್ಚಾರಣೆಯಿಂದ ದುಃಖಗಳು ಸಂಪೂರ್ಣ ವಿನಾಶವನ್ನು ಹೊಂದುವವೋ, ಯಾವನು ನಾಶರಹಿತನೋ, ಮುಪ್ಪಿಲ್ಲದವನೋ, ಸದಾ ಕಾಲವೂ ಅಮೃತಸ್ವರೂಪನೋ, ಬ್ರಹ್ಮ ಮೊದಲಾದ-ವರನ್ನೊಳಗೊಂಡ ವಿಶ್ವವು ಸದಾ ಯಾರ ಉದರದಲ್ಲಿ ನೆಲೆಸಿದೆಯೋ ಅಂತಹ ದೇವತಾವೃಂದಕ್ಕೆ ಪರಿಪೂರ್ಣ ಅಲಂಕಾರನಾದ ವಾಸುದೇವನನ್ನು ಒಲಿಸೋಣ.**

ವಿ : ೧. ಶ್ರೀಹರಿಗೆ ಸಮರ್ಪಿಸುವ ಕರ್ಮ ಅನಂತವಾಗುವುದು; ಎಂದರೆ ಅನಂತ ಪಟ್ಟು ಫಲಪ್ರದವಾಗುವುದು ಎಂದರ್ಥ; ಬೇರಾವ ದೇವತೆಗಳಿಗೂ ಇಂತಹ ಹಿರಿಮೆ ಇಲ್ಲ; ಬ್ರಹ್ಮದೇವರನ್ನು ಕುರಿತು ಹಿರಣ್ಯಕಶಿಪು ಮಾಡಿದ ತಪಸ್ಸು ಮೂವತ್ತಾರು ಸಾವಿರ ವರ್ಷಗಳಷ್ಟು ಸುದೀರ್ಘವಾದದ್ದು; ಆದರೆ ಅದು ಅವನಿಗೆ ಶಾಶ್ವತವೆನ್ನಿಸದೆ ಕೇವಲ ಐದು ವರ್ಷಗಳಷ್ಟು ಕಡಿಮೆ ಅವಧಿಯಲ್ಲೇ ನಾಶವಾಯಿತು. ಪ್ರಹ್ಲಾದ ವಿಷ್ಣುವನ್ನು ಕುರಿತು ಮಾಡಿದ ಆರಾಧನೆಯ ಫಲವಾಗಿ ಅವನು ಇಂದಿಗೂ ಹರಿವರ್ಷಖಂಡದಲ್ಲಿ ಅದರ ಅಧಿಪತಿಯಾಗಿ ರಾಜ್ಯವಾಳುತ್ತಿರುವನು. ಧ್ರುವ ವಿಷ್ಣುವನ್ನು ಕುರಿತು ಮಾಡಿದ ತಪಸ್ಸು ಕೇವಲ ಆರು ತಿಂಗಳು ಮಾತ್ರ; ಆದರೆ ಅವನು ಇಂದು ಧ್ರುವನಕ್ಷತ್ರಾಧಿಪತಿಯಾಗಿ ಗಗನದಲ್ಲಿ ಕಂಗೊಳಿಸುತ್ತಿರುವನು; ಅದರಂತೆ ಶಿವನಿಂದ ವರ ಪಡೆದ ಭಸ್ಮಾಸುರ ಬದುಕಿದ್ದುದು ಕೇವಲ ಕೆಲವೇ ಗಂಟೆಗಳು ಮಾತ್ರ; ಇಂತಹ ನಿದರ್ಶನಗಳು ಸಹ ಅನಂತವೇ ಆಗಿವೆ; 'ಪರೇ' ಎಂಬ ಪದದಿಂದ ಶ್ರೀಹರಿಯು ಪೂರ್ಣನಾದ್ದರಿಂದ, ಅವನು ನೀಡುವ ಫಲವೂ ಸಹ ಪೂರ್ಣ ಎಂಬ ವಿಶೇಷಾಂಶ ಸೂಚಿತ. ಅದರಂತೆ ಇತರ ದೇವತೆಗಳಿಂದ ಲಭಿಸುವ ಫಲ ಸದಾ ಅಲ್ಪಫಲವೇ ಹೊರತು, ಮಹತ್ಫಲವೆನ್ನಿಸದು ಎಂದೂ ಸಹ. ಅಕ್ಷಯಂ ಎಂಬುದಕ್ಕೆ ನಿತ್ಯಂ ಎಂದೂ ಅರ್ಥ. ಎಂದರೆ, ನಿತ್ಯಸುಖವಾದ ಮೋಕ್ಷಕ್ಕೆ ಸಾಧನವಾಗುವುದು, ಅಕ್ಷಯಫಲಕ ಎಂದರ್ಥ: **'ನ ಚ ಪುನರಾವರ್ತತೇ ನ ಚ ಪುನರಾವರ್ತತೇ'** (ಛಾಂದೋಗ್ಯೋಪನಿಷತ್)

೨. ಇಲ್ಲಿ ಸ್ವರ್ಪಿತಮ್ ಎನ್ನುವ ಪದ ಅತ್ಯಂತ ಗಮನಾರ್ಹವಾದುದು. ಇದನ್ನು **'ಅಸು ಅರ್ಪಿತವಮ್ ಅಸ್ವರ್ಪಿತವಮ್'** ಎಂಬುದಾಗಿ ಭಾಗ ಮಾಡಬಹುದು; **'ಅಸು'** ಎಂದರೆ ಮುಖ್ಯಪ್ರಾಣ; ಅವನ ಮೂಲಕ ಶ್ರೀಹರಿಗೆ ಅರ್ಪಿತವಾಗುವ ಕರ್ಮ ಅನಂತವಾಗುವುದು ಎಂದರ್ಥ; ಈ ಮಾತು ಶ್ರೀಮದ್ಭಾಗವತ ಹಾಗೂ ಉಪನಿಷತ್ತುಗಳಲ್ಲಿಯೂ ಬಂದಿದೆ; **'ವಾಯೌ ಮುಖ್ಯಧಿಯಾ'** (ಭಾಗವತ). ಆದರಿಂದಾಗಿಯೇ ಭಾರತೀರಮಣಮುಖ್ಯಪ್ರಾಣರ್ಗತ ಕೃಷ್ಣಾರ್ಪಣಮಸ್ತು ಎಂಬ ಪದ್ಧತಿ ವೈಷ್ಣವರಲ್ಲಿದೆ. ಅದಕ್ಕೆ ಕಾರಣವನ್ನು ಛಾಂದೋಗ್ಯೋಪನಿಷತ್ತು ತಿಳಿಸಿದೆ; ಅದರಂತೆ ಈಶಾವಾಸ್ಯವೂ ಸಹ: **ತಸ್ಮಿನ್ನಪೋ ಮಾತರಿಶ್ವಾ ದಧಾತಿ.**

೩ **'ಸ್ವರ್ಪಿತಮ್'** ಎಂದಷ್ಟೇ ಓದಿಕೊಂಡಾಗ ಅದಕ್ಕೆ **'ಸುಅರ್ಪಿತಮ್'** ಎಂದು ಅರ್ಥವಾಗುವುದು. ಎಂದರೆ ಸರಿಯಾದ ರೀತಿಯಲ್ಲಿ ಅರ್ಪಿತವಾಗುವುದು ಎಂದರ್ಥ. ಹಾಗೆ ಸರಿಯಾಗಿ ಅರ್ಪಿತವಾಗುವುದೆಂದರೆ ಭಗವದ್ಗೀತೆ ತಿಳಿಸಿರುವಂತೆ **'ಮಾ ಫಲೇಷು ಕದಾಚನ'** – ಫಲಾಪೇಕ್ಷೆಯಿಲ್ಲದೆ ಕೇವಲ ಹರಿಪ್ರೀತಿಗಾಗಿ ಜ್ಞಾನ, ಭಕ್ತಿ ಹಾಗೂ ವೈರಾಗ್ಯಗಳನ್ನಷ್ಟೇ ಬಯಸಿ ಅರ್ಪಿಸುವುದು ಎಂದರ್ಥ: **'ಯದೇವ ವಿದ್ಯಯಾ ಕರೋತಿ ಶ್ರದ್ಧಯಾ ಉಪನಿಷದಾ ತದೇವ ವೀರ್ಯವತ್ತರಂ ಭವತಿ'** (ಛಾಂದೋಗ್ಯೋಪನಿಷತ್). ಕರ್ಮನಿರ್ಣಯ ಗ್ರಂಥದಲ್ಲಿ ಬಂದಿರುವ ವಿವರಗಳು ಸಹ ಇದರಂತೆಯೇ ಇದೆ: **'ಭಗವ 'ದ್ಭಕ್ತಿಜ್ಞಾನವೈರಾಗ್ಯಪೂರ್ವಕಂ ಚ ಕರ್ಮ ಕರ್ತವ್ಯಮ್'.**

೪. ಶ್ರೀಹರಿಯು ಅಕ್ಷಯ ಹಾಗೂ ಅಚ್ಯುತ; ಆದ್ದರಿಂದಾಗಿ ಅವನಿಗೆ ಅರ್ಪಿತವಾದದ್ದು ಸಹ ಅಕ್ಷಯವೂ, ಅಚ್ಯುತವೂ ಆಗುವುದು ಎಂದರ್ಥ; ಅಕ್ಷಯವಾಗುವುದು ಎಂದರೆ ಶಾಶ್ವತವಾದ ವೈಕುಂಠಲೋಕದ ಪ್ರಾಪ್ತಿಗೆ ಸಾಧನವಾಗುವುದು ಎಂದರ್ಥ; ಬ್ರಹ್ಮಸೂತ್ರದಲ್ಲಿ ತಿಳಿಸಿರುವಂತೆ **ಅನಾವೃತ್ತಿಃ ಶಬ್ದಾದನಾವೃತ್ತಿಃ ಶಬ್ದಾತ್** (ಬ್ರ.ಸೂ.ಭಾ. ೪/೪/೧೧).

೫. ಅವನ ನಾಮೋಚ್ಚಾರಣೆಯ ಫಲವು ಸಹ ಹಾಗೆಯೇ. ಅವನ ನಾಮೋ-ಚ್ಚಾರಣೆಯಿಂದಾಗಿ ಸಕಲ ದುಃಖಗಳು ಸಂಪೂರ್ಣವಾಗಿ ನಾಶಹೊಂದುವವು; ಕೃಷ್ಣಾಮೃತಮಹಾರ್ಣವದ ಅನೇಕ ಶ್ಲೋಕಗಳಲ್ಲಿ ಈ ವಿಷಯ ಬಂದಿದೆ. ಹಾಗೆ ಸರ್ವಪಾಪಗಳು ಪರಿಹಾರವಾಗುವುದೆಂದರೆ ಬ್ರಹ್ಮಸಾಕ್ಷಾತ್ಕಾರವಾಗುವುದು ಎಂದರ್ಥ.

೬. ಪುಣ್ಯಗಳು ಅಕ್ಷಯವಾಗುವುದಾದರೆ, ಪಾಪಗಳು ಪ್ರಕ್ಷಯವಾಗುವುದು ಎಂಬುದು ವಿಶೇಷ. ಪುಣ್ಯಗಳು ಅಕ್ಷಯವಾಗುವುದು ಅನಂತ ಎಂಬ ಅರ್ಥದಲ್ಲಿ; ಪಾಪಗಳು ಪ್ರಕ್ಷಯವಾಗುವುದು ಎಂದರೆ ಸಂಪೂರ್ಣವಾಗಿ ನಾಶಹೊಂದುವುದು ಎಂಬುದು ವಿಶೇಷ

೭. ಶ್ರೀಹರಿಯು **ಅಕ್ಷರ; ಕ್ಷರ** ಎಂದರೆ ನಾಶ; **ಅಕ್ಷರ** ಎಂದರೆ ನಾಶರಹಿತನಾದವನು ಎಂದರ್ಥ. ಅಜರ ಎಂದರೆ ಮುಪ್ಪಿಲ್ಲದವನು ಎಂದರ್ಥ. ಜಾಂಬವಂತ ಚಿರಂಜೀವಿಯಾಗಿ

ಬದುಕಿದ್ದರೂ ವೃದ್ಧಾಪ್ಯಕ್ಕೆ ಒಳಗಾಗಿ ಕ್ಲೇಶ ಹೊಂದಿದ್ದ; ಆದರೆ ಕೃಷ್ಣಾನುಗ್ರಹದಿಂದ ಅಲ್ಲಿಂದ ಬಿಡುಗಡೆ ಹೊಂದಿ ಉದ್ಧಾರವಾದ; ಶ್ರೀಹರಿಯು ಅಮೃತ ಎಂದರೆ ಸಾವಿಲ್ಲದವನು ಎಂದರ್ಥ; ಇಲ್ಲಿ **ಸರ್ವದೈವ** ಎಂಬುದನ್ನು ಅಕ್ಷರ, ಅಜರ ಹಾಗೂ ಅಮೃತ ಎಂಬ ಮೂರರೊಂದಿಗೂ ಅನ್ವಯಿಸಿಕೊಳ್ಳಬೇಕು. ಅದ್ದರಿಂದ ಶ್ರೀಹರಿಯು ಸದಾ ಅಕ್ಷರನೂ, ಅಜರನೂ ಅಮೃತನೂ ಆಗಿರುವನು ಎಂಬ ವಿಶೇಷಾರ್ಥ ತಿಳಿಯುವುದು. ಅಮೃತ ಎಂಬುದು ವಿಷ್ಣುಸಹಸ್ರನಾಮದ ಪ : '**ಅಮೃತಃ ಶಾಶ್ವತಃ ಸ್ಥಾಣುರ್ವರಾರೋಹೋ ಮಹಾತಪಾಃ**'.

೮. ಇಲ್ಲಿಯು ಸರ್ವದಾ ಎಂಬ ಪದವನ್ನು ಪ್ರತಿಪಾದದೊಂದಿಗೆ ಅನ್ವಯಮಾಡಿಕೊಳ್ಳಬೇಕು. ಅದರಿಂದ ಅವನಿಗೆ ಅರ್ಪಿತವಾದ ಕರ್ಮ ಸದಾ ಅಕ್ಷಯ, ಅವನ ನಾಮದಿಂದ ದುಃಖಗಳು ಸದಾ ಸಂಕ್ಷಯ, ಅವನು ಸದಾ ಅಜರ ಹಾಗೂ ಅಮೃತ, ಅವನ ಕುಕ್ಷಿಯಲ್ಲೇ ಸದಾ ಬ್ರಹ್ಮಾಂಡ ಅಡಗಿದೆ ಎಂಬ ಅರ್ಥವಿಶೇಷ ಲಭಿಸುವುದು.

೯. ಶ್ರೀಹರಿಯ ಉದರದಲ್ಲಿ ಇಡಿ ಬ್ರಹ್ಮಾಂಡವೇ ಅಡಗಿದೆ; ಬ್ರಹ್ಮಾದಿ ಸಮಸ್ತ ದೇವತೆಗಳು ಅಲ್ಲಿಯೇ ನೆಲೆಸಿರುವರು ಎಂದರ್ಥ; ಇದರಿಂದ ಬ್ರಹ್ಮಾದಿ ದೇವತೆಗಳೆಲ್ಲಾ ಅವನ ಉದರದಲ್ಲಿ ಆಶ್ರಯ ಪಡೆದಿರುವರು ಎಂದಾಗುವುದು. ಯಶೋದೆಯು ಶ್ರೀಕೃಷ್ಣನ ಬಾಯಲ್ಲಿ ಸಮಗ್ರ ಬ್ರಹ್ಮಾಂಡವನ್ನೇ ದರ್ಶನ ಮಾಡಿದ ವಿವರ ಶ್ರೀಮದ್ಭಾಗವತದಲ್ಲಿ ಬಂದಿದೆ.

೧೦. ಹಾಗೆ ಅವನ ಉದರದಲ್ಲಿರುವ ಕಾರಣದಿಂದಲೂ ವಿಶ್ವವು ಸತ್ಯ ಎಂಬ ಮತ್ತೊಂದು ವಿಶೇಷಾರ್ಥವು ನಿರೂಪಿತವಾಗುವುದು: **ಉದರಂ ಚಿಂತ್ಯಮೀಶಸ್ಯ** ಎಂಬಲ್ಲಿ ಇದರ ವಿವರ ಬಂದಿದೆ.

೧೧. ಅವನು ವಿಶ್ವ ಎಂದಷ್ಟೇ ಅರ್ಥಮಾಡಿಕೊಂಡಾಗ ಅವನು ಪೂರ್ಣ ಎಂದೂ '**ವಿಶ್ವಂ ವಿಷ್ಣುಃ**' ಎಂಬ ವಿಷ್ಣುಸಹಸ್ರನಾಮದಿಂದ ವಾಚ್ಯನಾದವನು ಎಂದೂ ಅರ್ಥವಾಗುವುದು.

೧೨. ಸದಾ ಎಂಬ ಮಾತಿನಲ್ಲಿ ಅನಾದ್ಯನಂತ ಕಾಲದಲ್ಲೂ ಸಹ ವಿಶ್ವವು ಅವನನ್ನು ಸದಾ ಆಶ್ರಯಿಸಿ ಬದುಕಿದೆ ಎಂಬ ತತ್ವವು ತಿಳಿಯುವುದು:

> **'ಅನಾದ್ಯನಂತಕಾಲೇಽಪಿ ವಿಷ್ಣುಮೇವಾಶ್ರಿತಾ ರಮಾ ।**
> **ಅನ್ಯೇಷಾಂ ಜ್ಞಾಪನಾರ್ಥಾಯ ದೋಷಾನುಕ್ತ್ವೇತರಾನ್ ಜಹೌ' ಇತಿ ಚ ॥**
> 
> \- ಭಾಗ.ತಾ.ನಿ. (೮/೮/೨೩)

**ನಂದಿತೀರ್ಥೋರುಸನ್ನಾಮಿನೋ ನಂದಿನಃ**
**ಸಂದಧಾನಾಃ ಸದಾನಂದದೇವೇ ಮತಿಮ್ ।**

**ಮಂದಹಾಸಾರುಣಾಪಾಂಗದತ್ತೋನ್ನತಿಂ**
**ನಂದಿತಾಶೇಷದೇವಾದಿವೃಂದಂ ಸದಾ ॥**
**ಪ್ರೀಣಯಾಮೋ ವಾಸುದೇವಂ**
**ದೇವತಾಮಂಡಲಾಖಂಡಮಂಡನಮ್ ॥ ೧೨ ॥**

**॥ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ದ್ವಾದಶಸ್ತೋತ್ರೇ ಅಷ್ಟಮೋಽಧ್ಯಾಯಃ॥**

**ಪ :** ನಂದಿತೀರ್ಥೋರುಸನ್ನಾಮಿನಃ, ನಂದಿನಃ, ಸಂದಧಾನಾಃ, ಸದಾನಂದ-ದೇವೇ, ಮತಿಮ್, ಮಂದಹಾಸಾರುಣಾಪಾಂಗದತ್ತೋನ್ನತಿಮ್, ನಂದಿತಾಶೇಷ-ದೇವಾದಿವೃಂದಮ್, ಸದಾ, ಪ್ರೀಣಯಾಮಃ, ವಾಸುದೇವಮ್, ದೇವತಾಮಂಡಲಾ-ಖಂಡಮಂಡನಮ್ ।

**ಅ :** ಸದಾನಂದದೇವೇ, ಮತಿಮ್, ಸಂದಧಾನಾಃ, ನಂದಿನಃ, ನಂದಿತೀರ್ಥೋರು-ಸನ್ನಾಮಿನಃ, ಸದಾ, ಮಂದಹಾಸಾರುಣಾಪಾಂಗದತ್ತೋನ್ನತಿಮ್, ನಂದಿತಾಶೇಷ-ದೇವಾದಿವೃಂದಮ್, ದೇವತಾಮಂಡಲಾಖಂಡಮಂಡನಮ್, ವಾಸುದೇವಮ್, ಪ್ರೀಣಯಾಮಃ ।

**ಪ್ರ.ಪ. : ಸದಾ** – ಸದಾ; **ಆನಂದದೇವೇ** – ಆನಂದದೇವನಾದ ಶ್ರೀಹರಿಯಲ್ಲಿ; **ಮತಿಮ್** – ಮನಸ್ಸನ್ನು **ಸಂದಧಾನಾಃ** – ಇರಿಸಿರುವ; **ನಂದಿನಃ** – ಆನಂದದಿಂದ ಕೂಡಿರುವ; **ನಂದಿತೀರ್ಥೋರುಸನ್ನಾಮಿನಃ** – ಆನಂದತೀರ್ಥ ಎಂಬ ಶ್ರೇಷ್ಠವಾದ ಉತ್ತಮ ನಾಮವುಳ್ಳ; **ಸದಾ** – ಸದಾ; **ಮಂದಹಾಸಾರುಣಾಪಾಂಗದತ್ತೋನ್ನತಿಮ್** – ಕಿರುನಗೆಯಿಂದ ಕೂಡಿದ ಕುಡಿನೋಟದಿಂದ ಕೂಡಿದ; **ನಂದಿತಾಶೇಷದೇವಾದಿವೃಂದವಮ್** – ಸಕಲದೇವತಾವೃಂದಕ್ಕೂ ಆನಂದ ನೀಡುವ; **ದೇವತಾಮಂಡಲಾಖಂಡಮಂಡನಮ್** – ದೇವತಾವೃಂದಕ್ಕೆ ಪರಿಪೂರ್ಣ ಅಲಂಕಾರನಾದ; **ವಾಸುದೇವಮ್** – ವಾಸುದೇವನನ್ನು; **ಪ್ರೀಣಯಾಮಃ** – ಒಲಿಸೋಣ.

**ಮಧ್ವಮುನಿಗಳೆಂಬ ನಾವು ಮುದದಿ ಸಂತತ**
**ಮೋದರೂಪಿ ದೇವನನ್ನು ನಿರುತ ಸ್ಮರಿಸುತ ।**
**ಮಂದಹಾಸದಿಂದೆ ಸಕಲ ಭಾಗ್ಯ ನೀಡುವ**
**ಸುಧೆಯ ಕುಡಿದ ಸುರರಿಗೆಲ್ಲ ಮೋದ ನೀಡುವ ॥ ೧೨ ॥**

**॥ ದ್ವಾದಶಸ್ತೋತ್ರದ ಕನ್ನಡಪದ್ಯಾನುವಾದದಲ್ಲಿ ಎಂಟನೆಯ ಅಧ್ಯಾಯ ಮುಕ್ತಾಯವಾಯಿತು ॥**

**ಅನು :** ಸದಾ ಆನಂದದೇವನಾದ ಶ್ರೀಹರಿಯಲ್ಲಿ ಮನಸ್ಸನ್ನು ಇರಿಸಿರುವ, ಆನಂದದಿಂದ ಕೂಡಿರುವ, ಆನಂದತೀರ್ಥ ಎಂಬ ಶ್ರೇಷ್ಠವಾದ ಉತ್ತಮ-

**ನಾಮವುಳ್ಳ ನಾವು, ಸದಾ ಕಿರುನಗೆಯಿಂದ ಕೂಡಿದ ಕುಡಿನೋಟದಿಂದ ಸಕಲದೇವತಾವೃಂದಕ್ಕೂ ಉನ್ನತಿ ನೀಡುವ, ದೇವತಾವೃಂದಕ್ಕೆ ಪರಿಪೂರ್ಣ ಅಲಂಕಾರನಾದ ವಾಸುದೇವನನ್ನು ಒಲಿಸೋಣ.**

ವಿ: ೧. ಈ ಕೃತಿಯನ್ನು ಬರೆದವರು ಆನಂದತೀರ್ಥರು; ಅವರು ತಮ್ಮ ಹೆಸರಿಗೆ ತಕ್ಕಂತೆ ಸದಾ ಆನಂದದಿಂದ ಕೂಡಿರುವರು; ಹಾಗೂ ಸದಾ ಆನಂದ ನೀಡುವ ದೇವತೆಯಾದ ಶ್ರೀಹರಿಯಲ್ಲೇ ಮನಸ್ಸು ಹಾಕಿರುವವರು; ಶ್ರೀಹರಿಯ ಕುಡಿನೋಟದಿಂದಲೇ ಸಮಸ್ತ ಉನ್ನತಿಯನ್ನು ಕಂಡವರು.

೨. ತಾವು ಈ ಸ್ತೋತ್ರದಲ್ಲಿ ತಿಳಿಸಿರುವಂತೆ ಶ್ರೀಹರಿಯ ಆರಾಧನೆಯಿಂದಲೇ ಸಮಸ್ತ ಹಿರಿಮೆಯನ್ನು ಕಂಡವರು ಎಂಬುದನ್ನು ಅನುಭವಾರೂಢವಾಗಿ ತಿಳಿಸಿರುವರು.

೩. ಶ್ರೀಮದಾಚಾರ್ಯರು ರಚಿಸಿರುವ ಈ ಹಾಡು ಶ್ರೀಹರಿಯ ಮಹಿಮೆಯನ್ನು ಬಗೆಬಗೆಯಾಗಿ ವರ್ಣಿಸುತ್ತಾ ಅವನ ಒಲುಮೆಯ ಅಗತ್ಯದೊಂದಿಗೆ ಅದರ ಸಾಧನೆಯ ಮಾರ್ಗವನ್ನೂ ತಿಳಿಸಿಕೊಡುವ ಅಪೂರ್ವ ಕೃತಿಯಾಗಿದೆ.

೪. ಸಕಲ ಕರ್ಮಗಳೂ ಕೃಷ್ಣಾರ್ಪಣಬುದ್ಧಿಯಿಂದ ಆಚರಿಸಲ್ಪಟ್ಟಾಗ ಮಾತ್ರವೇ ಹರಿಪ್ರಸಾದಕ್ಕೆ ಕಾರಣವಾಗಿ ಮುಕ್ತಿಗೆ ಸಾಧನವೆನ್ನಿಸುವವು ಎಂಬ ವಿಶೇಷಾಂಶವು **'ಪ್ರೀಣಯಾಮೋ ವಾಸುದೇವಂ'** ಎಂಬುದರಿಂದ ತಿಳಿಯುವುದು.

೫. ಶ್ರೀಹರಿಯ ಪರಮಪ್ರಸಾದವೇ ಮುಖ್ಯ; ಕೇವಲ ಜ್ಞಾನಮಾತ್ರವಲ್ಲ ಎಂಬ ವಿಶೇಷಾಂಶವು ಇದರಿಂದ ತಿಳಿಯುವುದು: **'ಜಿಜ್ಞಾಸೋತ್ಥಜ್ಞಾನಜಾತ್ ತತ್ಪ್ರಸಾದಾದೇವ ಮುಚ್ಯತೇ'** (ಅನುವ್ಯಾಖ್ಯಾನ). ಹಿಂದೆ ತಿಳಿಸಿದಂತೆ ಇಲ್ಲಿಯ ವಾಸುದೇವ ಎಂಬುದು ಶ್ರೀಹರಿಯ ಸಕಲರೂಪಗಳಿಗೆ ವಿಶೇಷವಾಗಿ ಬುದ್ಧ ಹಾಗೂ ರಾಮರೂಪಗಳಿಗೆ ಅನ್ವಯ.

★★★★★

## ೯. ನವಮಾಧ್ಯಾಯ (ದಶಾವತಾರಸ್ತವನ)

**ಅತಿಮತ ತಮೋಗಿರಿಸಮಿತಿವಿಭೇದನ**
**ಪಿತಾಮಹಭೂತಿದ ಗುಣಗಣನಿಲಯ ।**
**ಶುಭತಮಕಥಾಶಯ ಪರಮ ಸದೋದಿತ**
**ಜಗದೇಕಕಾರಣ ರಾಮ ರಮಾರಮಣ ॥ ೧ ॥**

**ಪ :** ಅತಿಮತ, ತಮೋಗಿರಿಸಮಿತಿವಿಭೇದನ, ಪಿತಾಮಹಭೂತಿದ, ಗುಣಗಣನಿಲಯ, ಶುಭತಮಕಥಾಶಯ, ಪರಮ, ಸದೋದಿತ, ಜಗದೇಕಕಾರಣ, ರಾಮ, ರಮಾರಮಣ ।

**ಅ :** ಅತಿಮತ, ತಮೋಗಿರಿಸಮಿತಿವಿಭೇದನ, ಪಿತಾಮಹಭೂತಿದ, ಗುಣಗಣನಿಲಯ, ಶುಭತಮಕಥಾಶಯ, ಪರಮ, ಸದೋದಿತ, ಜಗದೇಕಕಾರಣ, ರಾಮ, ರಮಾರಮಣ ।

**ಪ್ರ.ಪ. : ಅತಿಮತ** – ಅಪ್ರಮೇಯನೇ!; **ತಮೋಗಿರಿಸಮಿತಿವಿಭೇದನ** – ಬೆಟ್ಟದ ರಾಶಿಯಂತಹ ಅಜ್ಞಾನವನ್ನು ಪರಿಹರಿಸುವವನೇ!; **ಪಿತಾಮಹಭೂತಿದ** – ಬ್ರಹ್ಮದೇವರಿಗೆ ಮಹದೈಶ್ವರ್ಯ ನೀಡುವವನೇ; **ಗುಣಗಣನಿಲಯ** – ಗುಣಗಳ ರಾಶಿಗೆ ನೆಲೆಯಾದವನೇ!; **ಶುಭತಮಕಥಾಶಯ** – ಅತ್ಯಂತ ಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯವಾಗಿರುವವನೇ!; **ಪರಮ** – ಸರ್ವೋತ್ತಮನೇ!; **ಸದೋದಿತ** – ಸದಾ ಪ್ರಕಾಶಿತನಾದವನೇ!; **ಜಗದೇಕಕಾರಣ** – ಜಗತ್ತಿಗೆ ಮುಖ್ಯಕಾರಣನಾದವನೇ; **ರಾಮ** – ಶ್ರೀರಾಮನೇ!; **ರಮಾರಮಣ** – ಲಕ್ಷ್ಮೀಪತಿಯೇ (ನೀನು ನನಗೆ ಆಸರೆಯಾಗು).

**ಬೆಟ್ಟದಂಥ ತಮವನೆಲ್ಲ ಕಳೆವ ಅಪ್ರಮೇಯನೆ**
**ಅಜಗು ಸರ್ವಸಿರಿಯನಿತ್ತ ಸರ್ವಸುಗುಣನಿಲಯನೆ ।**
**ಮಂಗಳಾತ್ಮ ಶಾಸ್ತ್ರಸಾರ ಪರಮ ನಿತ್ಯವ್ಯಕ್ತನೆ**
**ವಿಶ್ವಕೆಲ್ಲ ಮುಖ್ಯಕರ್ತ ರಾಮ ರಮೆಯ ರಮಣನೆ ॥ ೧ ॥**

**ಅನು : ಅಪ್ರಮೇಯನೇ! ಬೆಟ್ಟದರಾಶಿಯಂತಹ ಅಜ್ಞಾನವನ್ನು ಪರಿಹರಿಸುವವನೇ! ಬ್ರಹ್ಮದೇವರಿಗೆ ಮಹದೈಶ್ವರ್ಯ ನೀಡುವವನೇ! ಗುಣಗಳ ರಾಶಿಗೆ ನೆಲೆಯಾದವನೇ! ಅತ್ಯಂತ ಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯವಾಗಿರುವವನೇ! ಸರ್ವೋತ್ತಮನೇ! ಸದಾ ಪ್ರಕಾಶಿತನಾದವನೇ! ಜಗತ್ತಿಗೆ ಮುಖ್ಯಕಾರಣನಾದವನೇ! ಶ್ರೀರಾಮನೇ! ಲಕ್ಷ್ಮೀಪತಿಯೇ (ನೀನು ನನಗೆ ಆಸರೆಯಾಗು).**

ವಿ : ೧. ಶ್ರೀಹರಿಯ ಬಗೆಬಗೆಯ ಮಾಹಾತ್ಮ್ಯವನ್ನು, ವಿಶೇಷವಾಗಿ ಅವನ ದಶಾವತಾರಗಳ ಹಿರಿಮೆಯನ್ನು ಈ ಸ್ತೋತ್ರವು ತಿಳಿಸಿಕೊಡುವುದು.

೨. ಶ್ರೀಹರಿಯು **ಅತಿಮತ** ಎಂದರೆ ಜ್ಞಾನಿಗಳಿಂದ ವಿಶೇಷವಾಗಿ ತಿಳಿಯಲ್ಪಟ್ಟವನು, ಇತರರಿಂದಲ್ಲ ಎಂದರ್ಥ: **ವಿಮೂಢಾ ನಾನುಪಶ್ಯಂತಿ ಪಶ್ಯಂತಿ ಜ್ಞಾನಚಕ್ಷುಷಃ । (ಗೀತಾ).**

೩. ಶ್ರೀಹರಿಯು ಅಪ್ರಮೇಯನು, ಎಂದರೆ ಸಂಪೂರ್ಣವಾಗಿ ತಿಳಿಯಲು ಸರ್ವಥಾ ಅಸಾಧ್ಯನಾದವನು ಎಂದರ್ಥ; ಗಗನವು ಹೇಗೋ ಹಾಗೆ. ಅವರವರ ಯೋಗ್ಯತೆಗೆ ತಕ್ಕಂತೆ ಅವನನ್ನು ತಿಳಿಯಲು ಅಸಾಧ್ಯವೇ ಹೊರತು ಸಂಪೂರ್ಣವಾಗಿ ಅಲ್ಲ: **'ನಭಃ ಪತಂತ್ಯಾತ್ಮಸಮಂ ಪತತ್ರಿಣಃ'** (ಭಾಗವತ ೧/೧೮/೨೩).

೪. ಅಂತಹ ಸರ್ವತ್ರವ್ಯಾಪ್ತನಾದ ಶ್ರೀಹರಿಯನ್ನು ನಾವು ಕಾಣದಂತೆ ತಡೆಯಾಗಿರುವುದು ಅಜ್ಞಾನ; ಅದು ಬೆಟ್ಟದಷ್ಟು ದೊಡ್ಡದು; ಆದರೆ ಶ್ರೀಹರಿಯು ಬೆಟ್ಟದಂತಹ ಅಜ್ಞಾನವನ್ನು ಸಂಪೂರ್ಣವಾಗಿ ಪರಿಹರಿಸಬಲ್ಲ ಮಹಾಸಮರ್ಥ ಎಂದರ್ಥ.

೫. ಒಂದು ರೀತಿಯಲ್ಲಿ ಇದು ಜೀವಾಚ್ಛಾದಿಕಾ ಹಾಗೂ ಪರಮಾಚ್ಛಾದಿಕಾ ಎಂಬವುಗಳಿಗೆ ಸಂಬಂಧಿಸಿದ ವಿವರ ಎಂದು ತಿಳಿಯಬಹುದು. ಅವುಗಳ [೧]ಪರಿಹಾರ ಅವನಿಂದ ಮಾತ್ರವೇ ಹೊರತು ಬೇರಾರಿಂದಲೂ ಅಲ್ಲ ಎಂದು ಭಾವ. ಇಲ್ಲಿ ಭೇದನ ಎಂಬುದಕ್ಕೆ ಜೀವಾಚ್ಛಾದಿಕೆಗೆ ಪೂರ್ಣ ನಾಶ ಎಂದೂ ಪರಮಾಚ್ಛಾದಿಕೆಗೆ ಯಥೋಚಿತವಾಗಿ ಸರಿಸುವುದು ಎಂದೂ ಅರ್ಥ.

೬. **ಪಿತಾಮಹ** ಎಂದರೆ ಬ್ರಹ್ಮದೇವರು ಎಂದರ್ಥ[೨]; ಶ್ರೀಹರಿಯನ್ನು ಜಗತ್ತಿನ ಪ್ರಪಿತಾಮಹ ಎಂದೂ, ಬ್ರಹ್ಮದೇವರನ್ನು ಪಿತಾಮಹ ಎಂದೂ ವಿಶೇಷವಾಗಿ ಉಪಾಸನಾ ಮಾಡುವ ವಿಧಿ ಶಾಸ್ತ್ರಗಳಲ್ಲಿದೆ. ಕೋಶಗಳಲ್ಲೂ ಬ್ರಹ್ಮನ ಹೆಸರುಗಳಲ್ಲಿ ಪಿತಾಮಹ ಎಂದಾಗಿದೆ ಎಂಬುದು ವಿಶೇಷ. ಅವನಿಗೆ **ಭೂತಿದ** ಎಂದರೆ ವಿಶೇಷವಾದ ಜೀವಕೋಟಿಯಲ್ಲಿಯೂ ಅತ್ಯಂತ ಮಿಗಿಲಾದ ಸಹಭೋಗ ಎಂಬ ವಿಶೇಷವಾದ ಐಶ್ವರ್ಯವನ್ನು ನೀಡಿರುವವನು ಎಂದರ್ಥ.

೭. **ಗುಣಗಣನಿಲಯ** ಎಂದರೆ ಜ್ಞಾನಾನಂದಾದಿ ಗುಣಗಳಿಗೆ ಮುಖ್ಯಾಶ್ರಯನಾಗಿರುವವನು ಎಂದರ್ಥ; ಪ್ರತ್ಯೇಕವಾಗಿಯೂ ಅನಂತ ಸದ್ಗುಣಗಳಿಂದ ಪರಿಪೂರ್ಣನಾದವನು ಶ್ರೀಹರಿ ಎಂದು ಭಾವ. ಅದರಂತೆ 'ಗುಣ' ಎಂದರೆ [೩]ಗೌಣರೆನ್ನಿಸುವ ಬ್ರಹ್ಮಾದಿದೇವಗಣಕ್ಕೂ 'ನಿಲಯ' – ಆಶ್ರಯ ಹಾಗೂ ಅವರೆಲ್ಲರಿಗೂ ಇವನಿಂದಲೇ ಪ್ರಲಯ ಎಂದೂ ಭಾವ.

---

೧. ಸ್ವಗುಣಾಚ್ಛಾದಿಕಾ ತ್ವೇಕಾ ಪರಮಾಚ್ಛಾದಿಕಾ ಪರಾ ।
ಸ್ವಗುಣಾಚ್ಛಾದಿಕಾಂ ಹತ್ವಾ ಪರಮಾಚ್ಛಾದಿಕಾಂ ಪರಃ ।
ವ್ಯಾಘುಟ್ಯ ಮೋಕ್ಷಪದವೀಂ ದದಾತಿ ಪುರುಷೋತ್ತಮಃ ॥... – ಭಾಗ.ತಾ.ನಿ. (೧೦/೯೪/೧೩)

೨. ಬ್ರಹ್ಮಾಽಽತ್ಮಭೂಃ ಸುರಜ್ಯೇಷ್ಠಃ ಪರಮೇಷ್ಠೀ **ಪಿತಾಮಹಃ** । – ಅಮರಕೋಶ

೩. ಶಬ್ದಾದ್ಯಾ ಇಂದ್ರಿಯಾದ್ಯಾಶ್ಚ ಸತ್ತ್ವಾದ್ಯಾಶ್ಚ ಶುಭಾನಿ ಚ ।
ಅಪ್ರಧಾನಾನಿ ಚ **ಗುಣಾ** ನಿಗದ್ಯಂತೇ ನಿರುಕ್ತಿಗೈಃ ॥ –ಗೀ.ಭಾ.(೩/೨೯)

೮. **ಶುಭತಮಕಥಾಶಯ** ಎಂದರೆ ಅತ್ಯಂತ ಮಂಗಳಕರವಾದ ಕಥೆಗಳೆನ್ನಿಸಿದ ರಾಮಾಯಣ, ಮಹಾಭಾರತಗಳಿಗೆ ಹಾಗೂ ಅವುಗಳಿಂದ ಉಪಲಕ್ಷಿತವಾದ ಸಮಸ್ತ ಶಾಸ್ತ್ರ ಗ್ರಂಥಗಳಿಗೆ ಸದಾ ತಾತ್ಪರ್ಯನಾದವನು ಎಂದರ್ಥ:

**ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ ।**
**ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ ॥ (ಹರಿವಂಶ)**

೯. **ಪರಮ** ಎಂದರೆ ಆಗಲೇ ತಿಳಿಸಿರುವಂತೆ ಸರ್ವಶ್ರೇಷ್ಠವಾದ ಮಹಾಲಕ್ಷ್ಮಿಗೆ ಆ ಹಿರಿಮೆಯನ್ನು ಅನುಗ್ರಹಿಸಿದವನು, ಸರ್ವೋತ್ತಮ ಎಂದರ್ಥ.

೧೦. **ಸದೋದಿತ** ಎಂದರೆ ಸದಾ ಪ್ರಕಾಶರೂಪನಾದವನು, ನಿತ್ಯೋದಿತ ಎಂದರ್ಥ. ಅಜ್ಞಾನ, ವಿಸ್ಮರಣೆ ಮೊದಲಾದ ಯಾವ ಬಗೆಯ ದೋಷಕ್ಕೂ ಎಂದೂ ಒಳಗಾಗದವನು ಎಂದು ಭಾವ.

೧೧. **ಜಗದೇಕಕಾರಣ** ಇದು ಜಗತ್ತಿಗೆ ಶ್ರೀಹರಿಯೇ ಪ್ರಧಾನವಾದ ಕಾರಣ, ಮುಖ್ಯ ಕಾರಣ ಎಂಬ ವಿಶೇಷಾರ್ಥವನ್ನು ತಿಳಿಸುವುದು. ಅವಾಂತರ ಕಾರಣಗಳು ಕರ್ಮ ಮೊದಲಾದವುಗಳೇ ಆಗಿದ್ದರೂ ಅವುಗಳನ್ನು ಸಹ ಅಂತರ್ಯಾಮಿಯಾಗಿದ್ದು ನಿಯಂತ್ರಿಸುವ ಶ್ರೀಹರಿಯೇ ಪ್ರಧಾನ ಕಾರಣ ಎಂದರ್ಥ. ಇದು ಮಹಾಭಾರತದ ಮೊದಲ ಶ್ಲೋಕವಾದ **ನಾರಾಯಣಂ ಸುರುಗುರುಂ** ಎಂಬ ಶ್ಲೋಕದಲ್ಲಿ ಬಂದಿರುವ **ಜಗದೇಕನಾಥಂ** ಎಂಬ ಮಾತಿನ ವಿವರಣೆಯಂತಿದೆ; ಏಕಕಾರಣ ಎಂಬುದಕ್ಕೆ ಸ್ವತಂತ್ರ ಕಾರಣ ಎಂಬ ಅರ್ಥವು ಉಚಿತ; ಜಗತ್ ಎಂದರೆ ವಾಯು ಎಂಬ ಅರ್ಥವೂ ಸಹ ಇರುವುದರಿಂದ, **ಜಗದೇಕಕಾರಣ** ಎಂಬುದಕ್ಕೆ ಶ್ರೀವಾಯುದೇವರಿಗೆ ಉತ್ಪತ್ತಿ ಮೊದಲಾದವುಗಳಿಗೆಲ್ಲ ಮುಖ್ಯಕಾರಣ ಎಂದು ಅರ್ಥ: **ಪ್ರಾಣಸ್ಯ ಪ್ರಾಣಃ** (ತಲವಕಾರೋಪನಿಷತ್).

೧೨. **ರಾಮ** ಎಂಬುದು ರಾಮಾವತಾರಕ್ಕೆ ಅನ್ವಯಿಸುವ ಪದ. ಅದರಂತೆ ಶ್ರೀಹರಿಯು ಆತ್ಮಾರಾಮನು. ಸದಾ ವಿಹಾರ ಮಾಡುವ ಲಕ್ಷ್ಮೀಪತಿ. ಸಕಲರಿಗೂ ಆನಂದ ನೀಡುವ ಪರಮಾನಂದನಿಧಿ, ಹೀಗೆ ಅನೇಕ ಅರ್ಥಗಳು ಇವೆ. ಶ್ರೀಸತ್ಯಪರಾಯಣತೀರ್ಥರು ಶ್ರೀರಾಮ ಎಂಬ ಶಬ್ದಕ್ಕೆ ನೂರಾರು ಅರ್ಥಗಳನ್ನು ತಿಳಿಸುವ ರಾಮಶಬ್ದಾರ್ಥರತ್ನಮಾಲಾ ಎಂಬ ಕೃತಿಯೊಂದನ್ನು ರಚಿಸಿರುವರು; ಅದರಂತೆ ರಾಮಶಬ್ದಾರ್ಥಗರ್ಭಿತವಾಗಿ ಅಣುಭಾಷ್ಯಕ್ಕೆ ಟೀಕೆಯೊಂದನ್ನು ಸಹ ರಚಿಸಿರುವರು.

೧೩. **ರಮಾರಮಣ** ಎಂದರೆ ರಮೆಗೂ, ಮಹಾಲಕ್ಷ್ಮಿಗೂ ಆನಂದ ನೀಡುವವನು ಎಂದರ್ಥ. ಇದು ಶ್ರೀಸ್ತುತಿ ಎಂಬ ಹೆಸರಿನ ಏಳನೆಯ ಅಧ್ಯಾಯದ ಸಾರರೂಪವಾದ ಪದ.

೧೪. **ಅತಿಮತಮೋಗಿರಿಸಮಿತಿವಿಭೇದನ, ಪಿತಾಮಹಭೂತಿದಗುಣಗಣನಿಲಯ, ಶುಭತಮಕಥಾಶಯಪರಮಸದೋದಿತ** ಎಂಬುದಾಗಿ ಸಮಸ್ತಪದಗಳನ್ನಾಗಿಯೂ

ಅರ್ಥಮಾಡಿಕೊಳ್ಳಬಹುದು. ಆಗ ಅರಿಯಲಾಗದಷ್ಟು ಹಿರಿಯದಾದ ಅಜ್ಞಾನವೆಂಬ ಕತ್ತಲೆಯ ರಾಶಿಯನ್ನೇ ಸಂಪೂರ್ಣವಾಗಿ ನಾಶಮಾಡುವವನೇ ಎಂದೂ, ಪಿತಾಮಹ ಎನ್ನಿಸಿದ ಬ್ರಹ್ಮದೇವರಿಗೂ ಪರಮೈಶ್ವರ್ಯವನ್ನು ನೀಡುವಂತಹ ಗುಣಗಣನಿಲಯನೇ ಎಂದೂ, ಅತ್ಯಂತಮಂಗಳಕರವಾದ ಮಹಾಭಾರತಾದಿ ಕಥೆಗಳ ಮುಖ್ಯ ತಾತ್ಪರ್ಯನಾದ ಸರ್ವೋತ್ತಮನಾದ, ಸದಾಪ್ರಕಾಶಮಾನನಾದ, ಜಗತ್ತಿಗೆ ಮುಖ್ಯಕಾರಣನಾದ ರಮಾರಮಣನಾದ ಶ್ರೀರಾಮನೇ ಎಂದು ಅರ್ಥವಾಗುವುದು.

**ವಿಧಿಭವಮುಖಸುರಸತತಸುವಂದಿತ**
**ರಮಾಮನೋವಲ್ಲಭ ಭವ ಮಮ ಶರಣಮ್ ।**
**ಶುಭತಮಕಥಾಶಯ ಪರಮ ಸದೋದಿತ**
**ಜಗದೇಕಕಾರಣ ರಾಮ ರಮಾರಮಣ ॥ ೨ ॥**

**ಪ** : ವಿಧಿಭವಮುಖಸುರಸತತಸುವಂದಿತ, ರಮಾಮನೋವಲ್ಲಭ, ಭವ, ಮಮ, ಶರಣಮ್, ಶುಭತಮಕಥಾಶಯ, ಪರಮ, ಸದೋದಿತ, ಜಗದೇಕಕಾರಣ, ರಾಮ, ರಮಾರಮಣ।

**ಅ** : ಶುಭತಮಕಥಾಶಯ, ಪರಮ, ಸದೋದಿತ, ಜಗದೇಕಕಾರಣ, ರಾಮ, ರಮಾರಮಣ, ವಿಧಿಭವಮುಖಸುರಸತತಸುವಂದಿತ, ರಮಾಮನೋವಲ್ಲಭ, ಮಮ, ಶರಣಮ್, ಭವ।

**ಪ್ರ.ಪ.** : **ಶುಭತಮಕಥಾಶಯ** – ಪರಮಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯವಾಗಿರುವವನೇ!; **ಪರಮ** – ಸರ್ವೋತ್ತಮನೇ!; **ಸದೋದಿತ** – ಸದಾ ಪ್ರಕಾಶಿತನಾದವನೇ!; **ಜಗದೇಕಕಾರಣ** – ಜಗತ್ತಿಗೆ ಮುಖ್ಯಕಾರಣನಾದವನೇ; **ರಾಮ** – ಶ್ರೀರಾಮನೇ!; **ರಮಾರಮಣ** – ಲಕ್ಷ್ಮೀಪತಿಯೇ; **ವಿಧಿಭವಮುಖಸುರಸತತಸುವಂದಿತ** – ಬ್ರಹ್ಮ, ರುದ್ರ ಮೊದಲಾದ ದೇವತೆಗಳಿಂದ ಸದಾ ಭಕ್ತಿಪೂರ್ವಕ ವಂದಿತನಾದವನೇ!; **ರಮಾಮನೋವಲ್ಲಭ** – ಮಹಾಲಕ್ಷ್ಮಿಯ ಮನಸ್ಸಿಗೆ ಅತ್ಯಂತ ಪ್ರಿಯನಾದವನೇ!; **ಮಮ** – ನನಗೆ; **ಶರಣಮ್** – ಆಸರೆ; **ಭವ** – ಆಗು.

**ಬ್ರಹ್ಮರುದ್ರಮುಖ್ಯಸರ್ವದಿವಿಜವೃಂದವಂದ್ಯನೆ**
**ಲಕುಮಿನಾಥ ಜ್ಞಾನದಾತ ಆಗು ನನಗೆ ಆಸರೆ ।**
**ಮಂಗಳಾತ್ಮ ಶಾಸ್ತ್ರಸಾರ ಪರಮನಿತ್ಯವ್ಯಕ್ತನೆ**
**ವಿಶ್ವಕೆಲ್ಲ ಮುಖ್ಯಕರ್ತ ರಾಮ ರಮೆಯ ರಮಣನೆ ॥ ೨ ॥**

**ಅನು : ಪರಮಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯ-ವಾಗಿರುವವನೇ! ಸರ್ವೋತ್ತಮನೇ! ಸದಾ ಪ್ರಕಾಶಿತನಾದವನೇ! ಜಗತ್ತಿಗೆ ಮುಖ್ಯಕಾರಣನಾದವನೇ! ಶ್ರೀರಾಮನೇ! ಲಕ್ಷ್ಮೀಪತಿಯೇ! ಬ್ರಹ್ಮ, ರುದ್ರ ಮೊದಲಾದ ದೇವತೆಗಳಿಂದ ಸದಾ ಭಕ್ತಿಪೂರ್ವಕ ವಂದಿತನಾದವನೇ! ಮಹಾಲಕ್ಷ್ಮಿಯ ಮನಸ್ಸಿಗೆ ಅತ್ಯಂತ ಪ್ರಿಯನಾದವನೇ! ನನಗೆ ಆಸರೆಯಾಗು.**

ವಿ : ೧. **ವಿಧಿ** ಎಂದರೆ ಬ್ರಹ್ಮ, ಭವ ಎಂದರೆ ರುದ್ರದೇವರು; ಬ್ರಹ್ಮ ಹೆಮ್ಮಗ, ರುದ್ರ ಮೊಮ್ಮಗ (ಶ್ರೀಕನಕದಾಸರು) ಎಂದು ಕರೆದಿರುವರು; ಅವರಿಬ್ಬರಿಂದ ಹಾಗೂ ಇತರ ಸಕಲ ದೇವತೆಗಳಿಂದ ಸದಾ ಕಾಲ ಉತ್ತಮರೀತಿಯಲ್ಲಿ ನಮಸ್ಕರಿಸಲ್ಪಡುವವನು ಶ್ರೀಹರಿ ಎಂದರ್ಥ. ಆದ್ದರಿಂದ ಅವನು ಸರ್ವೋತ್ತಮ ಎಂದು ಭಾವ.

೨. ಮಹಾಲಕ್ಷ್ಮಿಯು ಧನಾಭಿಮಾನಿನಿಯಾಗಿ ಸಕಲರಿಗೂ ಮಾನ್ಯಳು. ಅಂತಹ ಮಹಾಲಕ್ಷ್ಮಿಗೂ ಅತ್ಯಂತ ಪ್ರಿಯನೆಂದು ಪ್ರಸಿದ್ಧನಾದವನು ಶ್ರೀಹರಿ; ಶ್ರೀಹರಿ ರಮಾ-ಮನೋವಲ್ಲಭ ಎಂಬುದು ಶ್ರೀಮದ್ಭಾಗವತಪುರಾಣದಲ್ಲಿ ನಿರೂಪಿತವಾಗಿರುವ ಲಕ್ಷ್ಮೀ-ಸ್ವಯಂವರಪ್ರಸಂಗದಲ್ಲಿ ವಿಶೇಷವಾಗಿ ಪ್ರತಿಪಾದಿತವಾಗಿದೆ.

೩. **ಶರಣ**[೧] ಎಂದರೆ ಆಸರೆ, ರಕ್ಷಣೆ ಶ್ರೀಹರಿಯು ಸಕಲರಿಗೂ ಹೀಗೆ ರಕ್ಷಣೆಯಾಗಿರಲಿ ಎಂಬುದು ಇದರ ಆಶಯ.

೪. **ವಿಧಿಭವಮುಖಸುರಸತತಸುವಂದಿತರಮಾಮನೋವಲ್ಲಭ** ಎಂಬುದಾಗಿ ಇದನ್ನು ಒಂದೇ ಸಮಸ್ತಪದವನ್ನಾಗಿ ಓದಿಕೊಳ್ಳಬಹುದು. ಆಗ ಬ್ರಹ್ಮರುದ್ರ ಮೊದಲಾದ ಸುರರಿಂದ ಸತತ ಸುವಂದಿತಳಾದ ಮಹಾಲಕ್ಷ್ಮೀದೇವಿಗೆ ಹೃದಯವಲ್ಲಭನಾದ ಎಂದೂ ಅರ್ಥವಾಗುವುದು.

**ಅಗಣಿತಗುಣಗಣಮಯಶರೀರ ಹೇ**
**ವಿಗತಗುಣೇತರ ಭವ ಮಮ ಶರಣಮ್ ।**
**ಶುಭತಮಕಥಾಶಯ ಪರಮ ಸದೋದಿತ**
**ಜಗದೇಕಕಾರಣ ರಾಮ ರಮಾರಮಣ ॥ ೩ ॥**

**ಪ :** ಅಗಣಿತಗುಣಗಣಮಯಶರೀರ, ಹೇ, ವಿಗತಗುಣೇತರ, ಭವ, ಮಮ, ಶರಣಮ್, ಶುಭತಮಕಥಾಶಯ, ಪರಮ, ಸದೋದಿತ, ಜಗದೇಕಕಾರಣ, ರಾಮ, ರಮಾರಮಣ।

---

೧. ಶರಣಂ ಗೃಹರಕ್ಷಿತ್ರೋಃ। – ಅಮರಕೋಶ

ಅ : ಶುಭತಮಕಥಾಶಯ, ಪರಮ, ಸದೋದಿತ, ಜಗದೇಕಕಾರಣ, ರಾಮ, ರಮಾರಮಣ, ಅಗಣಿತಗುಣಗಣಮಯಶರೀರ, ಹೇ, ವಿಗತಗುಣೇತರ, ಮಮ, ಶರಣಮ್, ಭವ।

ಪ್ರ.ಪ. : **ಶುಭತಮಕಥಾಶಯ** – ಪರಮಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯವಾಗಿರುವವನೇ!; **ಪರಮ** – ಸರ್ವೋತ್ತಮನೇ!; **ಸದೋದಿತ** – ಸದಾ ಪ್ರಕಾಶಿತನಾದವನೇ!; **ಜಗದೇಕಕಾರಣ** – ಜಗತ್ತಿಗೆ ಮುಖ್ಯಕಾರಣನಾದವನೇ; **ರಾಮ** – ಶ್ರೀರಾಮನೇ!; **ರಮಾರಮಣ** – ಲಕ್ಷ್ಮೀಪತಿಯೇ; [೧]**ಅಗಣಿತಗುಣಗಣಮಯಶರೀರ** – ಎಣಿಕೆ ಇಲ್ಲದ ಗುಣಗಳ ಗುಂಪಿಗೆ ನೆಲೆಯಾದ ಅಪ್ರಾಕೃತ ಶರೀರನೇ!; **ಹೇ** – ಹೇ; **ವಿಗತಗುಣೇತರ** – ದೋಷರಹಿತನಾದವನೇ!; **ಮಮ** – ನನಗೆ; **ಶರಣಮ್** – ಆಸರೆ; **ಭವ** – ಆಗು.

**ಎಣಿಕೆಯಿರದ ಗುಣಗಳೆಲ್ಲ ದೇಹವಾಗಿ ಇರುವನೆ**
**ಸರ್ವದೋಷದೂರ ನೀನು ಆಗು ನನಗೆ ಆಸರೆ।**
**ಮಂಗಳಾತ್ಮ ಶಾಸ್ತ್ರಸಾರ ಪರಮ ನಿತ್ಯವ್ಯಕ್ತನೆ**
**ವಿಶ್ವಕೆಲ್ಲ ಮುಖ್ಯಕರ್ತ ರಾಮ ರಮೆಯ ರಮಣನೆ ॥ ೩ ॥**

**ಅನು : ಪರಮಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯವಾಗಿರುವವನೇ! ಸರ್ವೋತ್ತಮನೇ! ಸದಾ ಪ್ರಕಾಶಿತನಾದವನೇ! ಜಗತ್ತಿಗೆ ಮುಖ್ಯಕಾರಣನಾದವನೇ! ಶ್ರೀರಾಮನೇ! ಲಕ್ಷ್ಮೀಪತಿಯೇ! ಎಣಿಕೆ ಇಲ್ಲದ ಗುಣಗಳ ಗುಂಪಿಗೆ ನೆಲೆಯಾದ ಅಪ್ರಾಕೃತ ಶರೀರನೇ! ಹೇ, ದೋಷರಹಿತನಾದವನೇ! ನನಗೆ ಆಸರೆಯಾಗು.**

ವಿ : ೧. ಶ್ರೀಹರಿಯ ದೇಹ ಗುಣಮಯವಾದದ್ದು ಎಂದರೆ ಜ್ಞಾನಾನಂದಾದಿ ಗುಣಮಯವಾದ ಅಪ್ರಾಕೃತವಾದ ಶರೀರ ಎಂದರ್ಥ; ಅಂತಹ ಗುಣಗಳು ಸಹ ಸೀಮಿತವಾದುವಲ್ಲ; ಅನಂತ; ಆ ಗುಣಗಳಿಗೂ ಸಹ ಪರಸ್ಪರ ಭೇದವಿಲ್ಲ; ಇದರಿಂದ ಶ್ರೀಹರಿಯು ನಿರಾಕಾರನಲ್ಲ; ಆದರೆ ಸಂಸಾರಿ ಜೀವರಂತೆ ಪ್ರಾಕೃತ ಗುಣಗಳಾದ ಸತ್ತ್ವ, ರಜಸ್ ಹಾಗೂ ತಮಸ್ ಗುಣಗಳಿಂದ ಉಂಟಾದ ದೇಹವನ್ನು ಹೊಂದಿದವನಲ್ಲ; ಹೀಗೆ ಶ್ರೀಹರಿ ಸಾಕಾರನೋ, ನಿರಾಕಾರನೋ ಎಂಬುದಕ್ಕೆ ಶಾಸ್ತ್ರೋಕ್ತ ಉತ್ತರ ಇದರಲ್ಲಿದೆ. ಈ ಪರಿಕಲ್ಪನೆಯೇ ಆ ಮುಂಚಿನ ದಾರ್ಶನಿಕ ಪ್ರಪಂಚಕ್ಕೆ ತಿಳಿದಿರಲಿಲ್ಲ ಎಂಬುದು ವಿಶೇಷ.

---

೧. ಯೋಽಸೌ ನಿರ್ಗುಣ ಇತ್ಯುಕ್ತೋ ವೇದಾದಿಷು ಮಹೇಶ್ವರಃ।
ಪ್ರಾಕೃತೈರ್ಹೇಯಸಂಯುಕ್ತೈರ್ಗುಣೈರ್ಹೀನತ್ವಮುಚ್ಯತೇ॥ – ಪದ್ಮಪುರಾಣ

**ಅನು : ಪರಮಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯವಾಗಿರುವವನೇ! ಸರ್ವೋತ್ತಮನೇ! ಸದಾ ಪ್ರಕಾಶಿತನಾದವನೇ! ಜಗತ್ತಿಗೆ ಮುಖ್ಯಕಾರಣನಾದವನೇ! ಶ್ರೀರಾಮನೇ! ಲಕ್ಷ್ಮೀಪತಿಯೇ! ಬ್ರಹ್ಮ, ರುದ್ರ ಮೊದಲಾದ ದೇವತೆಗಳಿಂದ ಸದಾ ಭಕ್ತಿಪೂರ್ವಕ ವಂದಿತನಾದವನೇ! ಮಹಾಲಕ್ಷ್ಮಿಯ ಮನಸ್ಸಿಗೆ ಅತ್ಯಂತ ಪ್ರಿಯನಾದವನೇ! ನನಗೆ ಆಸರೆಯಾಗು.**

ವಿ : ೧. **ವಿಧಿ** ಎಂದರೆ ಬ್ರಹ್ಮ, ಭವ ಎಂದರೆ ರುದ್ರದೇವರು; ಬ್ರಹ್ಮ ಹೆಮ್ಮಗ, ರುದ್ರ ಮೊಮ್ಮಗ (ಶ್ರೀಕನಕದಾಸರು) ಎಂದು ಕರೆದಿರುವರು; ಅವರಿಬ್ಬರಿಂದ ಹಾಗೂ ಇತರ ಸಕಲ ದೇವತೆಗಳಿಂದ ಸದಾ ಕಾಲ ಉತ್ತಮರೀತಿಯಲ್ಲಿ ನಮಸ್ಕರಿಸಲ್ಪಡುವವನು ಶ್ರೀಹರಿ ಎಂದರ್ಥ. ಆದ್ದರಿಂದ ಅವನು ಸರ್ವೋತ್ತಮ ಎಂದು ಭಾವ.

೨. ಮಹಾಲಕ್ಷ್ಮಿಯು ಧನಾಭಿಮಾನಿನಿಯಾಗಿ ಸಕಲರಿಗೂ ಮಾನ್ಯಳು. ಅಂತಹ ಮಹಾಲಕ್ಷ್ಮಿಗೂ ಅತ್ಯಂತ ಪ್ರಿಯನೆಂದು ಪ್ರಸಿದ್ಧನಾದವನು ಶ್ರೀಹರಿ; ಶ್ರೀಹರಿ ರಮಾಮನೋವಲ್ಲಭ ಎಂಬುದು ಶ್ರೀಮದ್ಭಾಗವತಪುರಾಣದಲ್ಲಿ ನಿರೂಪಿತವಾಗಿರುವ ಲಕ್ಷ್ಮೀಸ್ವಯಂವರಪ್ರಸಂಗದಲ್ಲಿ ವಿಶೇಷವಾಗಿ ಪ್ರತಿಪಾದಿತವಾಗಿದೆ.

೩. **ಶರಣ**[೧] ಎಂದರೆ ಆಸರೆ, ರಕ್ಷಣೆ ಶ್ರೀಹರಿಯು ಸಕಲರಿಗೂ ಹೀಗೆ ರಕ್ಷಣೆಯಾಗಿರಲಿ ಎಂಬುದು ಇದರ ಆಶಯ.

೪. **ವಿಧಿಭವಮುಖಸುರಸತತಸುವಂದಿತರಮಾಮನೋವಲ್ಲಭ** ಎಂಬುದಾಗಿ ಇದನ್ನು ಒಂದೇ ಸಮಸ್ತಪದವನ್ನಾಗಿ ಓದಿಕೊಳ್ಳಬಹುದು. ಆಗ ಬ್ರಹ್ಮರುದ್ರ ಮೊದಲಾದ ಸುರರಿಂದ ಸತತ ಸುವಂದಿತಳಾದ ಮಹಾಲಕ್ಷ್ಮೀದೇವಿಗೆ ಹೃದಯವಲ್ಲಭನಾದ ಎಂದೂ ಅರ್ಥವಾಗುವುದು.

**ಅಗಣಿತಗುಣಗಣಮಯಶರೀರ ಹೇ**
**ವಿಗತಗುಣೇತರ ಭವ ಮಮ ಶರಣಮ್ ।**
**ಶುಭತಮಕಥಾಶಯ ಪರಮ ಸದೋದಿತ**
**ಜಗದೇಕಕಾರಣ ರಾಮ ರಮಾರಮಣ ॥ ೩ ॥**

**ಪ :** ಅಗಣಿತಗುಣಗಣಮಯಶರೀರ, ಹೇ, ವಿಗತಗುಣೇತರ, ಭವ, ಮಮ, ಶರಣಮ್, ಶುಭತಮಕಥಾಶಯ, ಪರಮ, ಸದೋದಿತ, ಜಗದೇಕಕಾರಣ, ರಾಮ, ರಮಾರಮಣ।

---

೧. ಶರಣಂ ಗೃಹರಕ್ಷಿತ್ರೋಃ। – ಅಮರಕೋಶ

ಅ : ಶುಭತಮಕಥಾಶಯ, ಪರಮ, ಸದೋದಿತ, ಜಗದೇಕಕಾರಣ, ರಾಮ, ರಮಾರಮಣ, ಅಗಣಿತಗುಣಗಣಮಯಶರೀರ, ಹೇ, ವಿಗತಗುಣೇತರ, ಮಮ, ಶರಣಮ್, ಭವ।

ಪ್ರ.ಪ. : **ಶುಭತಮಕಥಾಶಯ** – ಪರಮಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯವಾಗಿರುವವನೇ!; **ಪರಮ** – ಸರ್ವೋತ್ತಮನೇ!; **ಸದೋದಿತ** – ಸದಾ ಪ್ರಕಾಶಿತನಾದವನೇ!; **ಜಗದೇಕಕಾರಣ** – ಜಗತ್ತಿಗೆ ಮುಖ್ಯಕಾರಣನಾದವನೇ; **ರಾಮ** – ಶ್ರೀರಾಮನೇ!; **ರಮಾರಮಣ** – ಲಕ್ಷ್ಮೀಪತಿಯೇ; [೧]**ಅಗಣಿತಗುಣಗಣಮಯಶರೀರ** – ಎಣಿಕೆ ಇಲ್ಲದ ಗುಣಗಳ ಗುಂಪಿಗೆ ನೆಲೆಯಾದ ಅಪ್ರಾಕೃತ ಶರೀರನೇ!; **ಹೇ** – ಹೇ; **ವಿಗತಗುಣೇತರ** – ದೋಷರಹಿತನಾದವನೇ!; **ಮಮ** – ನನಗೆ; **ಶರಣಮ್** – ಆಸರೆ; **ಭವ** – ಆಗು.

**ಎಣಿಕೆಯಿರದ ಗುಣಗಳೆಲ್ಲ ದೇಹವಾಗಿ ಇರುವನೆ**
**ಸರ್ವದೋಷದೂರ ನೀನು ಆಗು ನನಗೆ ಆಸರೆ।**
**ಮಂಗಳಾತ್ಮ ಶಾಸ್ತ್ರಸಾರ ಪರಮ ನಿತ್ಯವ್ಯಕ್ತನೆ**
**ವಿಶ್ವಕೆಲ್ಲ ಮುಖ್ಯಕರ್ತ ರಾಮ ರಮೆಯ ರಮಣನೆ** **॥ ೩ ॥**

**ಅನು : ಪರಮಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯವಾಗಿರುವವನೇ! ಸರ್ವೋತ್ತಮನೇ! ಸದಾ ಪ್ರಕಾಶಿತನಾದವನೇ! ಜಗತ್ತಿಗೆ ಮುಖ್ಯಕಾರಣನಾದವನೇ! ಶ್ರೀರಾಮನೇ! ಲಕ್ಷ್ಮೀಪತಿಯೇ! ಎಣಿಕೆ ಇಲ್ಲದ ಗುಣಗಳ ಗುಂಪಿಗೆ ನೆಲೆಯಾದ ಅಪ್ರಾಕೃತ ಶರೀರನೇ! ಹೇ, ದೋಷರಹಿತನಾದವನೇ! ನನಗೆ ಆಸರೆಯಾಗು.**

ವಿ : ೧. ಶ್ರೀಹರಿಯ ದೇಹ ಗುಣಮಯವಾದದ್ದು ಎಂದರೆ ಜ್ಞಾನಾನಂದಾದಿ ಗುಣಮಯವಾದ ಅಪ್ರಾಕೃತವಾದ ಶರೀರ ಎಂದರ್ಥ; ಅಂತಹ ಗುಣಗಳು ಸಹ ಸೀಮಿತವಾದುವಲ್ಲ; ಅನಂತ; ಆ ಗುಣಗಳಿಗೂ ಸಹ ಪರಸ್ಪರ ಭೇದವಿಲ್ಲ; ಇದರಿಂದ ಶ್ರೀಹರಿಯು ನಿರಾಕಾರನಲ್ಲ; ಆದರೆ ಸಂಸಾರಿ ಜೀವರಂತೆ ಪ್ರಾಕೃತ ಗುಣಗಳಾದ ಸತ್ವ, ರಜಸ್ ಹಾಗೂ ತಮಸ್ ಗುಣಗಳಿಂದ ಉಂಟಾದ ದೇಹವನ್ನು ಹೊಂದಿದವನಲ್ಲ; ಹೀಗೆ ಶ್ರೀಹರಿ ಸಾಕಾರನೋ, ನಿರಾಕಾರನೋ ಎಂಬುದಕ್ಕೆ ಶಾಸ್ತ್ರೋಕ್ತ ಉತ್ತರ ಇದರಲ್ಲಿದೆ. ಈ ಪರಿಕಲ್ಪನೆಯೇ ಆ ಮುಂಚಿನ ದಾರ್ಶನಿಕ ಪ್ರಪಂಚಕ್ಕೆ ತಿಳಿದಿರಲಿಲ್ಲ ಎಂಬುದು ವಿಶೇಷ.

---

೧. ಯೋಽಸೌ ನಿರ್ಗುಣ ಇತ್ಯುಕ್ತೋ ವೇದಾದಿಷು ಮಹೇಶ್ವರಃ।
ಪ್ರಾಕೃತೈರ್ಹೇಯಸಂಯುಕ್ತೈರ್ಗುಣೈರ್ಹೀನತ್ವಮುಚ್ಯತೇ॥ – ಪದ್ಮಪುರಾಣ

೨. **ಗುಣಗಣ** ಎಂಬುದಕ್ಕೆ ಗೌಣರೆನ್ನಿಸಿದ ಬ್ರಹ್ಮಾದಿ ಚೇತನಗಣ ಎಂದರ್ಥ; ಪ್ರತಿಕಲ್ಪದಲ್ಲಿ ಅವರು ಇರುವುದರಿಂದ ಅಂತಹವರ ಸಂಖ್ಯೆ ಅನಂತವೆನ್ನಿಸುವುದು; ಅಂತಹ ತತ್ತ್ವಾಭಿಮಾನಿ ದೇವತೆಗಳನ್ನು ತನ್ನ ಶರೀರದ ತತ್ತದ್ಯೋಗ್ಯ ಸ್ಥಳಗಳಲ್ಲಿ ಇರಿಸಿಕೊಂಡು ಸಾಯುಜ್ಯ ಮುಕ್ತಿಯನ್ನು ನೀಡುವವನು ಎಂದೂ ಇದಕ್ಕೆ ಅರ್ಥ; ಅದರಂತೆ ಅನಂತ ಮುಕ್ತಬ್ರಹ್ಮರಿಗೆ ಸರ್ವಾಂಗ ಸಾಯುಜ್ಯರೂಪವಾದ ಸಾರ್ಷ್ಟಿ ಎಂಬ ಮುಕ್ತಿಯನ್ನು ನೀಡಿ ತನ್ನ ಇಡೀ ದೇಹದಲ್ಲಿ ಇರಿಸಿಕೊಂಡವನು ಎಂಬ ಅರ್ಥವು ಇದಕ್ಕೆ ವಿಹಿತ.

೩. ಪ್ರಾಕೃತ ಗುಣಗಣಮಯವಾದ ಅಸಂಖ್ಯ ಜೀವರನ್ನು ತನ್ನ ಉದರದಲ್ಲಿರಿಸಿಕೊಂಡು ಸಂರಕ್ಷಿಸುವವನು ಎಂಬ ಮತ್ತೊಂದು ಅರ್ಥವನ್ನು ಇದಕ್ಕೆ ಮಾಡಬಹುದು.

೪. **ಗುಣೇತರ** ಎಂದರೆ ಗುಣವಲ್ಲದ್ದು ಎಂದರೆ ದೋಷ ಎಂದರ್ಥ; ಅಂತಹ ಸಕಲ ದೋಷಗಳಿಂದ ದೂರವಾದವನು ಎಂದೂ ಭಾವ. ಇದನ್ನು ವಿಗತ, ಗುಣೇತರ ಎಂಬುದಾಗಿಯೂ ವಿಭಾಗ ಮಾಡಬಹುದು; ಆಗ ವಿಗತ ಎಂಬುದಕ್ಕೆ ಗರುಡನನ್ನು ವಾಹನವನ್ನಾಗಿ ಮಾಡಿಕೊಂಡು ಸಂಚರಿಸುವವನು ಎಂದೂ, ಗುಣೇತರ ಎಂಬುದಕ್ಕೆ ಅಪ್ರಧಾನರಾದ ಬ್ರಹ್ಮಾದಿ ಚೇತನ ರಾಶಿಗಳಿಂದ ಅತ್ಯಂತ ಭಿನ್ನನಾದವನು ಎಂದೂ ಅರ್ಥವಾಗುವುದು.

೫. ಇಲ್ಲಿ **ಅ-ವಿಗತಗುಣ** ಎಂದು ವಿಭಾಗ ಮಾಡಿಕೊಂಡು ನಿರ್ಗುಣನಲ್ಲ, ಸಗುಣನು ಎಂದೂ ಅರ್ಥಮಾಡಿಕೊಳ್ಳಬಹುದು.

೬. ಇದನ್ನು **ವಿಗತಗುಣೇತರಭವ** ಎಂದರೆ ತಪಸ್ಸಿನಿಂದ ತಮ್ಮಲ್ಲಿನ ದೋಷಗಳನ್ನು ಪರಿಹಾರ ಮಾಡಿಕೊಂಡು, ಶ್ರೀಹರಿಯ ಅವತಾರಕ್ಕೆ ಅರ್ಹತೆಯನ್ನು ಪಡೆದ ದಶರಥ, ವಸುದೇವ ಮೊದಲಾದವರಿಗೆ ಪುತ್ರತ್ವೇನ ಜನಿಸುವವನು ಎಂದೂ ಅರ್ಥಮಾಡಿಕೊಳ್ಳಬಹುದು.

**ಅಪರಿಮಿತಸುಖನಿಧಿವಿಮಲಸುದೇಹ ಹೇ**
**ವಿಗತಸುಖೇತರ ಭವ ಮಮ ಶರಣಮ್ ।**
**ಶುಭತಮಕಥಾಶಯ ಪರಮ ಸದೋದಿತ**
**ಜಗದೇಕಕಾರಣ ರಾಮ ರಮಾರಮಣ** ॥ ೪ ॥

**ಪ :** ಅಪರಿಮಿತಸುಖನಿಧಿವಿಮಲಸುದೇಹ, ಹೇ, ವಿಗತಸುಖೇತರ, ಭವ, ಮಮ, ಶರಣಮ್, ಶುಭತಮಕಥಾಶಯ, ಪರಮ, ಸದೋದಿತ, ಜಗದೇಕಕಾರಣ, ರಾಮ, ರಮಾರಮಣ ।

ಅ : ಶುಭತಮಕಥಾಶಯ, ಪರಮ, ಸದೋದಿತ, ಜಗದೇಕಕಾರಣ, ರಾಮ, ರಮಾರಮಣ, ಅಪರಿಮಿತಸುಖನಿಧಿವಿಮಲಸುದೇಹ, ಹೇ, ವಿಗತಸುಖೇತರ, ಮಮ, ಶರಣಮ್, ಭವ।

ಪ್ರ.ಪ. : (**ಶುಭತಮಕಥಾಶಯ** - ಪರಮಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯವಾಗಿರುವವನೇ!; **ಪರಮ** - ಸರ್ವೋತ್ತಮನೇ!; **ಸದೋದಿತ** - ಸದಾ ಪ್ರಕಾಶಿತನಾದವನೇ!; **ಜಗದೇಕಕಾರಣ** - ಜಗತ್ತಿಗೆ ಮುಖ್ಯಕಾರಣನಾದವನೇ; **ರಾಮ** - ಶ್ರೀರಾಮನೇ!; **ರಮಾರಮಣ** - ಲಕ್ಷ್ಮೀಪತಿಯೇ!) **ಅಪರಿಮಿತಸುಖನಿಧಿವಿಮಲಸುದೇಹ** - ಪರಿಮಿತಿ ಇಲ್ಲದ ಸುಖಕ್ಕೆ ನೆಲೆಯಾದ, ನಿರ್ಮಲವಾದ ಶ್ರೇಷ್ಠ ಶರೀರವನ್ನು ಹೊಂದಿದವನೆ!; **ಹೇ** - ಹೇ; **ವಿಗತಸುಖೇತರ** - ದುಃಖದಿಂದ ಸಂಪೂರ್ಣವಾಗಿ ರಹಿತನಾದವನೇ!; **ಮಮ** - ನನಗೆ; **ಶರಣಮ್** - ಆಸರೆ; **ಭವ** - ಆಗು.

**ಕೊನೆಯೆ ಇರದ ಸುಖದ ನಿಲಯ ದೋಷವಿರದ ದೇಹನೆ**
**ದುಃಖವೆಂದು ಇಲ್ಲದವನೆ ಆಗು ನನಗೆ ಆಸರೆ।**
**ಮಂಗಳಾತ್ಮ ಶಾಸ್ತ್ರಸಾರ ಪರಮ ನಿತ್ಯವ್ಯಕ್ತನೆ**
**ವಿಶ್ವಕೆಲ್ಲ ಮುಖ್ಯಕರ್ತ ರಾಮ ರಮೆಯ ರಮಣನೆ** ॥ ೪ ॥

**ಅನು : ಪರಮಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯವಾಗಿರುವವನೇ! ಸರ್ವೋತ್ತಮನೇ! ಸದಾ ಪ್ರಕಾಶಿತನಾದವನೇ! ಜಗತ್ತಿಗೆ ಮುಖ್ಯಕಾರಣನಾದವನೇ! ಶ್ರೀರಾಮನೇ! ಲಕ್ಷ್ಮೀಪತಿಯೇ! ಪರಿಮಿತಿ ಇಲ್ಲದ ಸುಖನಿಧಿಯೂ, ನಿರ್ಮಲವಾದ ಶ್ರೇಷ್ಠ ಶರೀರವನ್ನು ಹೊಂದಿದವನೂ ಆದವನೇ! ಹೇ ದುಃಖದಿಂದ ಸಂಪೂರ್ಣವಾಗಿ ರಹಿತನಾದವನೇ! ನನಗೆ ಆಸರೆಯಾಗು.**

ವಿ : ೧. ಪರಿಮಿತಿ ಇರದ ಅನಂತಸುಖಕ್ಕೆ ನೆಲೆಯಾದವನು ಶ್ರೀಹರಿ: ಅವನ ದೇಹ ಯಾವ ದೋಷವನ್ನೂ ಸಹ ಹೊಂದಿಲ್ಲ; ಇಲ್ಲಿ ದೇಹದ ದೋಷಗಳು ಎಂದರೆ ಹುಟ್ಟುವುದು, ಬೆಳೆಯುವುದು ಮೊದಲಾದವುಗಳು ಎಂದು ತಿಳಿಯಬೇಕು.

೨. **ವಿಗತಸುಖೇತರ** ಎಂಬುದನ್ನು ವಿಗತ, ಸುಖ, ಇತರ ಎಂಬುದಾಗಿ ವಿಭಾಗ ಮಾಡಿಕೊಂಡು ಅರ್ಥಮಾಡಿಕೊಳ್ಳಬಹುದು. ಆಗ ವಿಗತ ಗರುಡವಾಹನನಾದವನು, ಆನಂದಮಯನಾದವನು, ಸರ್ವವಿಲಕ್ಷಣನಾದವನು ಎಂದು ಅರ್ಥವಾಗುವುದು.

೩. ಅದರಂತೆ **ವಿಗತಸುಖೇತರಭವ** ಎಂಬುದಕ್ಕೆ ವಿಗತಸುಖೇತರರು ಎಂದರೆ ಮುಕ್ತರು ಎಂದರ್ಥ. ಹಾಗೆ ಅವರು ಮುಕ್ತರಾಗಿರುವುದು ಶ್ರೀಹರಿಯ ಅನುಗ್ರಹದಿಂದಲೇ ಎಂದು ಭಾವ.

## ಮತ್ಸ್ಯಸ್ತುತಿ

**ಪ್ರಚಲಿತಲಯಜಲವಿಹರಣ ಶಾಶ್ವತ**
**ಸುಖಮಯ ಮೀನ ಹೇ ಭವ ಮಮ ಶರಣಮ್ ।**
**ಶುಭತಮಕಥಾಶಯ ಪರಮ ಸದೋದಿತ**
**ಜಗದೇಕಕಾರಣ ರಾಮ ರಮಾರಮಣ ॥ ೫ ॥**

**ಪ :** ಪ್ರಚಲಿತಲಯಜಲವಿಹರಣ, ಶಾಶ್ವತ, ಸುಖಮಯ, ಮೀನ, ಹೇ, ಭವ, ಮಮ, ಶರಣಮ್, ಶುಭತಮಕಥಾಶಯ, ಪರಮ, ಸದೋದಿತ, ಜಗದೇಕಕಾರಣ, ರಾಮ, ರಮಾರಮಣ ।

**ಅ :** ಶುಭತಮಕಥಾಶಯ, ಪರಮ, ಸದೋದಿತ, ಜಗದೇಕಕಾರಣ, ರಾಮ, ರಮಾರಮಣ, ಪ್ರಚಲಿತಲಯಜಲವಿಹರಣ, ಶಾಶ್ವತ, ಸುಖಮಯ, ಮೀನ, ಹೇ, ಭವ, ಮಮ, ಶರಣಮ್ ।

**ಪ್ರ.ಪ. :** (**ಶುಭತಮಕಥಾಶಯ** – ಪರಮಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯವಾಗಿರುವವನೇ!; **ಪರಮ** – ಸರ್ವೋತ್ತಮನೇ!; **ಸದೋದಿತ** – ಸದಾ ಪ್ರಕಾಶಿತನಾದವನೇ!; **ಜಗದೇಕಕಾರಣ** – ಜಗತ್ತಿಗೆ ಮುಖ್ಯಕಾರಣನಾದವನೇ; **ರಾಮ** – ಶ್ರೀರಾಮನೇ!; **ರಮಾರಮಣ** – ಲಕ್ಷ್ಮೀಪತಿಯೇ;) **ಪ್ರಚಲಿತಲಯಜಲವಿಹರಣ** – ಉಲ್ಲೋಲಕಲ್ಲೋಲವಾದ ಪ್ರಳಯೋದಕದಲ್ಲಿ ವಿಹರಿಸುವವನೇ!; **ಶಾಶ್ವತ** – ಶಾಶ್ವತನಾದವನೇ!; **ಸುಖಮಯ** – ಸುಖಮಯನಾದವನೇ!; **ಮೀನ** – ಎಲೈ ಮತ್ಸ್ಯರೂಪಿಯೇ; **ಹೇ** – ಹೇ ; **ಮಮ** – ನನಗೆ; **ಶರಣಮ್** – ಆಸರೆ; **ಭವ** – ಆಗು.

**ಪ್ರಳಯ ಜಲದಿ ಲೀಲೆಯಿಂದ ಚರಿಪ ಪರಮ ನಿತ್ಯನೆ**
**ನಿತ್ಯಸುಖದ ಮೀನ ನೀನು ಆಗು ನನಗೆ ಆಸರೆ ।**
**ಮಂಗಳಾತ್ಮ ಶಾಸ್ತ್ರಸಾರ ಪರಮ ನಿತ್ಯವ್ಯಕ್ತನೆ**
**ವಿಶ್ವಕೆಲ್ಲ ಮುಖ್ಯಕರ್ತ ರಾಮ ರಮೆಯ ರಮಣನೆ ॥ ೫ ॥**

**ಅನು : ಪರಮಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯವಾಗಿರುವವನೇ! ಸರ್ವೋತ್ತಮನೇ! ಸದಾ ಪ್ರಕಾಶಿತನಾದವನೇ! ಜಗತ್ತಿಗೆ ಮುಖ್ಯಕಾರಣನಾದವನೇ! ಶ್ರೀರಾಮನೇ! ಲಕ್ಷ್ಮೀಪತಿಯೇ! ಉಲ್ಲೋಲಕಲ್ಲೋಲವಾದ ಪ್ರಳಯೋದಕದಲ್ಲಿ ವಿಹರಿಸುವವನೇ! ಶಾಶ್ವತನಾದವನೇ! ಸುಖಮಯನಾದವನೇ! ಹೇ ಎಲೈ ಮತ್ಸ್ಯರೂಪಿಯೇ ನನಗೆ ಆಸರೆಯಾಗು.**

ವಿ : ೧. **ಪ್ರಚಲಿತ**ವಾದ ಎಂದರೆ ಕ್ಷೋಭೆಗೊಂಡ ಪ್ರಳಯೋದಕದಲ್ಲಿ ವಿಹಾರ ಮಾಡುವವನೇ; ಅನಾದಿನಿತ್ಯನೇ! ಆನಂದ ಸ್ವರೂಪಿಯಾದ ಎಲೈ ಮತ್ಸ್ಯಾವತಾರದ

ಶ್ರೀಹರಿಯೇ! ನೀನು ನನಗೆ ಆಸರೆಯಾಗು; ಪ್ರಳಯೋದಕವು ಲಕ್ಷ್ಮೀಸ್ವರೂಪ. ಆದ್ದರಿಂದ ಪ್ರಳಯೋದಕದಲ್ಲಿ ವಿಹರಿಸುವವನು ಎಂದರೆ ಲಕ್ಷ್ಮೀಸಮೇತವಾಗಿ ಪ್ರಳಯಕಾಲದಲ್ಲೂ ವಿಹರಿಸುವನು ಎಂದರ್ಥ. ಇದು **ಲಕ್ಷ್ಮೀಭುಜಾಂತರಗತಃ** (೧/೨) ಎಂಬ ತಾತ್ಪರ್ಯನಿರ್ಣಯದ ಮಾತಿಗೆ ವಿವರಣೆಯಾಗಿದೆ.

೨. ಶ್ರೀಹರಿಯ ಮತ್ಸ್ಯಾವತಾರದ ವರ್ಣನೆ ಇಲ್ಲಿದೆ; ಇಲ್ಲಿಂದ ಮುಂದಿನ ಹತ್ತು ಶ್ಲೋಕಗಳಲ್ಲಿ ಕ್ರಮವಾಗಿ ಮತ್ಸ್ಯಾದಿ ದಶಾವತಾರಗಳ ವರ್ಣನೆ ಬಂದಿದೆ.

೩. ಪ್ರಳಯಜಲ ಎಂದರೆ ಮಹಾಪ್ರಳಯ ಕಾಲದ ಸಮುದ್ರ; ಜಗತ್ತನ್ನೇ ಮುಳುಗಿಸಿದ ಆದರಲ್ಲಿ ಬದುಕೇ ದುಸ್ತರ; ಆದರೆ ಅದರಲ್ಲಿ ಶ್ರೀಹರಿಯು ಮತ್ಸ್ಯರೂಪದಿಂದ ವಿಹಾರ ಮಾಡುವವನು.

೪. ಶ್ರೀಹರಿಯು ಮತ್ಸ್ಯರೂಪದಲ್ಲೂ ನಿತ್ಯಾನಂದ ಸ್ವರೂಪನಾಗಿರುವನು ಎಂದರೆ ಅವನು ಸ್ವಗತಭೇದಾದಿಗಳಿಂದ ವಿವರ್ಜಿತನಾದವನು ಎಂದರ್ಥ.

೫. ಇಲ್ಲಿ **ಹೇ ಭವ** ಎಂಬುದನ್ನು **ಹೇ ಅಭವ** ಎಂದು ವಿಭಾಗ ಮಾಡಿ, ಅವನು ಜೀವರಂತೆ ಪ್ರಾಕೃತಹುಟ್ಟನ್ನು ಹೊಂದಿದವನಲ್ಲ ಎಂದು ಅರ್ಥಮಾಡಿಕೊಳ್ಳಬಹುದು.

೬. **ಅಭವ** ಎಂಬ ಈ ಮಾತು ಮುಂದಿನ ಅವತಾರಗಳಿಗೂ ಹಾಗೂ ಅವನ ಇತರ ಸಕಲ ಅವತಾರಗಳಿಗೂ ಅನ್ವಯಿಸುವುದು; ಅಂದರೆ ಅವನ ಸಕಲ ಅವತಾರಗಳು ಸಹ ಅನಾದಿ ನಿತ್ಯಗಳಾಗಿದ್ದು ಯಾವುದಕ್ಕೂ ಹುಟ್ಟುಸಾವುಗಳ ದೋಷ ಸರ್ವಥಾ ಇಲ್ಲ ಎಂದು ಭಾವ.

**ಕೂರ್ಮಸ್ತುತಿ**

**ಸುರದಿತಿಜಸುಬಲವಿಲುಲಿತಮಂದರ-**
**ಧರ ವರಕೂರ್ಮ ಹೇ ಭವ ಮಮ ಶರಣಮ್ ।**
**ಶುಭತಮಕಥಾಶಯ ಪರಮ ಸದೋದಿತ**
**ಜಗದೇಕಕಾರಣ ರಾಮ ರಮಾರಮಣ ॥ ೬ ॥**

**ಪ** : ಸುರದಿತಿಜಸುಬಲವಿಲುಲಿತಮಂದರಧರ, ವರ, ಕೂರ್ಮ, ಹೇ, ಭವ, ಮಮ, ಶರಣಮ್, ಶುಭತಮಕಥಾಶಯ, ಪರಮ, ಸದೋದಿತ, ಜಗದೇಕಕಾರಣ, ರಾಮ, ರಮಾರಮಣ ।

**ಅ** : ಶುಭತಮಕಥಾಶಯ, ಪರಮ, ಸದೋದಿತ, ಜಗದೇಕಕಾರಣ, ರಾಮ, ರಮಾರಮಣ, ಸುರದಿತಿಜಸುಬಲವಿಲುಲಿತಮಂದರಧರ, ವರ, ಕೂರ್ಮ, ಹೇ, ಮಮ, ಶರಣಮ್, ಭವ ।

**ಪ್ರ.ಪ. : (ಶುಭತಮಕಥಾಶಯ** – ಪರಮಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯವಾಗಿರುವವನೇ!; **ಪರಮ** – ಸರ್ವೋತ್ತಮನೇ!; **ಸದೋದಿತ** – ಸದಾ ಪ್ರಕಾಶಿತನಾದವನೇ!; **ಜಗದೇಕಕಾರಣ** – ಜಗತ್ತಿಗೆ ಮುಖ್ಯಕಾರಣನಾದವನೇ; **ರಾಮ** – ಶ್ರೀರಾಮನೇ!; **ರಮಾರಮಣ** – ಲಕ್ಷ್ಮೀಪತಿಯೇ;) **ಸುರದಿತಿಜಸುಬಲವಿಲುಲಿತಮಂದರಧರ** – ಸುರಾಸುರರಿಂದ ಮಹಾಬಲದಿಂದ ಕಡೆಯಲ್ಪಟ್ಟ ಮಂದರಪರ್ವತವನ್ನು ಧರಿಸಿದವನೇ!; **ವರ** – ಶ್ರೇಷ್ಠನಾದವನೇ!; **ಕೂರ್ಮ** – ಕೂರ್ಮರೂಪಿಯೇ!; **ಹೇ** – ಹೇ; **ಮಮ** – ನನಗೆ; **ಶರಣಮ್** – ಆಸರೆ; **ಭವ** – ಆಗು.

**ದೇವದೈತ್ಯರೆಲ್ಲ ಕಡೆದ ಮಂದರಾದ್ರಿ ಧರಿಸಿದ**
**ಸರ್ವಶ್ರೇಷ್ಠ ಕೂರ್ಮ ನೀನು ಆಗು ನನಗೆ ಆಸರೆ ।**
**ಮಂಗಳಾತ್ಮ ಶಾಸ್ತ್ರಸಾರ ಪರಮ ನಿತ್ಯವ್ಯಕ್ತನೆ ।**
**ವಿಶ್ವಕೆಲ್ಲ ಮುಖ್ಯಕರ್ತ ರಾಮ ರಮೆಯ ರಮಣನೆ ॥ ೬ ॥**

**ಅನು : (ಪರಮಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯವಾಗಿರುವವನೇ! ಸರ್ವೋತ್ತಮನೇ! ಸದಾಪ್ರಕಾಶಿತನಾದವನೇ! ಜಗತ್ತಿಗೆ ಮುಖ್ಯಕಾರಣನಾದವನೇ! ಶ್ರೀರಾಮನೇ! ಲಕ್ಷ್ಮೀಪತಿಯೇ!) ಸುರಾಸುರರಿಂದ ಮಹಾಬಲದಿಂದ ಕಡೆಯಲ್ಪಟ್ಟ ಮಂದರಪರ್ವತವನ್ನು ಧರಿಸಿದವನೇ! ಶ್ರೇಷ್ಠನಾದವನೇ! ಹೇ ಕೂರ್ಮರೂಪಿಯೇ! ನನಗೆ ಆಸರೆಯಾಗು.**

ವಿ : ೧. ಮಂದರಪರ್ವತವು ಸಪ್ತಕುಲಪರ್ವತಗಳಲ್ಲಿ ಒಂದು; ಸುವರ್ಣ ಪರ್ವತ ಎಂಬುದು ಅದರ ಹಿರಿಮೆ; ರುದ್ರದೇವರ ವರದಿಂದಾಗಿ ಅದು ಎತ್ತಲಾಗದ ಪರ್ವತ ಎಂಬ ಹಿರಿಮೆಯ ಇದನ್ನು, ದೇವಾಸುರರು ಕ್ಷೀರಸಾಗರವನ್ನು ಮಥನ ಮಾಡುವಾಗ ಕಡೆಗೋಲನ್ನಾಗಿ ಮಾಡಿಕೊಂಡಿದ್ದರು; ಅದರಿಂದಾಗಿ ಅದು ಇತರರಿಗೆ ಅಧಾರ್ಯ ಎನ್ನಿಸಿತ್ತು. ಆದರೆ ಶ್ರೀಹರಿಯು ಅದನ್ನು ಲೀಲಾಜಾಲವಾಗಿ ಬೆನ್ನ ಮೇಲೆ ಹೊತ್ತು ವಿಹರಿಸಿದ; ಆದ್ದರಿಂದ ಅವನು ಸರ್ವೋತ್ತಮ ಎಂದು ಭಾವ.

೨. ಇಂತಹ ಶ್ರೀಹರಿಯು ಪ್ರಾಕೃತ ಕೂರ್ಮವಾಗಿರದೆ, ಅಪ್ರಾಕೃತ ಕೂರ್ಮವಾಗಿರುವನು ಎಂಬುದನ್ನು ವರಕೂರ್ಮ ಎಂಬ ಪದದಿಂದ ಸ್ತುತಿಸಿರುವರು.

**ವರಾಹಸ್ತುತಿ**

**ಸಗಿರಿವರಧರಾತಲವಹ ಸುಸೂಕರ**
**ಪರಮ ವಿಬೋಧ ಹೇ ಭವ ಮಮ ಶರಣಮ್ ।**
**ಶುಭತಮಕಥಾಶಯ ಪರಮ ಸದೋದಿತ**
**ಜಗದೇಕಕಾರಣ ರಾಮ ರಮಾರಮಣ ॥ ೭ ॥**

**ಪ :** ಸಗಿರಿವರಧರಾತಲವಹ, ಸುಸೂಕರ, ಪರಮ, ವಿಬೋಧ, ಹೇ, ಭವ, ಮಮ, ಶರಣಮ್, ಶುಭತಮಕಥಾಶಯ, ಪರಮ, ಸದೋದಿತ, ಜಗದೇಕಕಾರಣ, ರಾಮ, ರಮಾರಮಣ।

**ಅ :** ಶುಭತಮಕಥಾಶಯ, ಪರಮ, ಸದೋದಿತ, ಜಗದೇಕಕಾರಣ, ರಾಮ, ರಮಾರಮಣ, ಸಗಿರಿವರಧರಾತಲವಹ, ಸುಸೂಕರ, ಪರಮ, ವಿಬೋಧ, ಹೇ, ಮಮ, ಶರಣಮ್, ಭವ।

**ಪ್ರ.ಪ. :** (**ಶುಭತಮಕಥಾಶಯ** – ಪರಮಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯವಾಗಿರುವವನೇ!; **ಪರಮ** – ಸರ್ವೋತ್ತಮನೇ!; **ಸದೋದಿತ** – ಸದಾ ಪ್ರಕಾಶಿತನಾದವನೇ!; **ಜಗದೇಕಕಾರಣ** – ಜಗತ್ತಿಗೆ ಮುಖ್ಯಕಾರಣನಾದವನೇ; ರಾಮ – ಶ್ರೀರಾಮನೇ!; **ರಮಾರಮಣ** – ಲಕ್ಷ್ಮೀಪತಿಯೇ;) **ಸಗಿರಿವರಧರಾತಲವಹ** – ಶ್ರೇಷ್ಠ ಪರ್ವತಗಳಿಂದೊಡಗೂಡಿದ ಭೂಮಿಯನ್ನು ಧರಿಸಿದವನೇ!; **ಸುಸೂಕರ** – ಶ್ರೇಷ್ಠ ವರಾಹರೂಪನೇ; **ಪರಮ** – ಸರ್ವೋತ್ತಮನೇ!; **ವಿಬೋಧ** – ವಿಶಿಷ್ಟಜ್ಞಾನಪೂರ್ಣನೇ!; **ಹೇ** – ಹೇ; **ಮಮ** – ನನಗೆ; **ಶರಣಮ್** – ಆಸರೆ; **ಭವ** – ಆಗು.

**ಗಿರಿಸಮೇತ ಭೂಮಿಯನ್ನು ಲೀಲೆಯಿಂದ ಪೊತ್ತಯೊ**
**ಪರಮದಿವ್ಯಜ್ಞಾನಿ ವರಹ ಆಗು ನನಗೆ ಆಸರೆ।**
**ಮಂಗಳಾತ್ಮ ಶಾಸ್ತ್ರಸಾರ ಪರಮ ನಿತ್ಯವ್ಯಕ್ತನೆ**
**ವಿಶ್ವಕೆಲ್ಲ ಮುಖ್ಯಕರ್ತ ರಾಮ ರಮೆಯ ರಮಣನೆ ॥ ೭ ॥**

**ಅನು : (ಪರಮಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯ-ವಾಗಿರುವವನೇ! ಸರ್ವೋತ್ತಮನೇ! ಸದಾ ಪ್ರಕಾಶಿತನಾದವನೇ! ಜಗತ್ತಿಗೆ ಮುಖ್ಯಕಾರಣನಾದವನೇ! ಶ್ರೀರಾಮನೇ! ಲಕ್ಷ್ಮೀಪತಿಯೇ!) ಶ್ರೇಷ್ಠಪರ್ವತ-ಗಳಿಂದೊಡಗೂಡಿದ ಭೂಮಿಯನ್ನು ಧರಿಸಿದವನೇ! ಶ್ರೇಷ್ಠ ವರಾಹರೂಪನೇ ಸರ್ವೋತ್ತಮನೇ! ವಿಶಿಷ್ಟಜ್ಞಾನಪೂರ್ಣನೇ! ಹೇ ನನಗೆ ಆಸರೆಯಾಗು.**

೧. ಈ ಶ್ಲೋಕದಲ್ಲಿ ಶ್ರೀಹರಿಯ ವರಾಹರೂಪದ ಸ್ತುತಿ ಬಂದಿದೆ.

೨. ಶ್ರೀಹರಿಯು ಸಮಗ್ರ ಭೂಮಂಡಲವನ್ನೇ ಹೊತ್ತವನು; ಭೂಮಿಯಲ್ಲಿರುವ ದೊಡ್ಡಬೆಟ್ಟಗಳು ಅಸಂಖ್ಯ; ಅವುಗಳಿಂದ ಸಮೇತವಾದ ಇಡೀ ಭೂಮಿಯನ್ನು ಲೀಲೆಯಿಂದ ಹೊತ್ತ ಹಿರಿಮೆ ಅವನದು. ಆದ್ದರಿಂದ ಅವನು ಸರ್ವೋತ್ತಮ ಹಾಗೂ ಪರಮ ಪರಿಪೂರ್ಣವಾದ ಜ್ಞಾನಿ ಎಂದರ್ಥ.

೩. ಹೀಗೆ ಭೂಮಿಯನ್ನೇ ಹೊತ್ತ ಅವನು ಭೂಮಿಯಲ್ಲಿರುವ ನಮ್ಮೆಲ್ಲರಿಗೂ ರಕ್ಷಣೆಯನ್ನು ನೀಡಲಿ ಎಂದು ಪ್ರಾರ್ಥನೆ.

೪. **ವಿಬೋಧ** ಎಂಬುದಕ್ಕೆ ವಿ ಎಂದರೆ ಗರುಡ; ಗರುಡನೆ ಮೊದಲಾದ ಸಕಲರಿಗೂ ಬೋಧ ಎಂದರೆ ಜ್ಞಾನವನ್ನು ನೀಡುವವನು ಎಂದರ್ಥ:

**ಯಸ್ಮಾದ್ಬ್ರಹ್ಮೇಂದ್ರರುದ್ರಾದಿ ದೇವತಾನಾಂ ಶ್ರಿಯೋಽಪಿ ಚ ।**
**ಜ್ಞಾನಸ್ಫೂರ್ತಿಃ ಸದಾ ತಸ್ಮೈ ಹರಯೇ ಗುರವೇ ನಮಃ ॥ - ಈಶಾವಾಸ್ಯಭಾಷ್ಯ**

**ನರಸಿಂಹಸ್ತುತಿ**

**ಅತಿಬಲದಿತಿಸುತಹೃದಯವಿಭೇದನ**
**ಜಯ ನೃಹರೇಽಮಲ ಭವ ಮಮ ಶರಣಮ್ ।**
**ಶುಭತಮಕಥಾಶಯ ಪರಮ ಸದೋದಿತ**
**ಜಗದೇಕಕಾರಣ ರಾಮ ರಮಾರಮಣ ॥ ೮ ॥**

**ಪ :** ಅತಿಬಲದಿತಿಸುತಹೃದಯವಿಭೇದನ, ಜಯ, ನೃಹರೇ, ಅಮಲ, ಭವ, ಮಮ, ಶರಣಮ್, ಶುಭತಮಕಥಾಶಯ, ಪರಮ, ಸದೋದಿತ, ಜಗದೇಕಕಾರಣ, ರಾಮ, ರಮಾರಮಣ ।

**ಅ :** ಶುಭತಮಕಥಾಶಯ, ಪರಮ, ಸದೋದಿತ, ಜಗದೇಕಕಾರಣ, ರಾಮ, ರಮಾರಮಣ, ಅತಿಬಲದಿತಿಸುತಹೃದಯವಿಭೇದನ, ಜಯ, ನೃಹರೇ, ಅಮಲ, ಮಮ, ಶರಣಮ್, ಭವ, ।

**ಪ್ರ.ಪ. :** (**ಶುಭತಮಕಥಾಶಯ** – ಪರಮಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯವಾಗಿರುವವನೇ!; **ಪರಮ** – ಸರ್ವೋತ್ತಮನೇ!; **ಸದೋದಿತ** – ಸದಾ ಪ್ರಕಾಶಿತನಾದವನೇ!; **ಜಗದೇಕಕಾರಣ** – ಜಗತ್ತಿಗೆ ಮುಖ್ಯಕಾರಣನಾದವನೇ; **ರಾಮ** – ಶ್ರೀರಾಮನೇ!; **ರಮಾರಮಣ** – ಲಕ್ಷ್ಮೀಪತಿಯೇ;) **ಅತಿಬಲದಿತಿಸುತಹೃದಯವಿಭೇದನ** – ಅತ್ಯಂತ ಬಲಶಾಲಿಯಾದ ದೈತ್ಯ ಹಿರಣ್ಯಕಶಿಪುವಿನ ಹೃದಯವನ್ನು ಸೀಳಿ ಹಾಕಿದವನೇ!; **ನೃಹರೇ** – ನರಸಿಂಹನೇ!; **ಜಯ** – ನೀನು ಸರ್ವೋತ್ತಮ; **ಅಮಲ** – ನಿರ್ದೋಷ; **ಮಮ** – ನನಗೆ; **ಶರಣಮ್** – ಆಸರೆ; **ಭವ** – ಆಗು.

**ವರದ ಬಲದಿ ಬೀಗುತಿದ್ದ ದೈತ್ಯಹೃದಯ ಸೀಳಿದೆ**
**ಜಯ ನೃಸಿಂಹ ನಿತ್ಯ ವಿಮಲ ಆಗು ನನಗೆ ಆಸರೆ ।**
**ಮಂಗಳಾತ್ಮ ಶಾಸ್ತ್ರಸಾರ ಪರಮ ನಿತ್ಯವ್ಯಕ್ತನೆ ।**
**ವಿಶ್ವಕೆಲ್ಲ ಮುಖ್ಯಕರ್ತ ರಾಮ ರಮೆಯ ರಮಣನೆ ॥ ೮ ॥**

**ಅನು : (ಪರಮಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯ-ವಾಗಿರುವವನೇ! ಸರ್ವೋತ್ತಮನೇ! ಸದಾ ಪ್ರಕಾಶಿತನಾದವನೇ! ಜಗತ್ತಿಗೆ ಮುಖ್ಯ-ಕಾರಣನಾದವನೇ! ಶ್ರೀರಾಮನೇ! ಲಕ್ಷ್ಮೀಪತಿಯೇ!) ಅತ್ಯಂತ ಬಲಶಾಲಿಯಾದ ದೈತ್ಯ ಹಿರಣ್ಯಕಶಿಪುವಿನ ಹೃದಯವನ್ನು ಸೀಳಿ ಹಾಕಿದವನೇ! ನರಸಿಂಹನೇ! ನೀನು ಸರ್ವೋತ್ತಮ, ನಿರ್ದೋಷ, ನನಗೆ ಆಸರೆಯಾಗು.**

ವಿ: ೧. ಹಿರಣ್ಯಕಶಿಪುವು ಬ್ರಹ್ಮವರದಿಂದ ಮಹಾಬಲಾಢ್ಯನೆನ್ನಿಸಿದವನು; ಅಜೇಯನೂ, ಅವಧ್ಯನೂ ಆಗಿದ್ದವನು; ಅಂತಹವನನ್ನು ಶ್ರೀಹರಿಯು ಕೇವಲ ತನ್ನ ಉಗುರುಗಳಿಂದ ತೀಡಿ ಲೀಲಾಜಾಲವಾಗಿ ಸಂಹರಿಸಿದ ಮಹಾಪರಾಕ್ರಮಿ.

೨. ಹಿರಣ್ಯಕಶಿಪುವಿನ ಬಲವು ಬ್ರಹ್ಮದೇವರ ವರದಿಂದ ಬಂದದ್ದು; ಆದ್ದರಿಂದ ಅವನನ್ನು ಸಂಹರಿಸಿದ ನರಸಿಂಹನ ಬಲ ಅವನಿಗೆ ಸ್ವಾಭಾಕವಾಗಿ ಇದದ್ದೇ ಹೊರತು ವರಾದಿಗಳಿಂದ ಬಂದದ್ದಾಗಿರಲಿಲ್ಲ; ಆದರಿಂದ ಅದು ಅವನ ಸಹಜವಾದ ಹಿರಿಮೆ. ಅವನು ನಮ್ಮನ್ನು ಸಲಹಲಿ.

೩. ಶ್ರೀಮದಾಚಾರ್ಯರ ನಖಸ್ತುತಿಯ ಮೊದಲಶ್ಲೋಕದಲ್ಲಿ ಹಿರಣ್ಯಕಶಿಪುವಿನ ವಧೆಯ ವಿವರ ಬಂದಿದೆ:

**ಪಾಂತ್ವಸ್ಮಾನ್ ಪುರುಹೂತವೈರಿಬಲವನ್ಮಾತಂಗಮಾದ್ಯದ್ಘಟಾ-**
**ಕುಂಭೋಚ್ಚಾದ್ರಿವಿಪಾಟನಾಧಿಕಪಟುಪ್ರತ್ಯೇಕವಜ್ರಾಯಿತಾಃ ।**
**ಶ್ರೀಮತ್ಕಂಠೀರವಾಸ್ಯಪ್ರತತಸುನಖರಾ ದಾರಿತಾರಾತಿದೂರ-**
**ಪ್ರಧ್ವಸ್ತಧ್ವಾಂತಶಾಂತಪ್ರವಿತತಮನಸಾ ಭಾವಿತಾ ನಾಕಿವೃಂದೈಃ ॥** - ನಖಸ್ತುತಿ

೪. **ಹೇ ಅತಿಬಲ! ದಿತಿಸುತಹೃದಯವಿಭೇದನ!** ಎಂದೂ ಅರ್ಥಮಾಡಿಕೊಳ್ಳಬಹುದು. ಅತಿಬಲ ಎಂಬುದಕ್ಕೆ **ನ ಕೇವಲಂ ಮೇ ಭವತಶ್ಚ ರಾಜನ್ ಸ ವೈ ಬಲಂ ಬಲಿನಾಂ ಚಾಪರೇಷಾಮ್** (ಭಾಗವತ. ೭/೮/೮) ಎಂಬ ಮಾತಿನ ಹಿನ್ನೆಲೆಯಲ್ಲಿ ಎಂತಹ ಬಲಿಷ್ಠರಿಗೂ ಬಲ ನೀಡುವಂತಹ ಸ್ವಾಭಾವಿಕವಾಗಿಯೇ ಅತ್ಯಂತ ಬಲಿಷ್ಠನಾದವನು ಶ್ರೀಹರಿ ಎಂದು ಅರ್ಥವಾಗುವುದು.

### ವಾಮನಸ್ತುತಿ

**ಬಲಿಮುಖದಿತಿಸುತವಿಜಯವಿನಾಶನ**
**ಜಗದವನಾಜಿತ ಭವ ಮಮ ಶರಣಮ್ ।**
**ಶುಭತಮಕಥಾಶಯ ಪರಮ ಸದೋದಿತ**
**ಜಗದೇಕಕಾರಣ ರಾಮ ರಮಾರಮಣ ॥ ೯ ॥**

**ಪ :** ಬಲಿಮುಖದಿತಿಸುತವಿಜಯವಿನಾಶನ, ಜಗದವನ, ಅಜಿತ, ಭವ, ಮಮ, ಶರಣಮ್, ಶುಭತಮಕಥಾಶಯ, ಪರಮ, ಸದೋದಿತ, ಜಗದೇಕಕಾರಣ, ರಾಮ, ರಮಾರಮಣ।

**ಅ :** ಶುಭತಮಕಥಾಶಯ, ಪರಮ, ಸದೋದಿತ, ಜಗದೇಕಕಾರಣ, ರಾಮ, ರಮಾರಮಣ, ಬಲಿಮುಖದಿತಿಸುತವಿಜಯವಿನಾಶನ, ಜಗದವನ, ಅಜಿತ, ಮಮ, ಶರಣಮ್, ಭವ।

**ಪ್ರ.ಪ. :** (**ಶುಭತಮಕಥಾಶಯ** – ಪರಮಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯವಾಗಿರುವವನೇ!; **ಪರಮ** – ಸರ್ವೋತ್ತಮನೇ!; **ಸದೋದಿತ** – ಸದಾ ಪ್ರಕಾಶಿತನಾದವನೇ!; **ಜಗದೇಕಕಾರಣ** – ಜಗತ್ತಿಗೆ ಮುಖ್ಯಕಾರಣನಾದವನೇ; ರಾಮ – ಶ್ರೀರಾಮನೇ!; **ರಮಾರಮಣ** – ಲಕ್ಷ್ಮೀಪತಿಯೇ;) **ಬಲಿಮುಖದಿತಿಸುತವಿಜಯವಿನಾಶನ** – ಬಲಿಯೇ ಮೊದಲಾದ ದೈತ್ಯರ ವಿಜಯವನ್ನು ನಾಶಮಾಡಿದವನೇ!; **ಜಗದವನ** – ಜಗತ್ತಿನ ಸಂರಕ್ಷನೇ!; **ಅಜಿತ** – ಸದಾ ಜಯಶಾಲಿಯಾದವನೇ (ವಾಮನನೇ!); **ಮಮ** – ನನಗೆ; **ಶರಣಮ್** – ಆಸರೆ; ಭವ – ಆಗು.

**ಬಲಿಯೆ ಮುಖ್ಯವಾದ ದೈತ್ಯವಿಜಯವನ್ನು ಹಣಿದೆಯೊ**
**ಲೋಕಪಾಲ ನಿರುತ ಅಜಿತ ಆಗು ನನಗೆ ಆಸರೆ।**
**ಮಂಗಳಾತ್ಮ ಶಾಸ್ತ್ರಸಾರ ಪರಮ ನಿತ್ಯವ್ಯಕ್ತನೆ**
**ವಿಶ್ವಕೆಲ್ಲ ಮುಖ್ಯಕರ್ತ ರಾಮ ರಮೆಯ ರಮಣನೆ ॥ ೯ ॥**

**ಅನು : (ಪರಮಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯ-ವಾಗಿರುವವನೇ! ಸರ್ವೋತ್ತಮನೇ! ಸದಾ ಪ್ರಕಾಶಿತನಾದವನೇ! ಜಗತ್ತಿಗೆ ಮುಖ್ಯಕಾರಣನಾದವನೇ! ಶ್ರೀರಾಮನೇ! ಲಕ್ಷ್ಮೀಪತಿಯೇ!) ಬಲಿಯೇ ಮೊದಲಾದ ದೈತ್ಯರ ವಿಜಯವನ್ನು ನಾಶಮಾಡಿದವನೇ! ಜಗತ್ತಿನ ಸಂರಕ್ಷನೇ! ಸದಾ ಜಯಶಾಲಿಯಾದವನೇ (ವಾಮನನೇ!), ನನಗೆ ಆಸರೆಯಾಗು.**

ವಿ : ೧. ಬಲಿಯು ದೈತ್ಯರ ರಾಜನಾಗಿ ಅಮರರನ್ನು ಪರಾಭವಗೊಳಿಸಿದವನು. ಅಮೃತಮಥನ ಕಾಲದಲ್ಲಿ ದೈತ್ಯ ಚಕ್ರವರ್ತಿಯಾಗಿದ್ದವನು ಇವನೇ. ಅಮೃತಪ್ರಾಶನ ಮಾಡುವ ಅವಕಾಶ ಲಭಿಸದಿದ್ದರೂ ಗುರುಗಳಾದ ಶುಕ್ರಚಾರ್ಯರ ನೇತೃತ್ವದಲ್ಲಿ ವಿಶ್ವಜಿತ್ ಎಂಬ ಯಾಗವನ್ನು ಮಾಡಿ ಅದರ ಫಲವಾಗಿ ಸ್ವರ್ಗಲೋಕಕ್ಕೆ ಅಧಿಪತಿಯಾದನು; ಆಗ ಪದಚ್ಯುತನಾದ ಇಂದ್ರನ ಕಲ್ಯಾಣಕ್ಕಾಗಿ ವಾಮನನಾಗಿ ಅವತರಿಸಿ ಮೂರು ಹೆಜ್ಜೆ ಭೂಮಿಯನ್ನು ಬೇಡುವ ನೆಪದಲ್ಲಿ ಮೂರು ಲೋಕಗಳನ್ನು ತನ್ನ ವಶಮಾಡಿಕೊಂಡು,

ಬಲಿಚಕ್ರವರ್ತಿಯನ್ನು ದಮನ ಮಾಡಿದ; ಇಂದ್ರನಿಗೆ ಪುನಃ ಸ್ವರ್ಗಾಧಿಪತ್ಯವನ್ನು ನೀಡಿ ಅನುಗ್ರಹಿಸಿದ.

೨. ಇದರಿಂದಾಗಿ ಜಗತ್ತಿಗೆ ಕ್ಷೇಮವಾಗುವಂತಾಯಿತು. ಇಂತಹ ಶ್ರೀಹರಿಯು ನಮ್ಮನ್ನು ಪಾಲಿಸಲಿ ಎಂದರ್ಥ.

**ಪರಶುರಾಮಸ್ತುತಿ**

**ಅವಿಜಿತಕುನೃಪತಿಸಮಿತಿವಿಖಂಡನ**
**ರಮಾವರ ವೀರಪ ಭವ ಮಮ ಶರಣಮ್ ।**
**ಶುಭತಮಕಥಾಶಯ ಪರಮ ಸದೋದಿತ**
**ಜಗದೇಕಕಾರಣ ರಾಮ ರಮಾರಮಣ ॥ ೧೦ ॥**

**ಪ** : ಅವಿಜಿತಕುನೃಪತಿಸಮಿತಿವಿಖಂಡನ, ರಮಾವರ, ವೀರಪ, ಭವ, ಮಮ, ಶರಣಮ್, ಶುಭತಮಕಥಾಶಯ, ಪರಮ, ಸದೋದಿತ, ಜಗದೇಕಕಾರಣ, ರಾಮ, ರಮಾರಮಣ।

**ಅ** : ಶುಭತಮಕಥಾಶಯ, ಪರಮ, ಸದೋದಿತ, ಜಗದೇಕಕಾರಣ, ರಾಮ, ರಮಾರಮಣ, ಅವಿಜಿತಕುನೃಪತಿಸಮಿತಿವಿಖಂಡನ, ರಮಾವರ, ವೀರಪ, ಮಮ, ಶರಣಮ್, ಭವ।

**ಪ್ರ.ಪ.** : (**ಶುಭತಮಕಥಾಶಯ** – ಪರಮಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯವಾಗಿರುವವನೇ!; **ಪರಮ** – ಸರ್ವೋತ್ತಮನೇ!; **ಸದೋದಿತ** – ಸದಾ ಪ್ರಕಾಶಿತನಾದವನೇ!; **ಜಗದೇಕಕಾರಣ** – ಜಗತ್ತಿಗೆ ಮುಖ್ಯಕಾರಣನಾದವನೇ; ರಾಮ – ಶ್ರೀರಾಮನೇ!; **ರಮಾರಮಣ** – ಲಕ್ಷ್ಮೀಪತಿಯೇ;) **ಅವಿಜಿತಕುನೃಪತಿಸಮಿತಿವಿಖಂಡನ** – ಅಜೇಯರಾಗಿದ್ದ ದುಷ್ಟರಾಜರ ದಂಡನ್ನು ಸಂಪೂರ್ಣವಾಗಿ ಪರಾಭವಗೊಳಿಸಿದವನೇ!; **ರಮಾವರ** – ಮಹಾಲಕ್ಷ್ಮೀಗಿಂತ ಶ್ರೇಷ್ಠನಾದವನೇ!; **ವೀರಪ** – ವೀರರನ್ನು ಪಾಲಿಸುವವನೇ; **ಮಮ** – ನನಗೆ; **ಶರಣಮ್** – ಆಸರೆ; **ಭವ** – ಆಗು.

**ಇತರ ಜಗಕೆ ಮಣಿಯದಿದ್ದ ದುಷ್ಟನೃಪರ ತರಿದೆಯೊ**
**ರಮೆಯ ದೊರೆಯೆ ವೀರಪಾಲ ಆಗು ನನಗೆ ಆಸರೆ।**
**ಮಂಗಳಾತ್ಮ ಶಾಸ್ತ್ರಸಾರ ಪರಮ ನಿತ್ಯವ್ಯಕ್ತನೆ**
**ವಿಶ್ವಕೆಲ್ಲ ಮುಖ್ಯಕರ್ತ ರಾಮ ರಮೆಯ ರಮಣನೆ ॥ ೧೦ ॥**

ಅನು : (ಪರಮಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯ-ವಾಗಿರುವವನೇ! ಸರ್ವೋತ್ತಮನೇ! ಸದಾ ಪ್ರಕಾಶಿತನಾದವನೇ! ಜಗತ್ತಿಗೆ

**ಮುಖ್ಯಕಾರಣನಾದವನೇ! ಶ್ರೀರಾಮನೇ! ಲಕ್ಷ್ಮೀಪತಿಯೇ!) ಅಜೇಯರಾಗಿದ್ದ ದುಷ್ಟ ರಾಜರ ದಂಡನ್ನು ಸಂಪೂರ್ಣವಾಗಿ ಪರಾಭವಗೊಳಿಸಿದವನೇ! ಮಹಾಲಕ್ಷ್ಮಿಗಿಂತ ಶ್ರೇಷ್ಠನಾದವನೇ! ವೀರರನ್ನು ಪಾಲಿಸುವವನೇ! ನನಗೆ ಆಸರೆಯಾಗು.**

ವಿ : ೧. ಪರಶುರಾಮರೂಪದ ವರ್ಣನೆ ಈ ಶ್ಲೋಕದಲ್ಲಿದೆ.

೨. ಕಾರ್ತವೀರ್ಯಾರ್ಜುನನ ನೇತೃತ್ವದಲ್ಲಿ ದುಷ್ಟರಾಜರ ದಂಡು ಪ್ರಜಾ-ಪಾಲನೆಯ ಬದಲು ಪ್ರಜಾಶೋಷಣೆಯ ಕಾರ್ಯದಲ್ಲಿ ತೊಡಗಿದ್ದಾಗ ಮಹಾವಿಷ್ಣುವು ದೇವತೆಗಳ ಪ್ರಾರ್ಥನೆಯಂತೆ ಪರಶುರಾಮರೂಪದಿಂದ ಪ್ರಾದುರ್ಭವಿಸಿ, ಕಾರ್ತವೀರ್ಯಾರ್ಜುನನನ್ನು ಸಂಹರಿಸಿದ; ದುಷ್ಟರಾಜರ ದಂಡನ್ನೆಲ್ಲಾ ನಾಶ ಮಾಡಿದ; ಇಪ್ಪತ್ತೊಂದು ಬಾರಿ ಭೂಪ್ರದಕ್ಷಿಣೆ ಮಾಡಿ ದುಷ್ಟರಾಜರನ್ನು ಪುನಃ ಪುನಃ ಸಂಹರಿಸಿದ.

೩. ರಮಾಪತಿಯೆನ್ನುವ ಮೂಲಕ ಪರಶುರಾಮರೂಪವು ಕೃಷ್ಣರಾಮರೂಪಗಳಂತೆ ಸಾಕ್ಷಾದ್ರೂಪ ಎಂಬ ವಿಶೇಷಾಂಶ ಸೂಚಿತ.

೪. **ಅವಿಜಿತಕುನೃಪತಿಸಮಿತಿಶ್ಚಾಸೌ ವಿಖಂಡನಶ್ಚ** ಎಂಬುದಾಗಿ ವಿಗ್ರಹ ಮಾಡಿದಾಗ, ಪರಶುರಾಮನು ದುಷ್ಟರಾಜರ ಗುಂಪನ್ನು ಕುರಿಗಳಂತೆ, ಪರಾಭವಗೊಳಿಸಿದ ಎಂಬ ವಿಶೇಷಾರ್ಥ ಸೂಚಿತವಾಗುವುದು. ವಿಖಂಡನ ಎಂಬುದಕ್ಕೆ ಆ ರಾಜರ ದಂಡನ್ನು ಕೇವಲ ಪರಾಭವಗೊಳಿಸಿದ್ದಲ್ಲ, ಖಂಡತುಂಡವಾಗಿ ಕತ್ತರಿಸಿ ನಾಶಮಾಡಿದ ಎಂದು ಅರ್ಥವಾಗುವುದು.

೫. **ವೀರಪ** – ದುಷ್ಟರಲ್ಲದ ಸಾತ್ವಿಕ ತೇಜಸ್ಸಿನ ವೀರರಾಜರನ್ನು ಸಂಹರಿಸದೆ ಪಾಲಿಸಿದ; ಇದರಿಂದ ಪರಶುರಾಮರು ಸಂಹರಿಸಿದ್ದು ಕೇವಲ ದುಷ್ಟರಾಜರನ್ನೇ ಹೊರತು ಶ್ರೇಷ್ಠರಾದ ಸಾತ್ವಿಕ ರಾಜರನ್ನಲ್ಲ ಎಂಬ ವಿಶೇಷಾಂಶ ಸೂಚಿತವಾಗುವುದು. ಅದರಿಂದಾಗಿ ದಶರಥನಂತಹ ಶ್ರೇಷ್ಠರು ನಿರ್ಭೀತಿಯಿಂದ ರಾಜ್ಯವಾಳಲು ಸಾಧ್ಯವಾಯಿತು.

೬. **ವೀರಪ** ಎಂಬುದಕ್ಕೆ **ವಿ-ಈರ-ಪ** ; ವಿ ಎಂದರೆ ಗರುಡ, ಈರ ಎಂದರೆ ವಾಯುದೇವರು. ಅವರಿಬ್ಬರನ್ನು ಸಹ ಪಾಲಿಸುವವನು ಎಂಬ ವಿಶೇಷಾರ್ಥ ಲಭಿಸುವುದು. ಗರುಡವಾಹನ ಲೋಕಪ್ರಸಿದ್ಧ, ವಾಯುವಾಹನ ಎಂಬುದು ವಿಷ್ಣುಸಹಸ್ರನಾಮದಲ್ಲಿ ಬಂದಿರುವ ಪದ. ಅವರಿಬ್ಬರನ್ನೂ ವಾಹವನ್ನಾಗಿ ಹೊಂದಿದ್ದರೂ, ಅವರನ್ನು ಆಶ್ರಯಿಸದೇ, ಅವರಿಗೆ ತಾನೇ ಸಂರಕ್ಷಕನಾಗಿರುವ ಹಿರಿಮೆಯನ್ನು ಹೊಂದಿದವನು ಎಂದು ಅರ್ಥವಾಗುವುದು. ಎಂದರೆ, ಅವನಿಗೆ ವಾಹನವಾಗುವ ಭಾಗ್ಯವನ್ನು ನೀಡಿ ಅನುಗ್ರಹಿಸಿದನೇ ಹೊರತು, ಅವರನ್ನು ಅವಲಂಬಿಸಿದವನಲ್ಲ ಎಂಬುದು ತಾತ್ಪರ್ಯ.

**ರಾಮಸ್ತುತಿ**

**ಖರತರನಿಶಿಚರದಹನ ಪರಾಮೃತ**
**ರಘುವರ ಮಾನದ ಭವ ಮಮ ಶರಣಮ್ ।**
**ಶುಭತಮಕಥಾಶಯ ಪರಮ ಸದೋದಿತ**
**ಜಗದೇಕಕಾರಣ ರಾಮ ರಮಾರಮಣ ॥ ೧೧ ॥**

**ಪ :** ಖರತರನಿಶಿಚರದಹನ, ಪರ, ಅಮೃತ, ರಘುವರ, ಮಾನದ, ಭವ, ಮಮ, ಶರಣಮ್, ಶುಭತಮಕಥಾಶಯ, ಪರಮ, ಸದೋದಿತ, ಜಗದೇಕಕಾರಣ, ರಾಮ, ರಮಾರಮಣ।

**ಅ :** ಶುಭತಮಕಥಾಶಯ, ಪರಮ, ಸದೋದಿತ, ಜಗದೇಕಕಾರಣ, ರಾಮ, ರಮಾರಮಣ, ಖರತರನಿಶಿಚರದಹನ, ಪರ, ಅಮೃತ, ರಘುವರ, ಮಾನದ, ಮಮ, ಶರಣಮ್, ಭವ।

ಪ್ರ.ಪ. : (**ಶುಭತಮಕಥಾಶಯ** – ಪರಮಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯವಾಗಿರುವವನೇ!; **ಪರಮ** – ಸರ್ವೋತ್ತಮನೇ!; **ಸದೋದಿತ** – ಸದಾ ಪ್ರಕಾಶಿತನಾದವನೇ!; **ಜಗದೇಕಕಾರಣ** – ಜಗತ್ತಿಗೆ ಮುಖ್ಯಕಾರಣನಾದವನೇ; ರಾಮ – ಶ್ರೀರಾಮನೇ!; **ರಮಾರಮಣ** – ಲಕ್ಷ್ಮೀಪತಿಯೇ;) **ಖರತರನಿಶಿಚರದಹನ** – ಅತ್ಯಂತ ಕ್ರೂರಿಗಳಾದ ರಾಕ್ಷಸರನ್ನು ಪುಡಿಗೈದವನೇ!; **ಪರ** – ಪರಿಪೂರ್ಣನೇ!; **ಅಮೃತ** – ಅಮರನೇ!; **ರಘುವರ** – ರಘುಶ್ರೇಷ್ಠನೇ!; **ಮಾನದ** – ಜ್ಞಾನನೀಡುವವನೇ; **ಮಮ** – ನನಗೆ; **ಶರಣಮ್** – ಆಸರೆ; **ಭವ** – ಆಗು.

**ಘೋರದೈತ್ಯರನ್ನು ಸುಟ್ಟ ನಾಶವಿರದ ದೇವನೆ**
**ರಾಘವೇಶ ಜ್ಞಾನದಾತ ಆಗು ನನಗೆ ಆಸರೆ ।**
**ಮಂಗಳಾತ್ಮ ಶಾಸ್ತ್ರಸಾರ ಪರಮ ನಿತ್ಯವ್ಯಕ್ತನೆ**
**ವಿಶ್ವಕೆಲ್ಲ ಮುಖ್ಯಕರ್ತ ರಾಮ ರಮೆಯ ರಮಣನೆ ॥ ೧೧ ॥**

**ಅನು : (ಪರಮಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯವಾಗಿರುವವನೇ! ಸರ್ವೋತ್ತಮನೇ! ಸದಾ ಪ್ರಕಾಶಿತನಾದವನೇ! ಜಗತ್ತಿಗೆ ಮುಖ್ಯಕಾರಣನಾದವನೇ! ಶ್ರೀರಾಮನೇ! ಲಕ್ಷ್ಮೀಪತಿಯೇ!) ಅತ್ಯಂತ ಕ್ರೂರಿಗಳಾದ ರಾಕ್ಷಸರನ್ನು ಪುಡಿಗೈದವನೇ! ಪರಿಪೂರ್ಣನೇ! ಅಮರನೇ! ರಘುಶ್ರೇಷ್ಠನೇ! ಜ್ಞಾನನೀಡುವವನೇ ನನಗೆ ಆಸರೆಯಾಗು.**

ವಿ : ೧. ಇದರಲ್ಲಿ ಶ್ರೀರಾಮರೂಪದ ಸ್ತೋತ್ರ ಬಂದಿದೆ. ಖರ ಹಾಗೂ ಅವನಿಗಿಂತ ಮಿಗಿಲಾದ ಮಹಾಕ್ರೂರಿಯಾದ ರಾವಣ ಕುಂಭಕರ್ಣ ಮೊದಲಾದ ಮಹಾದೈತ್ಯರನ್ನು ಶ್ರೀರಾಮ ಸಂಹರಿಸಿದ. ಆದ್ದರಿಂದಲೇ ಲೋಕವು ಸುಖದಿಂದಿರಲು ಸಾಧ್ಯವಾಯಿತು. ರಘುವಂಶ ಆದರಿಂದ ಪಾವನವಾಯಿತು. ಶ್ರೀರಾಮನು ಹನುಮಂತ ಮೊದಲಾದವರಿಗೆ ಜ್ಞಾನವನ್ನು ನೀಡಿದ.

೨. ವಾಯುದೇವರು ಅಮೃತ ಎನಿಸಿದರೆ ಅವರಿಂದ ಪೂಜಿಸಲಾದ ಶ್ರೀರಾಮ ಮುಖ್ಯಾಮೃತ[1] ಎನ್ನಿಸುವನು. ಮುಖ್ಯಾಮೃತ ಎಂದರೆ ಪರಾಮೃತ ಎಂದಾಗುವುದು.

೩. ಇಲ್ಲಿ **ಖರತರ** ಎಂಬುದಕ್ಕೆ ಖರ ಎಂಬ ದಂಡಕಾರಣ್ಯದಲ್ಲಿ ನೆಲೆಸಿದ್ದ ರಾಕ್ಷಸಮುಖಂಡನಿಗಿಂತ ಹೆಚ್ಚು ಬಲಶಾಲಿಗಳಾಗಿದ್ದ ಕುಂಭಕರ್ಣ ಮೊದಲಾದವರು ಎಂದರ್ಥ. ಕುಂಭಕರ್ಣನನ್ನು ಸಂಹರಿಸಲು ಶ್ರೀರಾಮನು ಖರಾದಿಗಳನ್ನು ಸಂಹರಿಸಲು ಪ್ರಯೋಗಿಸಿದ ಬಲಕ್ಕಿಂತ ಹೆಚ್ಚಿನ ಬಲವನ್ನು ಪ್ರಯೋಗಿಸಿದ ಎಂಬ ತಾತ್ಪರ್ಯನಿರ್ಣಯದ ವಿವರದ ಹಿನ್ನೆಲೆಯಲ್ಲಿ ಇದರ ಸ್ವಾರಸ್ಯ ಅರ್ಥವಾಗುವುದು[2].

೪. **ಖರತರನಿಶಿಚರದಹನಪರಾಮೃತ** ಎಂಬುದನ್ನು ಖರತರನಿಶಿಚರದಹನಪರ ಅಮೃತ ಎಂಬುದಾಗಿ ವಿಭಾಗ ಮಾಡಿ ಅರ್ಥಮಾಡಿಕೊಳ್ಳಬಹುದು. ಅತ್ಯಂತ ಕ್ರೂರಿಗಳಾದ ರಾಕ್ಷಸರನ್ನು ಸಂಹರಿಸುವ ಕಾರ್ಯದಲ್ಲಿ ಶ್ರೀರಾಮ ತನ್ನನ್ನು ತೊಡಗಿಸಿಕೊಂಡವನು; ಸ್ವತಃ ತಾನು ಅಮೃತಸ್ವರೂಪನಾದವನು ಎಂದು ಅರ್ಥವಾಗುವುದು.

೫. **ರಘುವರಮಾನದ** – ಎಂಬುದಾಗಿ ಒಂದೇ ಸಮಸ್ತಪದವನ್ನಾಗಿ ಇದನ್ನು ಅರ್ಥಮಾಡಿಕೊಳ್ಳಬಹುದು. ಆಗ ರಘು ಎಂಬುದಕ್ಕೆ ರಘುಶ್ರೇಷ್ಠನಾದ ದಶರಥ ಎಂದು, ವರ ಎಂಬುದಕ್ಕೆ ಅವನು ಕೈಕೇಯಿಗೆ ನೀಡಿದ ವರ ಎಂದೂ, ಮಾನದ ಎಂಬುದಕ್ಕೆ ಆದಕ್ಕೆ ಗೌರವನೀಡಿದವನು[3] ಎಂದೂ ಅರ್ಥವಾಗುವುದು; ಅದರಂತೆ ರಘುವರರು ಎಂಬುದಕ್ಕೆ ಲಕ್ಷ್ಮಣ, ಭರತ, ಶತ್ರುಘ್ನ ಎಂಬ ರಘುಶ್ರೇಷ್ಠರಿಗೆ ಮಾನದ, ತನ್ನ ಸೇವೆಗೆ ಅವಕಾಶವನ್ನು ನೀಡಿ, ವಿಶೇಷ ಸ್ಥಾನಮಾನಗಳನ್ನು ನೀಡಿದವನು ಎಂದು ಅರ್ಥವಾಗುವುದು.

---

೧. ಮುಖ್ಯಾಮೃತಃ ಸ್ವಯಂ ರಾಮಃ ಪರಮಾತ್ಮಾ ಸನಾತನಃ ॥ ಇತಿ ರಾಮಸಂಹಿತಾಯಾಮ್ ॥
– ಈಶಾವಾಸ್ಯಭಾಷ್ಯ (೧೮)

೨. ಯಾವದ್ಬಲೇನ ನ್ಯಹನತ್ ಖರಾದಿಕಾನ್ ನ ತಾವತೈವ ನ್ಯಪತತ್ ಸ ರಾಕ್ಷಸಃ।
ಅಥ ಪ್ರಹಸ್ಯಾತ್ಮಬಲೈಕದೇಶಂ ಪ್ರದರ್ಶಯನ್ ಬಾಣವರಾನ್ ಮುಮೋಚ ॥
ದ್ವಾಭ್ಯಾಂ ಸ ಬಾಹೂ ನಿಚಕರ್ತ ತಸ್ಯ ಪದದ್ವಯಂ ಚೈವ ತಥಾ ಶರಾಭ್ಯಾಮ್।
ಅಥಾಪರೇಣಾಸ್ಯ ಶಿರೋ ನಿಕೃತ್ಯ ಸಂಪ್ರಾಕ್ಷಿಪತ್ ಸಾಗರತೋಯ ಆಶು ॥
– ಮ.ಭಾ.ತಾ.ನಿ. (೮/೧೨೯, ೧೩೦)

೩. ಗುರ್ವರ್ಥೇ ತ್ಯಕ್ತರಾಜ್ಯಃ। – ಭಾಗವತ (೯/೮/೮೬)

**ಕೃಷ್ಣಸ್ತುತಿ**

**ಸುಲಲಿತತನುವರ ವರದ ಮಹಾಬಲ**
**ಯದುವರ ಪಾರ್ಥಪ ಭವ ಮಮ ಶರಣಮ್ ।**
**ಶುಭತಮಕಥಾಶಯ ಪರಮ ಸದೋದಿತ**
**ಜಗದೇಕಕಾರಣ ರಾಮ ರಮಾರಮಣ ॥ ೧೨ ॥**

**ಪ:** ಸುಲಲಿತತನುವರ, ವರದ, ಮಹಾಬಲ, ಯದುವರ, ಪಾರ್ಥಪ, ಭವ, ಮಮ, ಶರಣಮ್, ಶುಭತಮಕಥಾಶಯ, ಪರಮ, ಸದೋದಿತ, ಜಗದೇಕಕಾರಣ, ರಾಮ, ರಮಾರಮಣ।

**ಅ :** ಶುಭತಮಕಥಾಶಯ, ಪರಮ, ಸದೋದಿತ, ಜಗದೇಕಕಾರಣ, ರಾಮ, ರಮಾರಮಣ, ಸುಲಲಿತತನುವರ, ವರದ, ಮಹಾಬಲ, ಯದುವರ, ಪಾರ್ಥಪ, ಮಮ, ಶರಣಮ್, ಭವ।

**ಪ್ರ.ಪ. :** (**ಶುಭತಮಕಥಾಶಯ** – ಪರಮಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯವಾಗಿರುವವನೇ!; **ಪರಮ** – ಸರ್ವೋತ್ತಮನೇ!; **ಸದೋದಿತ** – ಸದಾ ಪ್ರಕಾಶಿತನಾದವನೇ!; **ಜಗದೇಕಕಾರಣ** – ಜಗತ್ತಿಗೆ ಮುಖ್ಯಕಾರಣನಾದವನೇ; ರಾಮ – ಶ್ರೀರಾಮನೇ!; **ರಮಾರಮಣ** – ಲಕ್ಷ್ಮೀಪತಿಯೇ;) **ಸುಲಲಿತತನುವರ** – ಅತ್ಯಂತ ಮನೋಹರವಾದ ಆಕೃತಿಯುಳ್ಳವನೇ; **ವರದ** – ವರ ನೀಡುವವನೇ; **ಮಹಾಬಲ** – ಮಹಾಬಲಶಾಲಿಯೇ!; **ಯದುವರ** – ಯದುಶ್ರೇಷ್ಠನೇ(ಶ್ರೀಕೃಷ್ಣ); **ಪಾರ್ಥಪ** – ಪಾಂಡವರನ್ನು ಸಲುಹಿದವನೇ; **ಮಮ** – ನನಗೆ; **ಶರಣಮ್** – ಆಸರೆ; **ಭವ** – ಆಗು.

**ಪರಮಲಲಿತದಿವ್ಯದೇಹ ವರವನೀವ ಸುಬಲನೆ**
**ವೃಷ್ಣಿವರ್ಯ ಪಾರ್ಥಪಾಲ ಆಗು ನನಗೆ ಆಸರೆ।**
**ಮಂಗಳಾತ್ಮ ಶಾಸ್ತ್ರಸಾರ ಪರಮ ನಿತ್ಯವ್ಯಕ್ತನೆ।**
**ವಿಶ್ವಕೆಲ್ಲ ಮುಖ್ಯಕರ್ತ ರಾಮ ರಮೆಯ ರಮಣನೆ ॥ ೧೨ ॥**

**ಅನು :** (ಪರಮಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯವಾಗಿರುವವನೇ! ಸರ್ವೋತ್ತಮನೇ! ಸದಾ ಪ್ರಕಾಶಿತನಾದವನೇ! ಜಗತ್ತಿಗೆ ಮುಖ್ಯಕಾರಣನಾದವನೇ! ಶ್ರೀರಾಮನೇ! ಲಕ್ಷ್ಮೀಪತಿಯೇ!) ಅತ್ಯಂತ ಮನೋಹರವಾದ ಆಕೃತಿಯುಳ್ಳವನೇ! ವರ ನೀಡುವವನೇ! ಮಹಾಬಲಶಾಲಿಯೇ! ಯದುಶ್ರೇಷ್ಠನೇ(ಶ್ರೀಕೃಷ್ಣ), ಪಾಂಡವರನ್ನು ಸಲುಹಿದವನೇ! ನನಗೆ ಆಸರೆಯಾಗು.

ವಿ: ೧. ಶ್ರೀಕೃಷ್ಣಾವತಾರದ ಸ್ತುತಿ ಇದರಲ್ಲಿದೆ. ಶ್ರೀಕೃಷ್ಣನದು ಅತ್ಯಂತ ಮನೋಹರವಾದ, ವಿಶ್ವರಂಜಕವಾದ ಸಾಕ್ಷಾನ್ಮಥಮನ್ಮಥ ಎನ್ನಿಸಿದ ಅದ್ಭುತ ರೂಪ ಎಂಬ ನೆಲೆಯಲ್ಲಿ ಸುಲಲಿತತನುವರ ಎಂಬ ಇಲ್ಲಿಯ ಪದಕ್ಕೆ ವಿಶೇಷಾರ್ಥವನ್ನು ತಿಳಿಯಬೇಕು.

೨. ವರದ ಎಂಬುದಕ್ಕೆ ವರವನ್ನು ನೀಡಿದವನು ಹಾಗೂ ದೈತ್ಯರಿಗಿತ್ತ ವರಗಳನ್ನು ನಾಶಮಾಡಿದವನು ಎಂಬ ಎರಡೂ ಅರ್ಥಗಳು ವಿಹಿತ: **ವರದೇಶವರಪ್ರದಂ** (೧/೧) ಎಂಬಲ್ಲಿ ಹೇಗೋ ಹಾಗೆ.

೩. **ಸುಲಲಿತತನುವರವರದ** ಎಂಬುದಾಗಿ ಒಂದೇ ಸಮಸ್ತಪದವನ್ನಾಗಿ ಅನ್ವಯಿಸಿ-ಕೊಂಡಾಗ, ಇದಕ್ಕೆ ತನಗೆ ಗಂಧಾರ್ಪಣೆ ಮಾಡಿದ ತ್ರಿವಕ್ರೆಯನ್ನು ಶ್ರೀಕೃಷ್ಣ ಅನುಗ್ರಹಿಸಿ ಅವಳ ಗೂನನ್ನು ಪರಿಹರಿಸಿದ. ಅದರಂತೆ ತನಗೆ ಶರಣಾದ ಜಾಂಬವಂತನ ವೃದ್ಧಾಪ್ಯವನ್ನು ಪರಿಹರಿಸಿ ತಾರುಣ್ಯವನ್ನು ನೀಡಿದ ಎಂಬ ವಿಶೇಷಾಂಶ ಸೂಚಿತವಾಗುವುದು. ಅದರಂತೆ ಘಂಟಾಕರ್ಣ ಹಾಗೂ ಕರ್ಣ ಎಂಬ ಪಿಶಾಚಿಗಳಿಗೆ ದಿವ್ಯರೂಪನೀಡಿದ ಪ್ರಸಂಗ ಮೊದಲಾದವುಗಳು ಸಹ ಇದರಿಂದ ಸೂಚಿತವಾಗುವವು.

೪. ಶ್ರೀಕೃಷ್ಣನು ಮಹಾಬಲ ಎಂದರೆ ಒಂದೇ ಕೈಯಿಂದ ಗೋವರ್ಧನಗಿರಿಯನ್ನು ಎತ್ತಿ. ಗೋವರ್ಧನಧಾರಿ ಎನ್ನಿಸಿದವನು, ಒಬ್ಬನೇ ಕಾಲಯವನನ ಮೂರುಕೋಟಿ ಅಕ್ಷೋಹಿಣೀ ಸೇನೆಯನ್ನು ಸಂಹರಿಸಿದವನು. ಜರಾಸಂಧನ ಒಟ್ಟು ನಾನ್ನೂರಾ ಹದಿನಾಲ್ಕು (೨೩x೧೮=೪೧೪) ಅಕ್ಷೋಹಿಣೀಸೇನೆಯನ್ನು ಸದೆಬಡಿದವನು.

೫. **ಯದುವರಪಾರ್ಥಪ** ಎಂಬುದನ್ನು ಒಂದೇ ಸಮಸ್ತಪದವನ್ನಾಗಿ ಓದಿಕೊಂಡಾಗ, ಯದುವರರನ್ನು, ಪಾಂಡವರನ್ನು, ವಿಶೇಷವಾಗಿ ರಕ್ಷಣೆ ಮಾಡಿದವನು ಎಂದು ಅರ್ಥವಾಗುವುದು. ಅದರಲ್ಲೂ ಯದುವರ ಎಂದರೆ ಉದ್ಧವ, ಪಾರ್ಥ ಎಂದರೆ ಅರ್ಜುನ, ಅವರಿಬ್ಬರಿಗೂ ಸಹ ವಿಶೇಷ ಉಪದೇಶವನ್ನು ನೀಡಿ, ಉದ್ಧರಿಸಿದವನು ಎಂಬ ವಿಶೇಷಾರ್ಥ ಲಭಿಸುವುದು. ಉದ್ಧವನಿಗೆ ಎರಡು ಬಾರಿ ಉಪದೇಶ ಮಾಡಿದ ವಿವರ ಶ್ರೀಮದ್ಭಾಗವತತಾತ್ಪರ್ಯನಿರ್ಣಯದಲ್ಲಿದೆ. ಅರ್ಜುನನಿಗೂ ಸಹ ಗೀತೆ ಹಾಗೂ ಅನುಗೀತೆಗಳನ್ನು ಉಪದೇಶ ಮಾಡಿದ ವಿವರ ಮಹಾಭಾರತದಲ್ಲಿದೆ. ಅವರಿಗೆ ತತ್ತ್ವಾಮೃತವನ್ನು ನೀಡಿ ಪಾಲಿಸಿದವನು ಎಂದು ಭಾವ. ಶ್ರೀಕೃಷ್ಣನ ರಕ್ಷಣೆಯಿಂದಾಗಿ ಯಾದವರು ಹಾಗೂ ಪಾಂಡವರು ಸಕಲರಿಗೂ ಅಜೇಯರಾಗಿದ್ದರು ಎಂಬ ವಿಶೇಷಾಂಶ ಮಹಾಭಾರತ, ಭಾಗವತಗಳಲ್ಲಿದೆ.

೬. ಶ್ರೀಕೃಷ್ಣ ಯಾದವ ಕೃಷ್ಣ ಎನ್ನಿಸಿ ಯದುಕುಲವನ್ನು ಉದ್ಧರಿಸಿದ. ಅರ್ಜುನನಿಗೆ ಗೀತೋಪದೇಶವನ್ನು ಮಾಡಿ ಜ್ಞಾನ ನೀಡಿದ. ಹೀಗೆ ಅನೇಕ ರೀತಿ ಕೃಷ್ಣನ ವಿಶೇಷವಾದ ಹಿರಿಮೆಗಳು ಇಲ್ಲಿ ನಿರೂಪಿತವಾಗಿವೆ.

### ಬುದ್ಧಸ್ತುತಿ

**ದಿತಿಸುತಮೋಹನ ವಿಮಲವಿಬೋಧನ**
**ಪರಗುಣ ಬುದ್ಧ ಹೇ ಭವ ಮಮ ಶರಣಮ್ ।**
**ಶುಭತಮಕಥಾಶಯ ಪರಮ ಸದೋದಿತ**
**ಜಗದೇಕಕಾರಣ ರಾಮ ರಮಾರಮಣ ॥ ೧೩ ॥**

**ಪ** : ದಿತಿಸುತಮೋಹನ, ವಿಮಲ, ವಿಬೋಧನ, ಪರಗುಣ, ಬುದ್ಧ, ಹೇ, ಭವ, ಮಮ, ಶರಣಮ್, ಶುಭತಮಕಥಾಶಯ, ಪರಮ, ಸದೋದಿತ, ಜಗದೇಕಕಾರಣ, ರಾಮ, ರಮಾರಮಣ ।

**ಅ** : ಶುಭತಮಕಥಾಶಯ, ಪರಮ, ಸದೋದಿತ, ಜಗದೇಕಕಾರಣ, ರಾಮ, ರಮಾರಮಣ, ದಿತಿಸುತಮೋಹನ, ವಿಮಲ, ವಿಬೋಧನ, ಪರಗುಣ, ಬುದ್ಧ, ಹೇ, ಮಮ, ಶರಣಮ್, ಭವ, ।

**ಪ್ರ.ಪ.** : (**ಶುಭತಮಕಥಾಶಯ** – ಪರಮಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯವಾಗಿರುವವನೇ!; **ಪರಮ** – ಸರ್ವೋತ್ತಮನೇ!; **ಸದೋದಿತ** – ಸದಾ ಪ್ರಕಾಶಿತನಾದವನೇ!; **ಜಗದೇಕಕಾರಣ** – ಜಗತ್ತಿಗೆ ಮುಖ್ಯಕಾರಣನಾದವನೇ; ರಾಮ – ಶ್ರೀರಾಮನೇ!; **ರಮಾರಮಣ** – ಲಕ್ಷ್ಮೀಪತಿಯೇ;) **ದಿತಿಸುತಮೋಹನ** – ದೈತ್ಯನನ್ನು ಮೋಹಕ್ಕೊಳಗಾಗಿಸಿದವನೇ!; **ವಿಮಲ** – ನಿರ್ದೋಷನೇ!; **ವಿಬೋಧನ** – ವಿರುದ್ಧವೆಂಬಂತೆ ಬೋಧಿಸಿದವನೇ!; **ಪರಗುಣ** – ಶ್ರೇಷ್ಠಗುಣಗಳಿಂದ ಕೂಡಿದವನೇ!; **ಹೇ** – ಹೇ; **ಬುದ್ಧ** – ಬುದ್ಧನೇ!; **ಮಮ** – ನನಗೆ; **ಶರಣಮ್** – ಆಸರೆ; **ಭವ** – ಆಗು.

**ದೈತ್ಯತತಿಗೆ ಮೋಹವಿತ್ತು ವಿಬುಧತತಿಗೆ ಜ್ಞಾನವಿತ್ತ**
**ಪೂರ್ಣಗುಣನೆ ಬುದ್ಧದೇವ ಆಗು ನನಗೆ ಆಸರೆ ।**
**ಮಂಗಳಾತ್ಮ ಶಾಸ್ತ್ರಸಾರ ಪರಮ ನಿತ್ಯವ್ಯಕ್ತನೆ**
**ವಿಶ್ವಕೆಲ್ಲ ಮುಖ್ಯಕರ್ತ ರಾಮ ರಮೆಯ ರಮಣನೆ ॥ ೧೩ ॥**

**ಅನು** : **(ಪರಮಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯವಾಗಿರುವವನೇ! ಸರ್ವೋತ್ತಮನೇ! ಸದಾ ಪ್ರಕಾಶಿತನಾದವನೇ! ಜಗತ್ತಿಗೆ ಮುಖ್ಯಕಾರಣನಾದವನೇ! ಶ್ರೀರಾಮನೇ! ಲಕ್ಷ್ಮೀಪತಿಯೇ!) ದೈತ್ಯನನ್ನು ಮೋಹಕ್ಕೊಳಗಾಗಿಸಿದವನೇ! ನಿರ್ದೋಷನೇ! ವಿರುದ್ಧವೆಂಬಂತೆ ಬೋಧಿಸಿದವನೇ! ಶ್ರೇಷ್ಠಗುಣಗಳಿಂದ ಕೂಡಿದವನೇ! ಹೇ ಬುದ್ಧನೇ! ನನಗೆ ಆಸರೆಯಾಗು.**

ವಿ : ೧. ಶ್ರೀಹರಿಯ ಬುದ್ಧರೂಪದ ವರ್ಣನೆ ಇದರಲ್ಲಿದೆ. ದುಷ್ಟರಾದ ಅಸುರರನ್ನು ಶ್ರೀಹರಿಯು ಬುದ್ಧರೂಪದಿಂದ ಮೋಹನಗೊಳಿಸಿದ ಎಂದರ್ಥ. ಈ ಬಗ್ಗೆ ಹೆಚ್ಚಿನ ವಿವರಗಳು ಶ್ರೀಮದ್ಭಾಗವತಮಹಾಪುರಾಣದಲ್ಲೂ, ಶ್ರೀಮದಾಚಾರ್ಯರ ಭಾಗವತತಾತ್ಪರ್ಯನಿರ್ಣಯದಲ್ಲೂ, ಮಹಾಭಾರತತಾತ್ಪರ್ಯನಿರ್ಣಯದಲ್ಲೂ ನಿರೂಪಿತವಾಗಿವೆ.

೨. ಬುದ್ಧರೂಪದಿಂದ ಹಾಗೆ ಉಪದೇಶಿಸಿದ ಬೌದ್ಧ ಮತವು ಅಸುರರಿಗೆ ವೇದವಿರುದ್ಧವಾದ ಉಪದೇಶವಾಗಿ ಅವರ ಪತನಕ್ಕೆ ಕಾರಣವಾಯಿತು. ಆದರೆ ಅದನ್ನೇ ಶ್ರೀಹರಿಯು ಪ್ರಶಾಂತವಿದ್ಯೆ ಎಂಬುದಾಗಿ ದೇವತೆಗಳಿಗೆ ಉಪದೇಶಿಸಿದ್ದು, ಅವರ ಕಲ್ಯಾಣಕ್ಕೆ ಕಾರಣವಾಯಿತು. ಎಂಬ ವಿವರ **ದಿತಿಸುತಮೋಹನ, ವಿಮಲವಿಬೋಧನ** ಎಂಬ ಪದಗಳಿಂದ ಸೂಚಿತ.

೩. **ವಿಮಲವಿಬೋಧನ** – ಎಂದರೆ ವಿಮಲರು ಸ್ವರೂಪತಃ ನಿರ್ದೋಷರಾದಂತಹ ದೇವತೆಗಳಿಗೆ ವಿ ಎಂದರೆ ವಿಶೇಷವಾದ ಬೋಧನವನ್ನು ಮಾಡಿದವನು, ಅಥವಾ **ವಿಮಲಾನ್ ವಿಬೋಧಂ ನಯತಿ ಪ್ರಾಪಯತಿ** ಎಂದು ಅರ್ಥಮಾಡಿಕೊಳ್ಳಬೇಕು.

೪. **ಪರಗುಣ** – ಪರ ಎಂದರೆ ಈ ಹಿಂದೆ ತಿಳಿಸಿರುವಂತೆ ಪೂರ್ಣ ಎಂದರ್ಥ. ಶ್ರೀಹರಿಯು ಪೂರ್ಣನಾಗಿರುವುದು ಈ ಪ್ರಸಂಗದಿಂದಲೂ ತಿಳಿಯುವುದು ಎಂದು ಭಾವ.

೨. ಬುದ್ಧರೂಪದ ಶ್ರೀಹರಿಯು ಹೀಗೆ ಮಾಡುವ ಮೂಲಕ ತಾನು **ಪರಗುಣ** ಎನ್ನಿಸಿದ.

## ಕಲ್ಕಿಸ್ತುತಿ

**ಕಲಿಮಲಹುತವಹ ಸುಭಗ ಮಹೋತ್ಸವ**
**ಶರಣದ ಕಲ್ಕೀಶ ಭವ ಮಮ ಶರಣಮ್ ।**
**ಶುಭತಮಕಥಾಶಯ ಪರಮ ಸದೋದಿತ**
**ಜಗದೇಕಕಾರಣ ರಾಮ ರಮಾರಮಣ** ॥ ೧೪ ॥

**ಪ** : ಕಲಿಮಲಹುತವಹ, ಸುಭಗ, ಮಹೋತ್ಸವ, ಶರಣದ, ಕಲ್ಕೀಶ, ಭವ, ಮಮ, ಶರಣಮ್, ಶುಭತಮಕಥಾಶಯ, ಪರಮ, ಸದೋದಿತ, ಜಗದೇಕಕಾರಣ, ರಾಮ, ರಮಾರಮಣ।

**ಅ** : ಶುಭತಮಕಥಾಶಯ, ಪರಮ, ಸದೋದಿತ, ಜಗದೇಕಕಾರಣ, ರಾಮ, ರಮಾರಮಣ, ಕಲಿಮಲಹುತವಹ, ಸುಭಗ, ಮಹೋತ್ಸವ, ಶರಣದ, ಕಲ್ಕೀಶ, ಮಮ, ಶರಣಮ್, ಭವ।

**ಪ್ರ.ಪ. : (ಶುಭತಮಕಥಾಶಯ** – ಪರಮಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯವಾಗಿರುವವನೇ!; **ಪರಮ** – ಸರ್ವೋತ್ತಮನೇ!; **ಸದೋದಿತ** – ಸದಾ ಪ್ರಕಾಶಿತನಾದವನೇ!; **ಜಗದೇಕಕಾರಣ** – ಜಗತ್ತಿಗೆ ಮುಖ್ಯಕಾರಣನಾದವನೇ; ರಾಮ – ಶ್ರೀರಾಮನೇ!; **ರಮಾರಮಣ** – ಲಕ್ಷ್ಮೀಪತಿಯೇ;) **ಕಲಿಮಲಹುತವಹ** – ಕಲಿಯ ದೋಷವನ್ನು ಭಸ್ಮ ಮಾಡುವ ಅಗ್ನಿಯಂತಹವನೇ; **ಸುಭಗ** – ಅತ್ಯಂತ ಶ್ರೇಷ್ಠಗುಣಪೂರ್ಣನೇ!; **ಮಹೋತ್ಸವ** – ಮಹೋತ್ಸವವನ್ನುಂಟು ಮಾಡಿದವನೇ!; **ಶರಣದ** – ರಕ್ಷಣೆ ನೀಡುವವನೇ!; **ಕಲ್ಕೀಶ** – ಕಲ್ಕಿ ಎಂಬ ಸ್ವಾಮಿಯೇ!; **ಮಮ** – ನನಗೆ; **ಶರಣಮ್** – ಆಸರೆ; **ಭವ** – ಆಗು.

**ಕಲಿಯ ಮಲವ ದಹಿಪ ದೇವ ಪರಮ ಪುರುಷವಾರಿಧೆ**
**ಶರಣಪಾಲ ಕಲ್ಕಿದೇವ ಆಗು ನನಗೆ ಆಸರೆ ।**
**ಮಂಗಳಾತ್ಮ ಶಾಸ್ತ್ರಸಾರ ಪರಮ ನಿತ್ಯವ್ಯಕ್ತನೆ**
**ವಿಶ್ವಕೆಲ್ಲ ಮುಖ್ಯಕರ್ತ ರಾಮ ರಮೆಯ ರಮಣನೆ ॥ ೧೪ ॥**

**ಅನು : (ಪರಮಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯವಾಗಿರುವವನೇ! ಸರ್ವೋತ್ತಮನೇ! ಸದಾ ಪ್ರಕಾಶಿತನಾದವನೇ! ಜಗತ್ತಿಗೆ ಮುಖ್ಯಕಾರಣನಾದವನೇ! ಶ್ರೀರಾಮನೇ! ಲಕ್ಷ್ಮೀಪತಿಯೇ!) ಕಲಿಯ ದೋಷವನ್ನು ಭಸ್ಮ ಮಾಡುವ ಅಗ್ನಿಯಂತಹವನೇ! ಅತ್ಯಂತ ಶ್ರೇಷ್ಠಗುಣಪೂರ್ಣನೇ! ಮಹೋತ್ಸವವನ್ನುಂಟು ಮಾಡಿದವನೇ! ರಕ್ಷಣೆ ನೀಡುವವನೇ! ಕಲ್ಕಿ ಎಂಬ ಸ್ವಾಮಿಯೇ! ನನಗೆ ಆಸರೆಯಾಗು.**

ವಿ : ೧. ಇಲ್ಲಿ ಕಲ್ಕಿರೂಪದ ಶ್ರೀಹರಿಯ ದಶಾವತಾರಗಳಲ್ಲಿ ಕೊನೆಯದಾದ ಸ್ತುತಿ ಬಂದಿದೆ.

೨. ಕಲ್ಕೀಶ – ಹರಿಯ ಅನುಗ್ರಹದಿಂದ ಕಲಿಯನ್ನು ನಿಗ್ರಹ ಮಾಡುವ ಸಾಮರ್ಥ್ಯ ವಾಯುದೇವರಿಗೂ ಇರುವುದರಿಂದ ಕಲ್ಕಿ ಎಂಬ ಹೆಸರು ಅವರಿಗೂ ಇದೆ ಎಂಬುದು ವಿಶೇಷ: **ಪಾಹಿ ಕಲ್ಕಿ ಸುತೇಜ ದಾಸನೇ** (ಹರಿಕಥಾಮೃತಸಾರ. ೨೪/೨೩). ಆದ್ದರಿಂದ ಶ್ರೀಹರಿಗೆ ಕಲ್ಕೀಶ ಎಂಬ ಹೆಸರು ಉಚಿತವಾಗಿದೆ.

೩. ಕಲಿಯು ಬ್ರಹ್ಮವರದಿಂದಾಗಿ ರುದ್ರಾದಿದೇವತೆಗಳಿಂದಲೂ ಸಹ ಅಜೇಯ, ಅವಧ್ಯ ಎನ್ನಿಸಿದವನು. ಅಂತಹ ಮಹಾದೈತ್ಯನನ್ನು ಶ್ರೀಹರಿ ಬೆಂಕಿಯಂತೆ ಸುಟ್ಟು ಬೂದಿಮಾಡುವ ಮಹಾಸಾಮರ್ಥ್ಯವನ್ನು ಉಳ್ಳವನು ಎಂಬುದು ಕಲಿಮಲಹುತವಹ ಎಂಬ ಪದದಿಂದ ಸೂಚಿತ.

೪. **ಕಲಿಮಲಹುತವಹ** – ಎಂದರೆ ಕಲಿಯ ಪ್ರಭಾವದಿಂದಾಗಿ ಉಂಟಾಗುವ ಸಕಲ ದೋಷಗಳು ಸಂಪೂರ್ಣವಾಗಿ ಪರಿಹರಿಸುವವನು ಶ್ರೀಹರಿ ಎಂದರ್ಥ.

೫. **ಸುಭಗ** – ಎಂದರೆ ಮಂಗಳಕರವಾದ, ಜ್ಞಾನಾದಿ ಷಡ್ಗುಣಗಳ ಸಂಕೇತವಾದ ಭಗವನ್ನು ಹೊಂದಿದವನು ಎಂದರ್ಥ. ಶೋಭನಃ ಭಗಃ ಯಸ್ಯ[೧].

೬. **ಶರಣದ** – ಕಲಿಬಾಧೆಯಿಂದ ನೊಂದವರಿಗೆ ಅವನನ್ನು ಸಂಹರಿಸುವ ಮೂಲಕ ಸಂಪೂರ್ಣವಾದ ರಕ್ಷಣೆಯನ್ನು ನೀಡಿದ ಕಾರಣದಿಂದ ಕಲ್ಕಿರೂಪಕ್ಕೆ ಶರಣದ ಎಂಬ ವಿಶೇಷಣ ಅತ್ಯಂತ ಸಮುಚಿತ.

**ಅಖಿಲಜನಿವಿಲಯ ಪರಸುಖಕಾರಣ**
**ಪರ ಪುರುಷೋತ್ತಮ ಭವ ಮಮ ಶರಣಮ್ ।**
**ಶುಭತಮಕಥಾಶಯ ಪರಮ ಸದೋದಿತ**
**ಜಗದೇಕಕಾರಣ ರಾಮ ರಮಾರಮಣ ॥ ೧೫ ॥**

**ಪ** : ಅಖಿಲಜನಿವಿಲಯ, ಪರಸುಖಕಾರಣ, ಪರ, ಪುರುಷೋತ್ತಮ, ಭವ, ಮಮ, ಶರಣಮ್, ಶುಭತಮಕಥಾಶಯ, ಪರಮ, ಸದೋದಿತ, ಜಗದೇಕಕಾರಣ, ರಾಮ, ರಮಾರಮಣ।

**ಅ** : ಶುಭತಮಕಥಾಶಯ, ಪರಮ, ಸದೋದಿತ, ಜಗದೇಕಕಾರಣ, ರಾಮ, ರಮಾರಮಣ, ಅಖಿಲಜನಿವಿಲಯ, ಪರಸುಖಕಾರಣ, ಪರ, ಪುರುಷೋತ್ತಮ, ಮಮ, ಶರಣಮ್, ಭವ।

**ಪ್ರ.ಪ.** : (**ಶುಭತಮಕಥಾಶಯ** – ಪರಮಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯವಾಗಿರುವವನೇ!; **ಪರಮ** – ಸರ್ವೋತ್ತಮನೇ!; **ಸದೋದಿತ** – ಸದಾ ಪ್ರಕಾಶಿತನಾದವನೇ!; **ಜಗದೇಕಕಾರಣ** – ಜಗತ್ತಿಗೆ ಮುಖ್ಯಕಾರಣನಾದವನೇ; ರಾಮ – ಶ್ರೀರಾಮನೇ!; **ರಮಾರಮಣ** – ಲಕ್ಷ್ಮೀಪತಿಯೇ;) **ಅಖಿಲಜನಿವಿಲಯ** – ಸಕಲರ ಹುಟ್ಟುಸಾವುಗಳಿಗೆ ಕಾರಣನೇ!; **ಪರಸುಖಕಾರಣ** – ಪರಸುಖವಾದ ಮೋಕ್ಷಕ್ಕೆ ಕಾರಣನೇ!; **ಪರ** – ಸರ್ವೋತ್ತಮನೇ!; **ಪುರುಷೋತ್ತಮ** – ಪುರುಷೋತ್ತಮನೇ!; **ಮಮ** – ನನಗೆ; **ಶರಣಮ್** – ಆಸರೆ; **ಭವ** – ಆಗು.

**ಜಗದಸೃಷ್ಟಿ ಅದರ ನಾಶ ಪರಮ ಸುಖದ ಕಾರಣ**
**ಸರ್ವಶ್ರೇಷ್ಠ ನಿತ್ಯಫಲದ ಆಗು ನನಗೆ ಆಸರೆ।**

---

೧. 'ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ।
ಜ್ಞಾನವೈರಾಗ್ಯಯೋಶ್ಚೈವ ಷಣ್ಣಾಂ ಭಗ ಇತೀರಣಾ'। – ಛಾಂದೋಗ್ಯಭಾಷ್ಯ(೩/೫)

**ಮಂಗಳಾತ್ಮ ಶಾಸ್ತ್ರಸಾರ ಪರಮ ನಿತ್ಯವ್ಯಕ್ತನೆ**
**ವಿಶ್ವಕೆಲ್ಲ ಮುಖ್ಯಕರ್ತ ರಾಮ ರಮೆಯ ರಮಣನೆ ॥ ೧೫ ॥**

**ಅನು : (ಪರಮಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯ-ವಾಗಿರುವವನೇ! ಸರ್ವೋತ್ತಮನೇ! ಸದಾ ಪ್ರಕಾಶಿತನಾದವನೇ! ಜಗತ್ತಿಗೆ ಮುಖ್ಯಕಾರಣನಾದವನೇ! ಶ್ರೀರಾಮನೇ! ಲಕ್ಷ್ಮೀಪತಿಯೇ!) ಸಕಲರ ಹುಟ್ಟುಸಾವುಗಳಿಗೆ ಕಾರಣನೇ! ಪರಸುಖವಾದ ಮೋಕ್ಷಕ್ಕೆ ಕಾರಣನೇ! ಸರ್ವೋತ್ತಮನೇ! ಪುರುಷೋತ್ತಮನೇ! ನನಗೆ ಆಸರೆಯಾಗು.**

ವಿ : ೧. ಶ್ರೀಹರಿಯ ಸಕಲಅವತಾರಗಳ ಒಟ್ಟು ಹಿರಿಮೆಯ ಸಾರ ಇದರಲ್ಲಿದೆ.

೨. **ಅಖಿಲಜನಿವಿಲಯ** – ಸಕಲರ ಹುಟ್ಟು, ಸಾವುಗಳಿಗೆ ಕಾರಣನಾದವನು ಶ್ರೀಹರಿ. ಪರಸುಖಕಾರಣ – ಪರಸುಖ ಎಂದರೆ ಮೋಕ್ಷಸುಖ, ನಿತ್ಯಸುಖ, ಅದರ ಪ್ರಾಪ್ತಿಗೆ ಕಾರಣನಾದವನು ಶ್ರೀಹರಿ ಎಂದರ್ಥ.

೩. **ಅಖಿಲಜನಿವಿಲಯಪರಸುಖಕಾರಣ** ಎಂದು ಒಂದೇ ಸಮಸ್ತಪದವನ್ನಾಗಿ ಇದನ್ನು ನೋಡಿದಾಗ, ಸಕಲರ ಉತ್ಪತ್ತಿ, ವಿನಾಶ, ಶ್ರೇಷ್ಠವಾದ ಸುಖರೂಪದ ಮುಕ್ತಿಯವರೆಗೆ ಎಲ್ಲದಕ್ಕೂ ಶ್ರೀಹರಿಯೇ ಮುಖ್ಯಕಾರಣ ಎಂಬ ವಿಶೇಷಾಂಶ ತಿಳಿಯುವುದು. ತ್ರಿವಿಧಜೀವರಿಗೆ ಯಥಾಯೋಗ್ಯವಾಗಿ ನಿತ್ಯಸಂಸಾರರೂಪವಾದ 'ಜನಿ'ಯನ್ನು, ತಾಮಸರಿಗೆ ತಮಃಪ್ರಾಪ್ತಿರೂಪವಾದ ವಿನಾಶವನ್ನು, ಸಾತ್ತ್ವಿಕರಿಗೆ ಪರಸುಖದ ನೆಲೆಯಾದ ಮೋಕ್ಷವನ್ನು ನೀಡುವವನು ಎಂದು ಇದನ್ನು ಅರ್ಥಮಾಡಿಕೊಳ್ಳಬಹುದು.

೪. **ಅಖಿಲಜನಿವಿಲಯಪರಸುಖಕಾರಣಪರ** – ಎಂದು ಒಂದೇ ಸಮಸ್ತಪದವನ್ನಾಗಿ ಓದಿಕೊಂಡಾಗ, ಶ್ರೀಹರಿಯ ಅವತಾರದ ಮುಖ್ಯಕಾರ್ಯ ವಿವಿಧಜೀವರಿಗೆ ಅವರವರಿಗೆ ವಿಹಿತವಾದ ಗತಿಯನ್ನು ನೀಡುವುದೇ ಆಗಿದೆ : **ಭೂತ್ಯೈ ನಿಜಾಶ್ರಿತಜನಸ್ಯ** (ಮ.ಭಾ. ತಾ.ನಿ. ೧/೩); ಇತ್ಯಾದಿ.

೫. ಪರ ಎಂಬುದಕ್ಕೆ **ಹರಿರೇವ ಪರಃ** ಎಂಬಲ್ಲಿ ಹೇಗೋ ಹಾಗೆ ಅನೇಕಾರ್ಥಗಳನ್ನು ತಿಳಿಯಬೇಕು.

೬. **ಪುರುಷೋತ್ತಮ** ಎಂಬುದು ಭಗವದ್ಗೀತೆಯ ೧೫ನೆಯ ಅಧ್ಯಾಯದ ಕೊನೆಯ ಐದು ಶ್ಲೋಕಗಳಲ್ಲಿ ಬಂದಿರುವ ಶ್ರೀಹರಿಯ ಪುರುಷೋತ್ತಮತ್ತ್ವತತ್ತ್ವದ ಸಾರ[1].

---

[1]. **ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।**
**ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥**
**ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।**
**ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥**

೭. **ಅಖಿಲಜನಿವಿಲಯ, ಪರ, ಸುಖ, ಕಾರಣ, ಪರ, ಪುರುಷ, ಉತ್ತಮ** ಎಂಬುದಾಗಿಯೂ ಇದನ್ನು ವಿಭಾಗ ಮಾಡಿ ಅರ್ಥಮಾಡಿಕೊಳ್ಳಬಹುದು.

**ಇತಿ ತವ ನುತಿವರಸತತರತೇರ್ಭವ**
**ಸುಶರಣಮುರುಸುಖತೀರ್ಥಮುನೇರ್ಭಗವನ್ ।**
**ಶುಭತಮಕಥಾಶಯ ಪರಮ ಸದೋದಿತ**
**ಜಗದೇಕಕಾರಣ ರಾಮ ರಮಾರಮಣ ॥ ೧೬ ॥**

**॥ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ದ್ವಾದಶಸ್ತೋತ್ರೇ ನವಮೋಽಧ್ಯಾಯಃ॥**

**ಪ:** ಇತಿ, ತವ, ನುತಿವರಸತತರತೇಃ, ಭವ, ಸುಶರಣಮ್, ಉರುಸುಖತೀರ್ಥಮುನೇಃ, ಭಗವನ್, ಶುಭತಮಕಥಾಶಯ, ಪರಮ, ಸದೋದಿತ, ಜಗದೇಕಕಾರಣ, ರಾಮ, ರಮಾರಮಣ ।

**ಅ :** ಶುಭತಮಕಥಾಶಯ, ಪರಮ, ಸದೋದಿತ, ಜಗದೇಕಕಾರಣ, ರಾಮ, ರಮಾರಮಣ, ಭಗವನ್, ಇತಿ, ತವ, ನುತಿವರಸತತರತೇಃ, ಉರುಸುಖತೀರ್ಥಮುನೇಃ, ಸುಶರಣಮ್, ಭವ ।

**ಪ್ರ.ಪ. :** (**ಶುಭತಮಕಥಾಶಯ** – ಪರಮಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯವಾಗಿರುವವನೇ!; **ಪರಮ** – ಸರ್ವೋತ್ತಮನೇ!; **ಸದೋದಿತ** – ಸದಾ ಪ್ರಕಾಶಿತನಾದವನೇ!; **ಜಗದೇಕಕಾರಣ** – ಜಗತ್ತಿಗೆ ಮುಖ್ಯಕಾರಣನಾದವನೇ; ರಾಮ – ಶ್ರೀರಾಮನೇ!; **ರಮಾರಮಣ** – ಲಕ್ಷ್ಮೀಪತಿಯೇ;) **ಭಗವನ್** – ಭಗವಂತನೇ!; **ಇತಿ** – ಹೀಗೆ; **ತವ** – ನಿನ್ನ; **ನುತಿವರಸತತರತೇಃ** – ಶ್ರೇಷ್ಠ ಸ್ತೋತ್ರವನ್ನು ಸತತ ಮಾಡುವಲ್ಲಿ ಆಸಕ್ತರಾದ; **ಉರುಸುಖತೀರ್ಥಮುನೇಃ** – ಮಹಾನಂದತೀರ್ಥಮುನಿಗಳಿಗೆ; **ಸುಶರಣಮ್** – ಶ್ರೇಷ್ಠ ಆಸರೆಯಾಗಿ; ಭವ – ಆಗು.

**ಇಂತು ನಿನ್ನ ಸ್ತವನದಲ್ಲಿ ಪರಮರತಿಯ ಹೊಂದಿಹ**
**ಮಧ್ವರೆಂಬ ದಿವ್ಯಮುನಿಗೆ ಆಗು ನೀನು ಆಸರೆ ।**

---

ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ ।
ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥
ಯೋ ಮಾಮೇವಮಸಮ್ಮೂಢೋ ಜಾನಾತಿ ಪುರುಷೋತ್ತಮಮ್ ।
ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ ॥
ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾಽನಘ ।
ಏತದ್ಬುದ್ಧ್ವಾ ಬುದ್ಧಿಮಾನ್ ಸ್ಯಾತ್ ಕೃತಕೃತ್ಯಶ್ಚ ಭಾರತ ॥ – ಗೀತಾ (೧೫/೧೮-೨೦)

**ಮಂಗಳಾತ್ಮ ಶಾಸ್ತ್ರಸಾರ ಪರಮ ನಿತ್ಯವ್ಯಕ್ತನೆ**
**ವಿಶ್ವಕೆಲ್ಲ ಮುಖ್ಯಕರ್ತ ರಾಮ ರಮೆಯ ರಮಣನೆ ॥ ೧೬ ॥**

**॥ ದ್ವಾದಶಸ್ತೋತ್ರದ ಕನ್ನಡಪದ್ಯಾನುವಾದದಲ್ಲಿ ಒಂಭತ್ತನೆಯ ಅಧ್ಯಾಯ ಮುಕ್ತಾಯವಾಯಿತು ॥**

**ಅನು : (ಪರಮಮಂಗಳಕರವಾದ ಸದಾಗಮಗಳ ಮಹಾತಾತ್ಪರ್ಯ-ವಾಗಿರುವವನೇ! ಸರ್ವೋತ್ತಮನೇ! ಸದಾ ಪ್ರಕಾಶಿತನಾದವನೇ! ಜಗತ್ತಿಗೆ ಮುಖ್ಯಕಾರಣನಾದವನೇ! ಶ್ರೀರಾಮನೇ! ಲಕ್ಷ್ಮೀಪತಿಯೇ!) ಭಗವಂತನೇ! ಹೀಗೆ ನಿನ್ನ ಶ್ರೇಷ್ಠ ಸ್ತೋತ್ರವನ್ನು ಸತತ ಮಾಡುವಲ್ಲಿ ಆಸಕ್ತರಾದ ಮಹಾನಂದತೀರ್ಥಮುನಿಗಳಿಗೆ ಆಸರೆಯಾಗು.**

ವಿ : ೧. ಈ ಸ್ತೋತ್ರದ ಉಪಸಂಹಾರರೂಪವಾದ ಈ ಶ್ಲೋಕದಲ್ಲಿ ಶ್ರೀಹರಿಯ ದಶಾವತಾರಗಳನ್ನೊಳಗೊಂಡಂತೆ ಇತರ ಸಕಲ ಅವತಾರಗಳ ಒಟ್ಟು ಹಿರಿಮೆಯ ಸಂಗ್ರಹ [೧]ಬಂದಿದೆ. ಹೀಗೆ ಹರಿಯನ್ನು ಸ್ತುತಿಸುವ ಕಾರ್ಯದಲ್ಲಿ ಸದಾ ನಲಿಯುವ ಆನಂದತೀರ್ಥಮುನಿಗಳು ಎಂಬ ತಮಗೆ ಭಗವಂತನಾದ ಶ್ರೀಹರಿಯು ವಿಶೇಷವಾಗಿ ಆಸರೆಯಾಗಲಿ ಎಂಬ ಪ್ರಾರ್ಥನೆ ಇದರಲ್ಲಿದೆ.

೨. ಶ್ರೀಮದಾಚಾರ್ಯರು ಶ್ರೀಹರಿಯ ಸ್ತೋತ್ರದಲ್ಲಿ ಸತತ ಆಸಕ್ತರಾದವರು ಎಂಬ ಮಾತಿನಲ್ಲಿ, ಅವರು ಸದಾ ಭಗವದ್ಧರ್ಮದಲ್ಲಿ ನಿರತರಾದ ಶುದ್ಧಭಾಗವತಧರ್ಮರತರು ಎಂಬ ವಿಶೇಷಾಂಶ ಸೂಚಿತವಾಗಿದೆ. ಅನಾದ್ಯನಂತಕಾಲದಲ್ಲಿ ಒಂದು ಬಾರಿಯೂ ಸಹ ಶ್ರೀಹರಿಯ ಚಿಂತನೆಯನ್ನು ತೊರೆಯದ ಮಹನೀಯರು ಎಂಬುದು ಇದರ ಒಟ್ಟು ಭಾವ. ಋಜುಗಳಲ್ಲದ ಇತರ ದೇವತೆಗಳು ಸಹ ಪರಮಭಗವದ್ಭಕ್ತರೇ ಆದರೂ, ಪ್ರಾರಬ್ಧಕರ್ಮವಶಾತ್ ಒಮ್ಮೊಮ್ಮೆ ಭಗವದ್ವಿರೋಧಿಯಾದ ಕಾರ್ಯಗಳಲ್ಲಿ ತೊಡಗುವುದುಂಟು. ಆದರೆ ವಾಯುದೇವರು ಹಾಗಲ್ಲ.

೩. **ಉರುಸುಖತೀರ್ಥಮುನಿ** ಎಂದರೆ ಮಹಾನಂದತೀರ್ಥಮುನಿ ಎಂದರ್ಥ-ವಾಗುವುದು.

೪. **ಭಗವನ್** ಎಂಬುದು ಹಿಂದೆ ತಿಳಿಸಿದಂತೆ ಐಶ್ವರ್ಯಾದಿ ಷಡ್ಗುಣಸಂಪನ್ನನಾದ ಕಾರಣದಿಂದ ಭಗವಾನ್ ಎನ್ನಿಸಿರುವ ಶ್ರೀಹರಿಗೆ ಸಂಬೋಧನೆ.

---

೧. **ಪರಮಾತ್ಮನೇ ಸತತಮೇಕರೂಪಿಣೇ ದಶರೂಪಿಣೇ ಶತಸಹಸ್ರರೂಪಿಣೇ ।**
**ಅವಿಕಾರಿಣೇ ಸ್ಫುಟಮನಂತರೂಪಿಣೇ ಸುಖಚಿತ್ಸಮಸ್ತತನವೇ ನಮೋ ನಮಃ ॥**
- ಸುಮಧ್ವವಿಜಯ(೮/೪೧)

೫. **ಸುಶರಣಂ** ಎಂಬುದಕ್ಕೆ ನಿತ್ಯ ಆಸರೆ ಎಂಬ ವಿಶೇಷಾರ್ಥವನ್ನು ತಿಳಿಯಬೇಕು.

೬. **ಶರಣಂ** ಎಂದರೆ ಶರಣಾಗತಿ ಎಂದರ್ಥ. ಆದರ ವಿಶೇಷಾರ್ಥವು ಹೀಗಿದೆ:

**'ಸರ್ವೋತ್ತಮತ್ವವಿಜ್ಞಾನಪೂರ್ವಂ ತತ್ರ ಮನಃ ಸದಾ ।**
**ಸರ್ವಾಧಿಕಪ್ರೇಮಯುಕ್ತಂ ಸರ್ವಸ್ಯಾತ್ರ ಸಮರ್ಪಣಮ್ ।**
**ಅಖಂಡಾ ತ್ರಿವಿಧಾ ಪೂಜಾ ತದ್ರತ್ಯೈವ ಸ್ವಭಾವತಃ ।**
**ರಕ್ಷತೀತ್ಯೇವ ವಿಶ್ವಾಸಸ್ತದೀಯೋಽಹಮಿತಿ ಸ್ಮೃತಿಃ ।**
**ಶರಣಾಗತಿರೇಷಾ ಸ್ಯಾದ್ ವಿಷ್ಣೌ ಮೋಕ್ಷಫಲಪ್ರದಾ'**
**– ಇತಿ ಮಹಾವಿಷ್ಣುಪುರಾಣೇ । ಗೀ.ತಾ. (೧೮/೬೫,೬೬)**

★★★★★

## ೧೦. ದಶಮಾಧ್ಯಾಯ (ಹರಿಗಾಥಾಸ್ತೋತ್ರ)

**ಅವನ ಶ್ರೀಪತಿರಪ್ರತಿರಧಿಕೇಶಾದಿಭವಾದೇ ।**

**ಕರುಣಾಪೂರ್ಣ ವರಪ್ರದ ಚರಿತಂ ಜ್ಞಾಪಯ ಮೇ ತೇ ॥ ೧ ॥**

**ಪ:** ಅವನ, ಶ್ರೀಪತಿಃ, ಅಪ್ರತಿಃ, ಅಧಿಕ, ಈಶಾದಿಭವಾದೇ, ಕರುಣಾಪೂರ್ಣ, ವರಪ್ರದ, ಚರಿತಮ್, ಜ್ಞಾಪಯ, ಮೇ, ತೇ ।

**ಅ:** ಅವನ, ಅಧಿಕ, ಈಶಾದಿಭವಾದೇ, ಕರುಣಾಪೂರ್ಣ, ವರಪ್ರದ, ಅಪ್ರತಿಃ, ಶ್ರೀಪತಿಃ, ತೇ, ಚರಿತಮ್, ಮೇ, ಜ್ಞಾಪಯ ।

**ಪ್ರ.ಪ. : ಅವನ** – ಪಾಲಕನೇ!; **ಅಧಿಕ** – ಸರ್ವೋತ್ತಮನೇ!; **ಈಶಾದಿಭವಾದೇ** – ರುದ್ರಾದಿಗಳಿಗೂ ಜನ್ಮಾದಿ ಕಾರಣನೇ!; **ಕರುಣಾಪೂರ್ಣ** – ಕರುಣೆಯಿಂದ ತುಂಬಿದವನೇ!; **ವರಪ್ರದ** – ವರ ನೀಡುವವನೇ!; **ಅಪ್ರತಿಃ** – ಪ್ರತಿ ಇಲ್ಲದ; **ಶ್ರೀಪತಿಃ** – ಲಕ್ಷ್ಮೀಪತಿಯಾದ; **ತೇ** – ನಿನ್ನ; **ಚರಿತಮ್** – ಮಹಿಮೆಯನ್ನು; **ಮೇ** – ನನಗೆ; **ಜ್ಞಾಪಯ** – ತಿಳಿಸಿಕೊಡು.

**ರಕ್ಷಿಪನೆ ಲಕ್ಷ್ಮೀಶ ಎಣೆಯಿರದ ಸರ್ವೇಶ**
**ಬ್ರಹ್ಮಾದಿಸರ್ವಜನಕ ।**
**ಕರುಣೆ ತುಂಬಿರುವವನೆ ವರಗಳನು ನೀಡುವನೆ**
**ತಿಳಿಸೆನಗೆ ನಿನ್ನ ಮಹಿಮೆ ॥ ೧ ॥**

**ಅನು : ಪಾಲಕನೇ! ಸರ್ವೋತ್ತಮನೇ! ರುದ್ರಾದಿಗಳಿಗೂ ಜನ್ಮಾದಿ ಕಾರಣನೇ! ಕರುಣೆಯಿಂದ ತುಂಬಿದವನೇ! ವರ ನೀಡುವವನೇ! ಪ್ರತಿ ಇಲ್ಲದ ಲಕ್ಷ್ಮೀಪತಿಯಾದ ನಿನ್ನ ಮಹಿಮೆಯನ್ನು ನನಗೆ ತಿಳಿಸಿಕೊಡು.**

ವಿ : ೧. ಹಿಂದಿನ ಸ್ತೋತ್ರದಂತೆ ಈ ಸ್ತೋತ್ರದಲ್ಲೂ ಮೊದಲಿಗೆ ಶ್ರೀಹರಿಯ ವಿಶೇಷ ಮಹಿಮೆ ವರ್ಣಿತವಾಗಿದೆ. ಆ ಬಳಿಕ ಮೊದಲನೆಯ ಅಧ್ಯಾಯದಲ್ಲಿ ಬಂದಿರುವಂತೆ, ಅವನ ಆಪಾದಪರ್ಯಂತ ವರ್ಣನೆ ಬಂದಿದೆ. ಇದು ಅಲ್ಲಿಯ ಅನೇಕ ವಿಷಯಗಳಿಗೆ ವಿವರಣರೂಪವಾಗಿರುವುದು ವಿಶೇಷ. ಒಟ್ಟಾಗಿ ಇವೆರಡರು ಪರಸ್ಪರ ಪೂರಕ ಎನ್ನಿಸುವ ವಿವರಗಳಿಂದ ಕೂಡಿವೆ.

೨. ಶ್ರೀಹರಿಯು ಸರ್ವರಕ್ಷಕ; ಅವನಿಗೆ ಪ್ರತಿ ಇಲ್ಲ; ಎಂದರೆ ಸಮಾನರಾಗಲಿ, ಉತ್ತಮರಾಗಲಿ ಇಲ್ಲ; ಅಧಿಕರಾದ ಬ್ರಹ್ಮರುದ್ರಾದಿಗಳಿಗೆ ಕಾರಣನಾಗಿರುವನು; ಮಹಾಲಕ್ಷ್ಮಿಗೂ ಪತಿಯಾದವನು ಎಂಬುದು ಅವನ ಮುಖ್ಯವಾದ ಹಿರಿಮೆ.

೩. ಶ್ರೀಹರಿಯು ಸಕಲಗುಣಪೂರ್ಣ. ಕರುಣೆಯೂ ಒಂದು ಗುಣ. ಆದರಿಂದಲೂ ಪೂರ್ಣನಾದವನು; ನಿರವಧಿಕಕರುಣಾಗುಣಪೂರ್ಣ ಎಂದರ್ಥ: '**ಅಹೋಽತಿಕರುಣಾ ವಿಷ್ಣೋಃ**' (ಭಾಗ.ತಾ.ನಿ. ೧೦/೨೭/೧೩).

೪. ಶ್ರೀಹರಿಯ ಸಕಲಗುಣಗಳಲ್ಲೂ ಕರುಣೆ ಎಂಬ ಗುಣ ವಿಶೇಷರೀತಿಯದು. ಸಕಲಜೀವಿಗಳನ್ನು ಸಹ ಯಾವುದೇ ಪ್ರಯೋಜನದ ಅಗತ್ಯವಿಲ್ಲದೆ ಸಂರಕ್ಷಣೆ ಮಾಡುವ ಶ್ರೀಹರಿಯ ಕಾರ್ಯಕ್ಕೆ ಕಾರಣವಾಗಿರುವ ಮುಖ್ಯವಾದ ಗುಣ ಈ ಕರುಣೆ ಎಂಬುದೇ ಆಗಿದೆ. ಆ ಹಿನ್ನೆಲೆಯಲ್ಲಿ ಇದಕ್ಕಿರುವ ಮಹತ್ತ್ವ ಅಪಾರವಾದುದು. ಹರಿಕಥಾಮೃತಸಾರದ ಕರುಣಾಸಂಧಿ ಒಂದು ರೀತಿಯಲ್ಲಿ ಹೆಸರನ್ನೊಳಗೊಂಡಂತೆ ಇತರ ಎಲ್ಲ ರೀತಿಯಿಂದಲೂ ಸಹ ಇದರ ವಿವರಣೆಯಾಗಿದೆ ಎಂದು ತಿಳಿಯಬಹುದು.

೪. ಅವನ **ಚರಿತೆ** ಎಂದರೆ ಮಹಿಮೆ; ಶ್ರೀಹರಿಯು ಅಪ್ರಮೇಯ ಹಾಗೂ ಅವನ ಅಪೂರ್ವ ಹಾಗೂ ಅಪಾರ ಮತ್ತು ಇತರರಿಗೆ ಸರ್ವಥಾ ಸಾಕಲ್ಯೇನ[೧] ಅಜ್ಞೇಯ. ಆದ್ದರಿಂದ ಅವನು ತನ್ನ ಮಹಿಮೆಯನ್ನು ತಾನೇ ಯಥೋಚಿತವಾಗಿ ತಿಳಿಸಿಕೊಡಬೇಕು ಎಂದು ಭಾವ.

೫. ಮಹಿಮೆಯನ್ನು ತಿಳಿಸಿಕೊಡು ಎಂದರೆ ಆ ಮಹಿಮೆಯನ್ನು ತಿಳಿಸಿಕೊಡುವ ಮೂಲಕ ಭಕ್ತಿಯನ್ನು ನೀಡು; ಆ ಮೂಲಕ ಮುಕ್ತಿಯನ್ನು ಕರುಣಿಸು ಎಂದೂ ಭಾವ.

೬. ಇಲ್ಲಿ[೨] **ಚರಿತ** ಎಂದರೆ ಗುಣಪೂರ್ಣತ್ವ ಹಾಗೂ ದೋಷದೂರತ್ವರೂಪವಾದ ಮಹಾಮಹಿಮೆ ಎಂದರ್ಥ; ಆದರಂತೆ ಶ್ರೀಮದ್ಭಾಗವತ, ರಾಮಾಯಣ ಮಹಾಭಾರತಾದಿ-ಗಳಲ್ಲಿ ನಿರೂಪಿತವಾಗಿರುವ ಶ್ರೀಹರಿಯ ಅವತಾರಗಳ ಪರಿಪೂರ್ಣತ್ವರೂಪ ಹಿರಿಮೆ ಎಂದು ಭಾವ.

೭. **ಅಧಿಕೇಶಾದಿಭವಾದೇ** ಎಂಬುದನ್ನು ಹೇ ಅಧಿಕ! ಹೇ ಈಶ! ಹೇ ಆದಿಭವ! ಹೇ ಆದೇ! ಎಂದೂ ವಿಭಾಗ ಮಾಡಿ ಅರ್ಥಮಾಡಿಕೊಳ್ಳಬಹುದು. ಅಧಿಕ ಎಂದರೆ ಸರ್ವಾಧಿಕ, ಈಶ ಎಂದರೆ ಸರ್ವೇಶ, ಆದಿಭವ ಎಂದರೆ ಸೃಷ್ಟಿಯ ಪ್ರಾರಂಭದಿಂದಲೂ ಇರುವವನು, ಆದೇ ಎಂದರೆ ಎಲ್ಲದಕ್ಕೂ ಕಾರಣನು ಎಂಬ ವಿಶೇಷಾರ್ಥ ಇದರಿಂದ ಲಭಿಸುವುದು.

೮. **ವರಪ್ರದಚರಿತಂ** ಎಂಬುದನ್ನು ಒಂದು ಪದವನ್ನಾಗಿಯೂ ಅರ್ಥಮಾಡಿ-ಕೊಳ್ಳಬಹುದು. ಆದರಿಂದ ಶ್ರೀಹರಿಯ ಮಹಿಮೆಯ ಪರಿಜ್ಞಾನದಿಂದ ಭಗವದನುಗ್ರಹ-ದಿಂದಾಗಿ ವಿಶೇಷ ವರಗಳು ಲಭಿಸುವವು. ತಪ್ಪಾಗಿ ಅರ್ಥಮಾಡಿಕೊಂಡಲ್ಲಿ ಸಂಪಾದಿಸಿದ ಶ್ರೇಷ್ಠ ಹಿರಿಮೆ ಎಲ್ಲವೂ ಸಹ ಸರ್ವನಾಶವನ್ನು ಹೊಂದುವುದು ಎಂಬ ವಿಶೇಷಾರ್ಥ ಸೂಚಿತವಾಗುವುದು.

---

೧. ಸ್ವಯಮೇವಾತ್ಮನಾಽಽತ್ಮಾನಂ ವೇತ್ಥ ತ್ವಂ ಪುರುಷೋತ್ತಮ। – ಗೀತಾ.(೧೦/೧೫)

೨. ನಿಷ್ಠಾ ಚ ಶೀಲಂ ಚಾರಿತ್ರಂ ಚರಿತ್ರಂ ಚರಿತಂ ತಥಾ। – ರತ್ನಕೋಶ

೯. ರಾಮಾಯಣ, ಮಹಾಭಾರತಾದಿ ಗ್ರಂಥಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳುವುದರಲ್ಲಿ ಸಕಲರೀತಿಯ ಶ್ರೇಯಃಪ್ರಾಪ್ತಿರೂಪದ ಅಪೂರ್ವಫಲ ಇದ್ದರೆ, ಅವನ್ನು ತಪ್ಪಾಗಿ ಅರ್ಥಮಾಡಿಕೊಂಡರೆ ಸರ್ವನಾಶರೂಪದ ಅನರ್ಥವು ಖಚಿತ ಎಂದು ಭಾವ. ಹರಿಕಥಾಮೃತಸಾರದ ಕರುಣಾಸಂಧಿಯ ಮೊದಲ ಪದ್ಯದಲ್ಲಿ ಶ್ರೀಹರಿಯ ಮಹಿಮೆಯ ಪರಿಜ್ಞಾನವು **ವಿವಿಧಭೋಗಗಳನಿಹಪರಂಗಳಲಿತ್ತು ಸಲಹುವುದು** ಎಂಬ ಮಾತು ಈ ಸಂದರ್ಭದಲ್ಲಿ ಮನನೀಯವಾಗಿದೆ.

**ಸುರವಂದ್ಯಾಧಿಪ ಸದ್ವರ ಭರಿತಾಶೇಷಗುಣಾಲಮ್ ।**
**ಕರುಣಾಪೂರ್ಣ ವರಪ್ರದ ಚರಿತಂ ಜ್ಞಾಪಯ ಮೇ ತೇ ॥ ೨ ॥**

**ಪ :** ಸುರವಂದ್ಯ, ಅಧಿಪ, ಸದ್ವರ, ಭರಿತ, ಅಶೇಷಗುಣ, ಅಲಮ್, ಕರುಣಾಪೂರ್ಣ, ವರಪ್ರದ, ಚರಿತಮ್, ಜ್ಞಾಪಯ, ಮೇ, ತೇ।

**ಅ :** ಸುರವಂದ್ಯ, ಅಧಿಪ, ಸದ್ವರ, ಭರಿತ, ಅಶೇಷಗುಣ, ಕರುಣಾಪೂರ್ಣ, ವರಪ್ರದ, ತೇ, ಚರಿತಮ್, ಮೇ, ಅಲಮ್, ಜ್ಞಾಪಯ।

**ಪ್ರ.ಪ. : ಸುರವಂದ್ಯ** – ಸುರರಿಂದ ವಂದಿತನಾದವನೇ!; **ಅಧಿಪ** – ಸರ್ವರಿಗೂ ಅಧಿಪತಿಯೇ!; **ಸದ್ವರ** – ಸಜ್ಜನರಿಗೆ ವರ ನೀಡುವವನೇ!; **ಭರಿತ** – ಪರಿಪೂರ್ಣನೇ!; **ಅಶೇಷಗುಣ** – ಅನಂತಗುಣಪೂರ್ಣನೇ; (**ಕರುಣಾಪೂರ್ಣ** – ಕರುಣೆಯಿಂದ ತುಂಬಿದವನೇ!; **ವರಪ್ರದ** – ವರ ನೀಡುವವನೇ!; **ತೇ** – ನಿನ್ನ; **ಚರಿತಮ್** – ಮಹಿಮೆಯನ್ನು; **ಮೇ** – ನನಗೆ; **ಜ್ಞಾಪಯ** – ತಿಳಿಸಿಕೊಡು.)

**ಸುರರೆಲ್ಲ ಮಣಿವಂಥ ಮುಕುತರಿಗು ದೈವತವೆ**
**ಪರಿಪೂರ್ಣಗುಣದ ನೆಲೆಯೇ ।**
**ಕರುಣೆ ತುಂಬಿರುವವನೆ ವರಗಳನು ನೀಡುವನೆ**
**ತಿಳಿಸೆನಗೆ ನಿನ್ನ ಮಹಿಮೆ ॥ ೨ ॥**

**ಅನು : ಸುರರಿಂದ ವಂದಿತನಾದವನೇ! ಸರ್ವರಿಗೂ ಅಧಿಪತಿಯೇ! ಸಜ್ಜನರಿಗೆ ವರ ನೀಡುವವನೇ! ಪರಿಪೂರ್ಣನೇ! ಅನಂತಗುಣಪೂರ್ಣನೇ (ಕರುಣೆಯಿಂದ ತುಂಬಿದವನೇ! ವರ ನೀಡುವವನೇ! ನಿನ್ನ ಮಹಿಮೆಯನ್ನು ನನಗೆ ತಿಳಿಸಿಕೊಡು.)**

ವಿ : ೧. ಇಲ್ಲಿ ಶ್ರೀಹರಿಯ ಪ್ರಾಣೋತ್ತಮತ್ವ, ಗುಣಪೂರ್ಣತ್ವ ಎಂಬ ಮೊದಲಾದ ಹಿರಿಮೆ ಇದರಲ್ಲಿ ವರ್ಣಿತವಾಗಿವೆ.

೨. **ಸುರವಂದ್ಯಾಧಿಪ** ಎಂಬುದನ್ನು **ಹೇ ಸುರ ಹೇ ವಂದಿತ, ಹೇ ಅಧಿಪ** ಎಂಬುದಾಗಿಯೂ ವಿಭಾಗ ಮಾಡಬಹುದು.

೩. ಅಶೇಷ ಗುಣಪೂರ್ಣನಾದ್ದರಿಂದಲೇ ಅದನ್ನು ಪೂರ್ಣವಾಗಿ ತಿಳಿಯಲು ಸರ್ವಥಾ ಅಸಾಧ್ಯ ಎಂಬುದು ಭಾವ.

೪. **ಸುರವಂದ್ಯಾಧಿಪಸದ್ವರ** ಎಂದೂ, **ಸುರವಂದ್ಯಾಧಿಪಸದ್ವರಭರಿತ** ಎಂದೂ ಸಹ ಇದನ್ನು ಅರ್ಥಮಾಡಿಕೊಳ್ಳಬಹುದು. ಸುರರಿಂದ ವಂದಿತರಾದವರಲ್ಲಿ ಅಧಿಪತಿಯಾದ ವಾಯುದೇವರಿಗಿಂತ ಶ್ರೇಷ್ಠನಾದವನು ಎಂದೂ, ಸುರರಿಂದ ವಂದಿತರಾದವರಲ್ಲಿ ಶ್ರೇಷ್ಠರಾದ ಮುಖ್ಯಪ್ರಾಣರಿಂದ ಪೂರ್ಣವಾಗಿ ಆರಾಧಿತನಾದವನೆಂದೂ, ಈ ಪದಗಳಿಗೆ ಅರ್ಥವಾಗುವುದು.

**ಸಕಲಧ್ವಾಂತವಿನಾಶಕ ಪರಮಾನಂದಸುಧಾಹೋ ।**
**ಕರುಣಾಪೂರ್ಣ ವರಪ್ರದ ಚರಿತಂ ಜ್ಞಾಪಯ ಮೇ ತೇ ॥ ೩ ॥**

**ಪ** : ಸಕಲಧ್ವಾಂತವಿನಾಶಕ, ಪರಮಾನಂದಸುಧ, ಅಹೋ, ಕರುಣಾಪೂರ್ಣ, ವರಪ್ರದ, ಚರಿತಮ್, ಜ್ಞಾಪಯ, ಮೇ, ತೇ ।

**ಅ** : ಸಕಲಧ್ವಾಂತವಿನಾಶಕ, ಪರಮಾನಂದಸುಧ, ಅಹೋ, ಕರುಣಾಪೂರ್ಣ, ವರಪ್ರದ, ತೇ, ಚರಿತಮ್, ಮೇ, ಜ್ಞಾಪಯ ।

**ಪ್ರ.ಪ.** : **ಸಕಲಧ್ವಾಂತವಿನಾಶಕ** – ಸಕಲ ಕತ್ತಲೆಯನ್ನು ಪರಿಪೂರ್ಣವಾಗಿ ನಾಶಪಡಿಸುವವನೇ!; **ಪರಮ** – ಸರ್ವೋತ್ತಮನೇ!; **ಆನಂದಸುಧ** – ಆನಂದಾಮೃತನೇ!; **ಅಹೋ** – ಆಶ್ಚರ್ಯಕರನೇ; (**ಕರುಣಾಪೂರ್ಣ** – ಕರುಣೆಯಿಂದ ತುಂಬಿದವನೇ!; **ವರಪ್ರದ** – ವರ ನೀಡುವವನೇ!; **ತೇ** – ನಿನ್ನ; **ಚರಿತಮ್** – ಮಹಿಮೆಯನ್ನು; **ಮೇ** – ನನಗೆ; **ಜ್ಞಾಪಯ** – ತಿಳಿಸಿಕೊಡು.)

**ತಮವೆಲ್ಲ ತರಿವವನೆ ನಲಿವಸುಧೆ ನೀಡುವನೆ**
**ದಿವಿಜರಿಗು ದೇವದೇವ ।**
**ಕರುಣೆ ತುಂಬಿರುವವನೆ ವರಗಳನು ನೀಡುವನೆ**
**ತಿಳಿಸೆನಗೆ ನಿನ್ನ ಮಹಿಮೆ ॥ ೩ ॥**

**ಅನು : ಸಕಲ ಕತ್ತಲೆಯನ್ನು ಪರಿಪೂರ್ಣವಾಗಿ ನಾಶಪಡಿಸುವವನೇ! ಸರ್ವೋತ್ತಮನೇ! ಆನಂದಾಮೃತನೇ! ಆಶ್ಚರ್ಯಕರನೇ (ಕರುಣೆಯಿಂದ ತುಂಬಿದವನೇ! ವರ ನೀಡುವವನೇ! ನಿನ್ನ ಮಹಿಮೆಯನ್ನು ನನಗೆ ತಿಳಿಸಿಕೊಡು.)**

ವಿ: ೧. ಶ್ರೀಹರಿಯು ಎಲ್ಲ ಬಗೆಯ ಕತ್ತಲೆಯನ್ನು ಸಂಪೂರ್ಣವಾಗಿ ಪರಿಹರಿಸುವವನು; ಎಂದರೆ ಆಧ್ಯಾತ್ಮಿಕ, ಆಧಿದೈವಿಕ ಹಾಗೂ ಆಧಿಭೌತಿಕ ಎಂಬ ಮೂರು ಬಗೆಯ ತಾಪತ್ರಯವನ್ನು ಸಂಪೂರ್ಣವಾಗಿ ನಾಶಮಾಡುವ ಮಹಾಮಹಿಮೆಯುಳ್ಳವನು ಎಂದರ್ಥ.

೨. ಸಕಲ ಎಂಬುದಕ್ಕೆ ಎಲ್ಲಾ ಅವತಾರರೂಪವಾದ ಕಲೆಗಳನ್ನು ಸದಾ ಒಂದೇ ತೆರನಾಗಿ ಪೂರ್ಣವಾಗಿ ಹೊಂದಿರುವವನು ಎಂದರ್ಥ. ಅದರಂತೆ ಕಾಲಶಬ್ದವಾಚ್ಯಳಾದ ಮಹಾಲಕ್ಷ್ಮಿಯ ಸಮೇತವಾಗಿಯೇ ಸದಾ ಇರುವವನು ಎಂದು ಅರ್ಥವಾಗುವುದು.

೩. **ಧ್ವಾಂತನಾಶ** – ಧ್ವಾಂತ ಎಂದರೆ ಕತ್ತಲೆ, ಅಜ್ಞಾನ ಎಂದರ್ಥ; ಸಕಲ ಬಗೆಯ ಅಜ್ಞಾನ ಎಂಬ ಕತ್ತಲೆಯಂತಹ ದುರ್ಮತಗಳನ್ನು ನಾಶಮಾಡುವವನು:

**ನರಸಿಂಹೋಽಖಿಲಾಜ್ಞಾನಮತಧ್ವಾಂತದಿವಾಕರಃ।**
**ಜಯತ್ಯಮಿತಸಜ್ಞಾನಸುಖಶಕ್ತಿಪಯೋನಿಧಿಃ॥ -ಮಾಯಾವಾದಖಂಡನ**

೪. **ಸಕಲಧ್ವಾಂತನಾಶ ಕ** ಎಂದೂ ಇದನ್ನು ವಿಭಾಗ ಮಾಡಬಹುದು. **ಕ** ಎಂದರೆ ವಿಷ್ಣು ಎಂದರ್ಥ. **ಏಕೋ ನೈಕ ಸವಃ ಕಃ ಕಿಂ** ಇತ್ಯಾದಿ ವಿಷ್ಣುಸಹಸ್ರನಾಮ.

೫. **ಪರಮಾನಂದ ಸುಧಾಹೋ** ಎಂಬುದನ್ನು **ಪರಮ ಆನಂದ ಸುಧ ಅಹೋ** ಎಂದೂ ವಿಭಾಗ ಮಾಡಬಹುದು; ಅದಕ್ಕೆ ಬಗೆಬಗೆಯ ಅರ್ಥಗಳನ್ನು ಈಗಾಗಲೇ ತಿಳಿಸಲಾಗಿದೆ.

೬. ಸಕಲ ಭಕ್ತರ ಅಜ್ಞಾನವೆಂಬ ಅಂಧಕಾರವನ್ನು ಶ್ರೀಹರಿ ನಾಶಮಾಡುವವನು ಎಂಬುದು ಮುಖ್ಯಭಾವ.

**ತ್ರಿಜಗತ್ಪೋತ ಸದಾರ್ಚಿತಚರಣಾಶಾಪತಿಧಾತೋ।**
**ಕರುಣಾಪೂರ್ಣ ವರಪ್ರದ ಚರಿತಂ ಜ್ಞಾಪಯ ಮೇ ತೇ ॥ ೪ ॥**

**ಪ :** ತ್ರಿಜಗತ್ಪೋತ, ಸದಾ, ಅರ್ಚಿತ, ಚರಣ, ಆಶಾಪತಿಧಾತೋ, ಕರುಣಾಪೂರ್ಣ, ವರಪ್ರದ, ಚರಿತಮ್, ಜ್ಞಾಪಯ, ಮೇ, ತೇ।

**ಅ :** ತ್ರಿಜಗತ್ಪೋತ, ಸದಾ, ಅರ್ಚಿತ, ಚರಣ, ಆಶಾಪತಿಧಾತೋ, ಕರುಣಾಪೂರ್ಣ, ವರಪ್ರದ, ತೇ, ಚರಿತಮ್, ಮೇ, ಜ್ಞಾಪಯ।

**ಪ್ರ.ಪ. : ತ್ರಿಜಗತ್ಪೋತ** –ಮೂರು ಲೋಕಗಳಿಗೂ ನಾವೆಯಂತಿರುವವನೇ! ; **ಸದಾ** – ಸದಾ; **ಅರ್ಚಿತ** – ಪೂಜಿತ ; **ಚರಣ** – ಚರಣನೇ!; **ಆಶಾಪತಿಧಾತೋ** – ಸರಸ್ವತಿಪತಿಯಾದ ಬ್ರಹ್ಮನಿಗೂ ಕಾರಣನಾದವನೇ!; (**ಕರುಣಾಪೂರ್ಣ** – ಕರುಣೆಯಿಂದ ತುಂಬಿದವನೇ!; **ವರಪ್ರದ** – ವರ ನೀಡುವವನೇ!; **ತೇ** – ನಿನ್ನ; **ಚರಿತಮ್** – ಮಹಿಮೆಯನ್ನು; **ಮೇ** – ನನಗೆ; **ಜ್ಞಾಪಯ** – ತಿಳಿಸಿಕೊಡು.)

**ಮೂಜಗಕು ನೀ ನಾವೆ ಸುಜನವಂದಿತಚರಣ**
**ಸಿರಿವಾಣಿಪತಿಗು ನೆಲೆಯೆ ।**
**ಕರುಣೆ ತುಂಬಿರುವವನೆ ವರಗಳನು ನೀಡುವನೆ**
**ತಿಳಿಸೆನಗೆ ನಿನ್ನ ಮಹಿಮೆ ॥ ೪ ॥**

**ಅನು : ಮೂರು ಲೋಕಗಳಿಗೂ ನಾವೆಯಂತಿರುವವನೇ! ಸಜ್ಜನರಿಂದ ಸದಾ ಪೂಜಿತ ಚರಣನೇ! ಸರಸ್ವತಿಪತಿಯಾದ ಬ್ರಹ್ಮನಿಗೂ ಕಾರಣನಾದವನೇ! (ಕರುಣೆಯಿಂದ ತುಂಬಿದವನೇ! ವರ ನೀಡುವವನೇ! ನಿನ್ನ ಮಹಿಮೆಯನ್ನು ನನಗೆ ತಿಳಿಸಿಕೊಡು.)**

ವಿ : ೧. ಸಂಸಾರ ಎಂಬ ಸಮುದ್ರವನ್ನು ದಾಟಲು ನಾವೆ ಅಗತ್ಯ. ಸಂಸಾರವೆಂಬ ನಾವೆಯನ್ನು ದಾಟಲು ಮೂರು ಜಗತ್ತುಗಳ ಪಾಲಿಗೂ ಶ್ರೀಹರಿಯು ನಾವೆಯಂತೆ ರಕ್ಷಕನಾಗಿರುವ ಎಂದರ್ಥ; ಅದರಂತೆ ಮೂರು ರೂಪದ ವಾಯುದೇವರಿಗೂ ಧಾರಕನಾಗಿರುವವನು ಎಂದೂ ಅರ್ಥ.

೨. **ಸದಾರ್ಚಿತಚರಣ** ಎಂದರೆ ಸಜ್ಜನರಿಂದ ಸದಾ ಪೂಜಿತನಾದ ಚರಣವುಳ್ಳವನು ಎಂದರ್ಥ.

೩. **ಆಶಾಪತಿಧಾತೋ** ಆಶಾಪತಿ ಎಂದರೆ ಸರಸ್ವತೀಪತಿಯಾದ ಬ್ರಹ್ಮದೇವರು ಎಂದರ್ಥ. ಸಕಲ ದೇವತೆಗಳಿಗೂ ಪಾಲಕರಾದ ಬ್ರಹ್ಮದೇವರಿಗೂ ಪಾಲಕನಾದವನು ಎಂದರ್ಥ.

**ತ್ರಿಗುಣಾತೀತ ವಿಧಾರಕ ಪರಿತೋ ದೇಹಿ ಸುಭಕ್ತಿಮ್ ।**
**ಕರುಣಾಪೂರ್ಣ ವರಪ್ರದ ಚರಿತಂ ಜ್ಞಾಪಯ ಮೇ ತೇ ॥ ೫ ॥**

**ಪ :** ತ್ರಿಗುಣಾತೀತ, ವಿಧಾರಕ, ಪರಿತಃ, ದೇಹಿ, ಸುಭಕ್ತಿಮ್, ಕರುಣಾಪೂರ್ಣ, ವರಪ್ರದ, ಚರಿತಮ್, ಜ್ಞಾಪಯ, ಮೇ, ತೇ ।

**ಅ :** ತ್ರಿಗುಣಾತೀತ, ವಿಧಾರಕ, ಪರಿತಃ, ಸುಭಕ್ತಿಮ್, ದೇಹಿ, ಕರುಣಾಪೂರ್ಣ, ವರಪ್ರದ, ತೇ, ಚರಿತಮ್, ಮೇ, ಜ್ಞಾಪಯ ।

**ಪ್ರ.ಪ. : ತ್ರಿಗುಣಾತೀತ** – ಮೂರು ಗುಣಗಳಿಂದ ರಹಿತನಾದವನೇ!; **ವಿಧಾರಕ** – ಎಲ್ಲವನ್ನೂ ವಿಶೇಷವಾಗಿ ಧರಿಸಿದವನೇ!; **ಪರಿತಃ** – ಎಲ್ಲ ರೀತಿಯ; **ಸುಭಕ್ತಿಮ್** – ಸುಭಕ್ತಿಯನ್ನು; **ದೇಹಿ** – ನೀಡು; (**ಕರುಣಾಪೂರ್ಣ** – ಕರುಣೆಯಿಂದ ತುಂಬಿದವನೇ!; **ವರಪ್ರದ** – ವರ ನೀಡುವವನೇ!; **ತೇ** – ನಿನ್ನ; **ಚರಿತಮ್** – ಮಹಿಮೆಯನ್ನು; **ಮೇ** – ನನಗೆ; **ಜ್ಞಾಪಯ** – ತಿಳಿಸಿಕೊಡು.)

**ತ್ರಿಗುಣಗಳ ಮೀರಿಹನೆ ಜಗವೆಲ್ಲ ರಕ್ಷಿಪನೆ**
**ನೀಡೆನಗೆ ವಿಮಲ ಭಕುತಿ ।**
**ಕರುಣೆ ತುಂಬಿರುವವನೆ ವರಗಳನು ನೀಡುವನೆ**
**ತಿಳಿಸೆನಗೆ ನಿನ್ನ ಮಹಿಮೆ ॥ ೫ ॥**

**ಅನು : ಮೂರು ಗುಣಗಳಿಂದ ರಹಿತನಾದವನೇ! ಎಲ್ಲವನ್ನೂ ವಿಶೇಷವಾಗಿ ಧರಿಸಿದವನೇ! ಎಲ್ಲ ರೀತಿಯ ಸುಭಕ್ತಿಯನ್ನು ನೀಡು, (ಕರುಣೆಯಿಂದ ತುಂಬಿದವನೇ! ವರ ನೀಡುವವನೇ! ನಿನ್ನ ಮಹಿಮೆಯನ್ನು ನನಗೆ ತಿಳಿಸಿಕೊಡು.)**

ವಿ : ೧. ಸತ್ವ, ರಜಸ್ಸು ಹಾಗೂ ತಮಸ್ಸೆಂಬ ಮೂರು ಗುಣಗಳಿಂದ ಅತೀತನಾದನು ಶ್ರೀಹರಿ; ಎಂದರೆ ಅವನು **ತ್ರೈಗುಣ್ಯವರ್ಜಿತ** ಎಂಬ ಅರ್ಥದಲ್ಲಿ ನಿರ್ಗುಣನು ಎಂದರ್ಥ.

೨. **ವಿಧಾರಕ** ಎಂದರೆ ಗರುಡನನ್ನು ಧರಿಸಿದವನು ಎಂದರ್ಥ; ಮೇಲ್ನೋಟಕ್ಕೆ ಶ್ರೀಹರಿಯು ಗರುಡವಾಹನನೆನ್ನಿಸಿದರೂ, ಗರುಡನೊಳಗಿದ್ದು ತನ್ನನ್ನು ತಾನೇ ಧರಿಸಿದವನು ಎಂದರ್ಥ.

೩. ಇಂತಹ ಶ್ರೀಹರಿಯು ನಮಗೆ **ಸುಭಕ್ತಿ**ಯನ್ನು ಎಂದರೆ ನಿರ್ಮಲವಾದ ಭಕ್ತಿಯನ್ನು ನೀಡಬೇಕು ಎಂದರ್ಥ; ಸುಭಕ್ತಿಯಿಂದ ಎಂದರೆ ನವವಿಧ ದ್ವೇಷರಹಿತವಾದ ಒಳ್ಳೆಯ ಭಕ್ತಿ ಎಂದರ್ಥ.

೪. **ತ್ರಿಗುಣಾತೀತವಿಧಾರಕ** – ತ್ರಿಗುಣಮಯವಾದ ಶರೀರವನ್ನು ಹೊಂದಿದ್ದರೂ, ಅವರ ಸಂಪರ್ಕದಿಂದ ದೂರಾಗಿರುವ ಬ್ರಹ್ಮವಾಯು ಮೊದಲಾದ ಋಜುದೇವತೆಗಳನ್ನು ವಿಶೇಷವಾಗಿ ರಕ್ಷಣೆ ಮಾಡುವವನೇ ಎಂದರ್ಥ. ಅದರಂತೆ ತ್ರಿಗುಣಾತೀತರಾದ, ಮುಕ್ತರಾದ ಜೀವಿಗಳನ್ನು ಎಂದೂ ಸಂಸಾರಕ್ಕೆ ಮರಳದಂತೆ ವಿಶೇಷರೀತಿಯಲ್ಲಿ ಧರಿಸಿರುವವನೆ ಎಂದೂ ಅರ್ಥವಾಗುವುದು.

೫. **ಸುಭಕ್ತಿಮ್** ಎಂಬುದಕ್ಕೆ ನವವಿಧದ್ವೇಷರಹಿತವಾದ ಶ್ರವಣಾದಿ ನವವಿಧವಾದ ವಿಶಿಷ್ಟವಾದ ಭಕ್ತಿಯನ್ನು ನೀಡು ಎಂಬುದು ವಿಶೇಷಾರ್ಥ.

೬. **ಸುಭಕ್ತಿಮ್** ಎಂಬುದಕ್ಕೆ ಅತ್ಯಂತ ನಿರ್ಮಲವಾದ ಭಕ್ತಿಯನ್ನು ಶ್ರೀಹರಿಯಲ್ಲಿ ಅನಾದಿಕಾಲದಿಂದ ಅನಂತಕಾಲದವರೆಗೂ ಹೊಂದಿರುವ ಭಕ್ತಿಯ ಅಭಿಮಾನಿದೇವತೆಯೇ ಆದ ವಾಯುದೇವರನ್ನು ನಮಗೆ ಗುರುಗಳನ್ನಾಗಿ ನೀಡು ಎಂಬ ಅರ್ಥವೂ ಇದಕ್ಕೆ ಉಚಿತವಾಗುವುದು.

**ಶರಣಂ ಕಾರಣ ಭಾವನ ಭವ ಮೇ ತಾತ ಸದಾಽಲಮ್ ।**
**ಕರುಣಾಪೂರ್ಣ ವರಪ್ರದ ಚರಿತಂ ಜ್ಞಾಪಯ ಮೇ ತೇ ॥ ೬ ॥**

**ಪ :** ಶರಣಮ್, ಕಾರಣ, ಭಾವನ, ಭವ, ಮೇ, ತಾತ, ಸದಾ, ಅಲಮ್, ಕರುಣಾಪೂರ್ಣ, ವರಪ್ರದ, ಚರಿತಮ್, ಜ್ಞಾಪಯ, ಮೇ, ತೇ ।

**ಅ :** ಕಾರಣ, ಭಾವನ, ತಾತ, ಮೇ, ಸದಾ, ಶರಣಮ್, ಭವ, ಕರುಣಾಪೂರ್ಣ, ವರಪ್ರದ, ತೇ, ಚರಿತಮ್, ಮೇ, ಅಲಮ್, ಜ್ಞಾಪಯ ।

**ಪ್ರ.ಪ. : ಕಾರಣ** – ಸಕಲಕ್ಕೂ ಕಾರಣನೇ!; **ಭಾವನ** – ಸೃಷ್ಟ್ಯಾದಿಗಳನ್ನು ಮಾಡುವವನೇ!; **ತಾತ** – ತಂದೆಯೇ!; **ಮೇ** – ನನಗೆ; **ಸದಾ** – ಸದಾ; **ಶರಣಮ್** – ಆಸರೆಯಾಗಿ; **ಭವ** – ಆಗು; (**ಕರುಣಾಪೂರ್ಣ** – ಕರುಣೆಯಿಂದ ತುಂಬಿದವನೇ!; **ವರಪ್ರದ** – ವರ ನೀಡುವವನೇ!; **ತೇ** – ನಿನ್ನ; **ಚರಿತಮ್** – ಮಹಿಮೆಯನ್ನು; **ಮೇ** – ನನಗೆ; **ಜ್ಞಾಪಯ** – ತಿಳಿಸಿಕೊಡು.)

**ಕಾರಣಕು ಕಾರಣನೆ ಹೇ ತಂದೆ ನೀನೆನಗೆ**
**ಎಂದೆಂದು ಪರಮಗತಿಯು ।**
**ಕರುಣೆ ತುಂಬಿರುವವನೆ ವರಗಳನು ನೀಡುವನೆ**
**ತಿಳಿಸೆನಗೆ ನಿನ್ನ ಮಹಿಮೆ ॥ ೬ ॥**

**ಅನು : ಸಕಲಕ್ಕೂ ಕಾರಣನೇ!, ಸೃಷ್ಟ್ಯಾದಿಗಳನ್ನು ಮಾಡುವವನೇ! ತಂದೆಯೇ! ನನಗೆ ಸದಾ ಆಸರೆಯಾಗಿ ಆಗು, (ಕರುಣೆಯಿಂದ ತುಂಬಿದವನೇ! ವರ ನೀಡುವವನೇ! ನಿನ್ನ ಮಹಿಮೆಯನ್ನು ನನಗೆ ತಿಳಿಸಿಕೊಡು.)**

ವಿ : ೧. ಶ್ರೀಹರಿಯು ಎಲ್ಲದಕ್ಕೂ ಕಾರಣನು ಎಂದರೆ ನಿಮಿತ್ತ ಕಾರಣ ಎಂದರ್ಥ; ಗಡಿಗೆಯ ನಿರ್ಮಾಣಕ್ಕೆ ಕುಂಬಾರ ಹೇಗೋ ಹಾಗೆ ನಿಮಿತ್ತಕಾರಣನೇ ಹೊರತು, ಮಣ್ಣಿನಂತೆ ಉಪಾದನಕಾರಣನಲ್ಲ ಎಂದರ್ಥ.

೨. ಆದರಂತೆ ಯೋಗಿಗಳಿಗೆ ಜ್ಞಾನ, ಸಮಯದಲ್ಲಿ ತನ್ನ ದರ್ಶನವಿತ್ತು ಅನುಗ್ರಹಿಸುವವನು ಅವನೇ; ಯೋಗಿಗಳು ಧ್ಯಾನ ಮಾಡಲಾಗಲೀ, ದರ್ಶನ ಮಾಡಲಾಗಲೀ ಶ್ರೀಹರಿಯ ದಯೆಯಿಂದ ಮಾತ್ರ ಸಾಧ್ಯ ಎಂದು ಭಾವ.

೩. ಇತರ ದೇವತೆಗಳು ಸೃಷ್ಟ್ಯಾದಿಗಳನ್ನು ಮಾಡುವುದು ಒಂದು ಕಾಲದಲ್ಲಿ, ಒಂದು ಹಂತದಲ್ಲಿ ಮಾತ್ರ; ಆದರೆ ಶ್ರೀಹರಿಯು ಸೃಷ್ಟಿ ಮೊದಲಾದವುಗಳನ್ನು ಸ್ವತಂತ್ರವಾಗಿ, ಸದಾ ಕಾಲ ಮಾಡುವನು ಎಂದು ಭಾವ.

೪. ಈ ಕಾರಣದಿಂದಾಗಿ ಶ್ರೀಹರಿಯು ಸದಾಕಾಲದಲ್ಲಿ ಆಸರೆಯಾಗಿರುವನು ಎಂಬ ವಿಶೇಷಾಂಶ ತಿಳಿಯುವುದು.

೫. ಇಲ್ಲಿ **ತಾತ** ಎಂದರೆ ತಂದೆ ಎಂದು ಅರ್ಥ; ಶ್ರೀಹರಿಯನ್ನು ಹೀಗೆ ತಂದೆ ಎಂದು ಕರೆಯುವ ಮೂಲಕ ಶ್ರೀಮದಾಚಾರ್ಯರು ತಾವು ಶ್ರೀಹರಿಯ ಸಂಕರ್ಷಣ ಹಾಗೂ ಮಹಾಲಕ್ಷ್ಮಿಯ ಜಯ ಎಂಬ ರೂಪಗಳ[೧] ಪುತ್ರ ಎಂಬುದನ್ನು ಸ್ಪಷ್ಟಪಡಿಸಿರುವರು ಎಂದು ತಿಳಿಯಬಹುದು.

೬. ಸದಾ **ಶರಣಂ** ಭವ ಎನ್ನುವ ಮೂಲಕ ಶ್ರೀಹರಿಯೊಂದಿಗೆ ಭಕ್ತರ ಸಂಬಂಧವು ಅನಾದಿ ಹಾಗೂ ಅನಂತ ಎಂಬ ವಿಶೇಷಾರ್ಥ ಸೂಚಿತವಾಗುವುದು. ಇದು **ದ್ವಾಸುಪರ್ಣಾ ಸಯುಜಾ ಸಖಾಯಾ** ಎಂಬ ಶ್ರುತಿಯ ಅರ್ಥವಾಗಿ ಸಮಂಜಸವೆನ್ನಿಸುವುದು.

**ಮರಣಪ್ರಾಣದ ಪಾಲಕ ಜಗದೀಶಾವ ಸುಭಕ್ತಿಮ್ ।**
**ಕರುಣಾಪೂರ್ಣ ವರಪ್ರದ ಚರಿತಂ ಜ್ಞಾಪಯ ಮೇ ತೇ ॥ ೭ ॥**

**ಪ :** ಮರಣಪ್ರಾಣದ, ಪಾಲಕ, ಜಗದೀಶ, ಅವ, ಸುಭಕ್ತಿಮ್, ಕರುಣಾಪೂರ್ಣ, ವರಪ್ರದ, ಚರಿತಮ್, ಜ್ಞಾಪಯ, ಮೇ, ತೇ ।

**ಅ :** ಮರಣಪ್ರಾಣದ, ಪಾಲಕ, ಜಗದೀಶ, ಸುಭಕ್ತಿಮ್, ಅವ, ಕರುಣಾಪೂರ್ಣ, ವರಪ್ರದ, ತೇ, ಚರಿತಮ್, ಮೇ, ಜ್ಞಾಪಯ ।

ಪ್ರ.ಪ. : **ಮರಣಪ್ರಾಣದ** – ಹುಟ್ಟುಸಾವುಗಳನ್ನು ನೀಡುವವನೇ!; **ಪಾಲಕ** – ರಕ್ಷಕನೇ!; **ಜಗದೀಶ** – ಜಗತ್ತಿಗೆ ಒಡೆಯನೇ!; **ಸುಭಕ್ತಿಮ್** – ನನ್ನಲ್ಲಿ ನಿನಗಿರುವ ಒಳ್ಳೆಯ ಭಕ್ತಿಯನ್ನು; **ಅವ** – ರಕ್ಷಿಸು; (**ಕರುಣಾಪೂರ್ಣ** – ಕರುಣೆಯಿಂದ ತುಂಬಿದವನೇ!; **ವರಪ್ರದ** – ವರ ನೀಡುವವನೇ!; **ತೇ** – ನಿನ್ನ; **ಚರಿತಮ್** – ಮಹಿಮೆಯನ್ನು; **ಮೇ** – ನನಗೆ; **ಜ್ಞಾಪಯ** – ತಿಳಿಸಿಕೊಡು.)

**ಅಳಿಸುವನೆ ಉಳಿಸುವನೆ ನಲಿಸುವನೆ ಜಗದೀಶ**
**ನೀಡೆನಗೆ ಭಕುತಿ ಸಲಹು ।**
**ಕರುಣೆ ತುಂಬಿರುವವನೆ ವರಗಳನು ನೀಡುವನೆ**
**ತಿಳಿಸೆನಗೆ ನಿನ್ನ ಮಹಿಮೆ** ॥ ೭ ॥

---

೧. ಸಂಕರ್ಷಣಾಚ್ಚಾಪಿ ಜಯಾತನೂಜೋ ಬಭೂವ ಸಾಕ್ಷಾದ್ಬಲಸಂವಿದಾತ್ಮಾ ।
ವಾಯುರ್ಯ ಏವಾಥ ವಿರಿಂಚನಾಮಾ ಭವಿಷ್ಯ ಆದ್ಯೋ ನ ಪರಸ್ತತೋ ಹಿ ॥
– ಮ.ಭಾ.ತಾ.ನಿ.(೩/೧೦)

**ಅನು : ಹುಟ್ಟುಸಾವುಗಳನ್ನು ನೀಡುವವನೇ! ರಕ್ಷಕನೇ! ಜಗತ್ತಿಗೆ ಒಡೆಯನೇ! ನನ್ನಲ್ಲಿ ನಿನಗಿರುವ ಒಳ್ಳೆಯ ಭಕ್ತಿಯನ್ನು ರಕ್ಷಿಸು, (ಕರುಣೆಯಿಂದ ತುಂಬಿದವನೇ! ವರ ನೀಡುವವನೇ! ನಿನ್ನ ಮಹಿಮೆಯನ್ನು ನನಗೆ ತಿಳಿಸಿಕೊಡು.)**

ವಿ : ೧. ಈ ಶ್ಲೋಕದಲ್ಲಿ ಶ್ರೀಹರಿಯು ರಕ್ಷಕನಾಗಿರುವಂತೆ, ಸಕಲ ಲಯಕರ್ತನೂ ಆಗಿರುವನು. ಅದರಂತೆ ಜೀವಜಾತದ ಸಕಲವಿಧಸಂರಕ್ಷಕನೂ ಆಗಿರುವನು ಎಂಬ ವಿಶೇಷಾಂಶ ನಿರೂಪಿತವಾಗಿದೆ.

೨. ಶ್ರೀಹರಿಯು **ಮರಣದ** ಎಂದರೆ ಲಯಕರ್ತ, **ಪ್ರಾಣದ** ಎಂದರೆ ಸೃಷ್ಟಿಕರ್ತ ಎಂದು ಅರ್ಥ.

೩. ಮೋಕ್ಷಕ್ಕೆ ನಿತ್ಯ ಸಾಧನೆಯೆಂದರೆ ಸುಭಕ್ತಿ; ಎಂದರೆ ಒಳ್ಳೆಯ ಭಕ್ತಿ ಎಂದರ್ಥ. ಆದ್ದರಿಂದ ಅದು ಸದಾ ಅಚಲವಾಗಿರಬೇಕು; ಹಾಗೆಯೇ ಅದು ಅಚಲವಾಗಿರಲಿ, ಆ ಮೂಲಕ ಸಾಧನೆ ನಿರಂತರ ಪ್ರಗತಿಪಥದಲ್ಲಿ ಸಾಗಲಿ ಎಂದು ಭಾವ.

೪. **ಜಗದೀಶ** ಎಂದರೆ ವಾಯುದೇವರಿಗೆ ಮುಖ್ಯ ಒಡೆಯ, ಸಾಕ್ಷಾದ್ ಬಿಂಬ ಎಂದೂ ಅರ್ಥ: **ಜಗದಿತಿ ಪ್ರಾಣಃ** (ಕೋಶ).

೫. **ಮರಣಪ್ರಾಣದಪಾಲಕಜಗದೀಶ** ಎಂಬುದಾಗಿ ಇದನ್ನು ಒಂದೇ ಸಮಸ್ತಪದ-ವನ್ನಾಗಿಯೂ ಅರ್ಥಮಾಡಿಕೊಳ್ಳಬಹುದು. ಜಗತ್ತಿಗೆ ಮರಣವನ್ನು, ಸೃಷ್ಟಿಯನ್ನು ಕೊಡುವ ಪಾಲಕನೂ ಆದ ವಾಯುದೇವರಿಗೆ ಸ್ವಾಮಿ ಎಂಬುದು ಇದರ ಅರ್ಥ.

**ತರುಣಾದಿತ್ಯಸವರ್ಣಕಚರಣಾಬ್ಜಾಮಲಕೀರ್ತೇ ।**
**ಕರುಣಾಪೂರ್ಣ ವರಪ್ರದ ಚರಿತಂ ಜ್ಞಾಪಯ ಮೇ ತೇ ॥ ೮ ॥**

**ಪ :** ತರುಣಾದಿತ್ಯಸವರ್ಣಕಚರಣಾಬ್ಜ, ಅಮಲಕೀರ್ತೇ, ಕರುಣಾಪೂರ್ಣ, ವರಪ್ರದ, ಚರಿತಮ್, ಜ್ಞಾಪಯ, ಮೇ, ತೇ ।

**ಅ :** ತರುಣಾದಿತ್ಯಸವರ್ಣಕಚರಣಾಬ್ಜ, ಅಮಲಕೀರ್ತೇ, ಕರುಣಾಪೂರ್ಣ, ವರಪ್ರದ, ತೇ, ಚರಿತಮ್, ಮೇ, ಜ್ಞಾಪಯ ।

**ಪ್ರ.ಪ. : ತರುಣಾದಿತ್ಯಸವರ್ಣಕಚರಣಾಬ್ಜ** – ತರುಣ ಸೂರ್ಯನನ್ನು ಹೋಲುವ ಚರಣಕಮಲವನ್ನು ಹೊಂದಿರುವವನೇ!; **ಅಮಲಕೀರ್ತೇ** – ನಿರ್ಮಲವಾದ ಕೀರ್ತಿಯುಳ್ಳವನೇ!; (**ಕರುಣಾಪೂರ್ಣ** – ಕರುಣೆಯಿಂದ ತುಂಬಿದವನೇ!; **ವರಪ್ರದ** – ವರ ನೀಡುವವನೇ!; **ತೇ** – ನಿನ್ನ; **ಚರಿತಮ್** – ಮಹಿಮೆಯನ್ನು; **ಮೇ** – ನನಗೆ; **ಜ್ಞಾಪಯ** – ತಿಳಿಸಿಕೊಡು.)

**ಉದಿಸುತಿಹ ರವಿಯ ತೆರ ಪೊಳೆವ ಚರಣನು ನೀನು**
**ಅತ್ಯಂತ ವಿಮಲ ಚರಿತ।**
**ಕರುಣೆ ತುಂಬಿರುವವನೆ ವರಗಳನು ನೀಡುವನೆ**
**ತಿಳಿಸೆನಗೆ ನಿನ್ನ ಮಹಿಮೆ** ॥ ೮ ॥

ಅನು : ತರುಣಸೂರ್ಯನನ್ನು ಹೋಲುವ ಚರಣಕಮಲವನ್ನು ಹೊಂದಿರುವವನೇ! ನಿರ್ಮಲವಾದ ಕೀರ್ತಿಯುಳ್ಳವನೇ!, (ಕರುಣೆಯಿಂದ ತುಂಬಿದವನೇ! ವರ ನೀಡುವವನೇ! ನಿನ್ನ ಮಹಿಮೆಯನ್ನು ನನಗೆ ತಿಳಿಸಿಕೊಡು.)

ವಿ : ೧. ಈ ಶ್ಲೋಕದಿಂದ ಪ್ರಾರಂಭಿಸಿ, ಹದಿನೆಂಟರ ವರೆಗಿನ ಮುಂದಿನ ಶ್ಲೋಕಗಳಲ್ಲಿ ಶ್ರೀಹರಿಯ ಪಾದಾದಿಶಿರಃಪರ್ಯಂತ ವರ್ಣನೆ ಬಂದಿದೆ.

೨. ಶ್ರೀಹರಿಯ ಪಾದವು ಬಾಲಸೂರ್ಯನಂತೆ ಹೊಂಬಣ್ಣದಿಂದ ಶೋಭಿಸುವುದು ಎಂದರ್ಥ.

೩. '**ಅಮಲ**' ಎಂದರೆ ನಿರ್ದೋಷ ಎಂದರ್ಥ; '**ಅಮಲಕೀರ್ತಿ**' ಎಂದರೆ ಶ್ರೀಹರಿಯು ನಿರ್ಮಲವಾದ ಕೀರ್ತಿಯುಳ್ಳವನು, ಪುಣ್ಯಶ್ಲೋಕ ಎಂದು ಭಾವ.

೪. ಹೀಗೆ ಪಾದಗಳು ಕೆಂಪಾಗಿರುವುದು; ದ್ವಾತ್ರಿಂಶಲ್ಲಕ್ಷಣಗಳಲ್ಲಿ ಒಂದಾಗಿದ್ದು ಶ್ರೀಹರಿಯು ಸಕಲ ಗುಣಪೂರ್ಣನಾದ ಸರ್ವೋತ್ತಮ ಎಂದರ್ಥ.

೫. ಇಲ್ಲಿ **ಸವರ್ಣಕ** ಎಂದು ಅರ್ಥಮಾಡಿಕೊಂಡರೆ, ಪಾದದಿಂದ ಪ್ರಾರಂಭಿಸಿ ಶಿರಸ್ಸಿನವರೆಗೆ ಯಥೋಚಿತವಾಗಿ ಸಮುಚಿತವರ್ಣಗಳಿಂದ ಕೂಡಿದವನು ಎಂಬ ವಿಶೇಷಾಂಶ ತಿಳಿಯುವುದು.

೬. **ತರುಣಾದಿತ್ಯಸವರ್ಣ, ಕಚರಣಾಬ್ಜ, ಅಮಲ, ಕೀರ್ತೇ** ಎಂಬುದಾಗಿಯೂ ಇದನ್ನು ವಿಭಾಗ ಮಾಡಿ ಅರ್ಥಮಾಡಿಕೊಳ್ಳಬಹುದು. **ತರುಣಾದಿತ್ಯಸವರ್ಣ** ಎಂದರೆ ತರುಣಸೂರ್ಯನಿಗೆ ಸದೃಶವಾದ ವರ್ಣ ಉಳ್ಳವನೇ, **ಕಚರಣಾಬ್ಜ** – [1]ಕ ಎಂದರೆ ಆನಂದ, ಆನಂದಮಯವಾದ ಸಕಲ ಅವಯವಗಳನ್ನು ಹೊಂದಿದವನೇ, **ಅಮಲ** – ನಿರ್ಮಲನೇ, **ಕೀರ್ತೇ** – ಕೀರ್ತಿಸ್ವರೂಪನೇ ಎಂದೂ ಇದಕ್ಕೆ ಅರ್ಥವಾಗುವುದು.

**ಸಲಿಲಪ್ರೋತ್ಥಸರಾಗಕಮಣಿವರ್ಣೋಚ್ಚನಖಾದೇ ।**
**ಕರುಣಾಪೂರ್ಣ ವರಪ್ರದ ಚರಿತಂ ಜ್ಞಾಪಯ ಮೇ ತೇ** ॥ ೯ ॥

---

೧. ಸ್ವಿತ್ಯಾನಂದಃ ಸಮುದ್ದಿಷ್ಟೋ ವರಿತಿ ಜ್ಞಾನಮುಚ್ಯತೇ।
ಮೋಕ್ಷದಾನೇನ ತಜ್ಞಾನಾದ್ ಸುವರಸ್ಯ ಪದದ್ವಯಮ್ ॥ – ಬೃಹದ್ಭಾಷ್ಯ

**ಪ :** ಸಲಿಲಪ್ರೋತ್ಥಸರಾಗಕಮಣಿವರ್ಣ, ಉಚ್ಚನಖಾದೇ, ಕರುಣಾಪೂರ್ಣ, ವರಪ್ರದ, ಚರಿತಮ್, ಜ್ಞಾಪಯ, ಮೇ, ತೇ।

**ಅ :** ಸಲಿಲಪ್ರೋತ್ಥಸರಾಗಕಮಣಿವರ್ಣ, ಉಚ್ಚನಖಾದೇ, ಕರುಣಾಪೂರ್ಣ, ವರಪ್ರದ, ತೇ, ಚರಿತಮ್, ಮೇ, ಜ್ಞಾಪಯ।

**ಪ್ರ.ಪ. : ಸಲಿಲಪ್ರೋತ್ಥಸರಾಗಕಮಣಿವರ್ಣ** – ಜಲದಲ್ಲಿ ಅರಳಿದ ಕೆಂಪುಕಮಲವನ್ನು ಹೋಲುವ ಪದ್ಮರಾಗಮಣಿಯಂತೆ ಕಂಗೊಳಿಸುವ; **ಉಚ್ಚನಖಾದೇ** – ಶ್ರೇಷ್ಠವಾದ ನಖ ಮೊದಲಾದವುಗಳನ್ನು ಹೊಂದಿದವನೇ!; (**ಕರುಣಾಪೂರ್ಣ** – ಕರುಣೆಯಿಂದ ತುಂಬಿದವನೇ!; **ವರಪ್ರದ** – ವರ ನೀಡುವವನೇ!; **ತೇ** – ನಿನ್ನ; **ಚರಿತಮ್** – ಮಹಿಮೆಯನ್ನು; **ಮೇ** – ನನಗೆ; **ಜ್ಞಾಪಯ** – ತಿಳಿಸಿಕೊಡು.)

**ಜಲದಿಂದ ಚಿಮ್ಮಿರುವ ಕೆಂಪು ಕಮಲದೊಲಿರುವ**
**ವರಪದ್ಮರಾಗನಖರ।**
**ಕರುಣೆ ತುಂಬಿರುವವನೆ ವರಗಳನು ನೀಡುವನೆ**
**ತಿಳಿಸೆನಗೆ ನಿನ್ನ ಮಹಿಮೆ** ॥ ೯ ॥

**ಅನು : ಜಲದಲ್ಲಿ ಅರಳಿದ ಕೆಂಪುಕಮಲವನ್ನು ಹೋಲುವ ಪದ್ಮರಾಗಮಣಿಯಂತೆ ಕಂಗೊಳಿಸುವ, ಶ್ರೇಷ್ಠವಾದ ನಖ ಮೊದಲಾದವುಗಳನ್ನು ಹೊಂದಿದವನೇ! (ಕರುಣೆಯಿಂದ ತುಂಬಿದವನೇ! ವರ ನೀಡುವವನೇ! ನಿನ್ನ ಮಹಿಮೆಯನ್ನು ನನಗೆ ತಿಳಿಸಿಕೊಡು.)**

ವಿ : ೧. ಶ್ರೀಹರಿಯ ನಖಗಳ ವರ್ಣನೆ ಇದರಲ್ಲಿದ್ದು, ಇದು ಒಂದರೀತಿಯಲ್ಲಿ ನಖಸ್ತುತಿಯ ಮೊದಲ ಶ್ಲೋಕದ ಭಾವದಂತಿದೆ:

**ಪಾಂತ್ವಸ್ಮಾನ್ ಪುರುಹೂತವೈರಿಬಲವನ್ಮಾತಂಗಮಾದ್ಯದ್ಘಟಾ-**
**ಕುಂಭೋಚ್ಚಾದ್ರಿವಿಪಾಟನಾಧಿಕಪಟುಪ್ರತ್ಯೇಕವಜ್ರಾಯಿತಾಃ।**
**ಶ್ರೀಮತ್ಕಂಠೀರವಾಸ್ಯ ಪ್ರತತಸುನಖರಾ ದಾರಿತಾರಾತಿದೂರ-**
**ಪ್ರಧ್ವಸ್ತಧ್ವಾಂತಶಾಂತಪ್ರವಿತತಮನಸಾ ಭಾವಿತಾ ನಾಕಿವೃಂದೈಃ**

೨. ಲಕ್ಷಣಶಾಸ್ತ್ರದಂತೆ ಪಾದಗಳಂತೆ ನಖಗಳು ಸಹ ಕೆಂಪಾಗಿರಬೇಕು ಎಂಬುದು ನಿಯಮ; ಅದರಂತೆ ಉಚ್ಚವಾಗಿರಬೇಕು ಎಂದೂ ಸಹ.

೩. ಅದರಂತೆ ಶ್ರೀಹರಿಯ ನಖಗಳು ಕೆಂಪುಕಮಲಗಳಂತೆ ಹಾಗೂ ಪದ್ಮರಾಗಮಣಿಯಂತೆ ಉನ್ನತವಾಗಿದ್ದು, ಕೆಂಬಣ್ಣದಿಂದ ಕೂಡಿದೆ ಎಂಬ ವರ್ಣನೆ ಇಲ್ಲಿದೆ.

೪. ಇಲ್ಲಿ ಆದಿ ಎಂದು ವಿಭಾಗವಮಾಡಿಕೊಂಡರೆ, ಶ್ರೀಹರಿಯು ಎಲ್ಲದಕ್ಕೂ ಮೊದಲಿನವನು ಹಾಗೂ ಮೊದಲ ಕಾರಣನು ಎಂಬ ಎರಡು ಅರ್ಥಗಳು ಲಭಿಸುವವು.

**[೧]ಖಜತೂಣೀನಿಭಪಾವನವರಜಂಘಾಮಿತಶಕ್ತೇ ।**
**ಕರುಣಾಪೂರ್ಣ ವರಪ್ರದ ಚರಿತಂ ಜ್ಞಾಪಯ ಮೇ ತೇ ॥ ೧೦ ॥**

**ಪ :** ಖಜತೂಣೀನಿಭಪಾವನವರಜಂಘ, ಅಮಿತಶಕ್ತೇ, ಕರುಣಾಪೂರ್ಣ, ವರಪ್ರದ, ಚರಿತಮ್, ಜ್ಞಾಪಯ, ಮೇ, ತೇ ।

**ಅ :** ಖಜತೂಣೀನಿಭಪಾವನವರಜಂಘ, ಅಮಿತಶಕ್ತೇ, ಕರುಣಾಪೂರ್ಣ, ವರಪ್ರದ, ತೇ, ಚರಿತಮ್, ಮೇ, ಜ್ಞಾಪಯ ।

**ಪ್ರ.ಪ. : ಖಜತೂಣೀನಿಭಪಾವನವರಜಂಘ** – ಕಾಮನ ಬತ್ತಳಿಕೆಯನ್ನು ಹೋಲುವ ಪಾವನವಾದ ಶ್ರೇಷ್ಠ ಜಂಘೆಗಳಿಂದ ಕೂಡಿದವನೇ!; **ಅಮಿತಶಕ್ತೇ** – ಅಪರಿಮಿತ ಶಕ್ತಿಸಂಪನ್ನನೇ!; (**ಕರುಣಾಪೂರ್ಣ** – ಕರುಣೆಯಿಂದ ತುಂಬಿದವನೇ!; **ವರಪ್ರದ** – ವರ ನೀಡುವವನೇ!; **ತೇ** – ನಿನ್ನ; **ಚರಿತಮ್** – ಮಹಿಮೆಯನ್ನು; **ಮೇ** – ನನಗೆ; **ಜ್ಞಾಪಯ** – ತಿಳಿಸಿಕೊಡು.)

**ವರಇಂದ್ರಚಾಪದೊಲು ಇರುತಿರುವ ಅತಿವಿಮಲ**
**ವರಜಂಘ ಅಮಿತಬಲನೆ ।**
**ಕರುಣೆ ತುಂಬಿರುವವನೆ ವರಗಳನು ನೀಡುವನೆ**
**ತಿಳಿಸೆನಗೆ ನಿನ್ನ ಮಹಿಮೆ ॥ ೧೦ ॥**

**ಅನು : ಕಾಮನ ಬತ್ತಳಿಕೆಯನ್ನು ಹೋಲುವ ಪಾವನವಾದ ಶ್ರೇಷ್ಠ ಜಂಘೆಗಳಿಂದ ಕೂಡಿದವನೇ! ಅಪರಿಮಿತ ಶಕ್ತಿಸಂಪನ್ನನೇ! (ಕರುಣೆಯಿಂದ ತುಂಬಿದವನೇ! ವರ ನೀಡುವವನೇ! ನಿನ್ನ ಮಹಿಮೆಯನ್ನು ನನಗೆ ತಿಳಿಸಿಕೊಡು.)**

ವಿ : ೧. ಈ ಶ್ಲೋಕದಲ್ಲಿ ಶ್ರೀಹರಿಯ ಮೊಣಕಾಲುಗಳ ವರ್ಣನೆ ಬಂದಿದೆ.

೨. ನೀಲಾಕಾಶದಲ್ಲಿ ಹೊಳೆಯುವ ಕಾಮನಬಿಲ್ಲಿನಂತೆ ನೀಲಮೇಘಶ್ಯಾಮನಾದ ಶ್ರೀಹರಿಯ ಎರಡು ಮೊಣಕಾಲುಗಳು ಶೋಭಿಸುತ್ತಿವೆ ಎಂದರ್ಥ.

೩. ಇಲ್ಲಿ ಕಾಮನ ಬತ್ತಳಿಕೆಯ ದೃಷ್ಟಾಂತದ ಮೂಲಕ ಶ್ರೀಹರಿಯ ಮೊಣಕಾಲುಗಳ ಚಿಂತನೆಯ ಮೂಲಕ ಭಕ್ತನ ಕಾಮಿತ ಪುರುಷಾರ್ಥಗಳು ಸಿದ್ಧಿಸುವವು ಎಂಬ ವಿಶೇಷಾರ್ಥ ಸೂಚಿತ.

---

೧. ಕಜತೂಣೀನಿಭ.... (ಪಾ.)

**ಇಭಹಸ್ತಪ್ರಭಶೋಭನಪರಮೋರುಸ್ಥರಮಾಲೇ ।**
**ಕರುಣಾಪೂರ್ಣ ವರಪ್ರದ ಚರಿತಂ ಜ್ಞಾಪಯ ಮೇ ತೇ ॥ ೧೧ ॥**

**ಪ** : ಇಭಹಸ್ತಪ್ರಭಶೋಭನಪರಮೋರುಸ್ಥರಮಾಲೇ, ಕರುಣಾಪೂರ್ಣ, ವರಪ್ರದ, ಚರಿತಮ್, ಜ್ಞಾಪಯ, ಮೇ, ತೇ।

**ಅ** : ಇಭಹಸ್ತಪ್ರಭಶೋಭನಪರಮೋರುಸ್ಥರಮಾಲೇ, ಕರುಣಾಪೂರ್ಣ, ವರಪ್ರದ, ತೇ, ಚರಿತಮ್, ಮೇ, ಜ್ಞಾಪಯ।

**ಪ್ರ.ಪ. : ಇಭಹಸ್ತಪ್ರಭಶೋಭನಪರಮೋರುಸ್ಥರಮಾಲೇ** – ಆನೆಯ ಸೊಂಡಿಲಿನಂತಹ ಕಾಂತಿಯ ಮಂಗಳಕರವಾದ ಸರ್ವೋತ್ಕೃಷ್ಟವಾದ, ತೊಡೆಯಮೇಲೆ ಮಹಾಲಕ್ಷ್ಮಿ ಎಂಬ ದುಂಬಿಯನ್ನು ಹೊಂದಿರುವವನೇ!; (**ಕರುಣಾಪೂರ್ಣ** – ಕರುಣೆಯಿಂದ ತುಂಬಿದವನೇ!; **ವರಪ್ರದ** – ವರ ನೀಡುವವನೇ!; **ತೇ** – ನಿನ್ನ; **ಚರಿತಮ್** – ಮಹಿಮೆಯನ್ನು; **ಮೇ** – ನನಗೆ; **ಜ್ಞಾಪಯ** – ತಿಳಿಸಿಕೊಡು.)

**ಕರಿಕರವ ಪೋಲುತಿಹ ಚೆಲುತೊಡೆಯ ಮೇಲಿಹಳು**
**ರಮೆ ನಿರುತ ಭ್ರಮರದಂತೆ।**
**ಕರುಣೆ ತುಂಬಿರುವವನೆ ವರಗಳನು ನೀಡುವನೆ**
**ತಿಳಿಸೆನಗೆ ನಿನ್ನ ಮಹಿಮೆ ॥ ೧೧ ॥**

**ಅನು : ಆನೆಯ ಸೊಂಡಿಲಿನಂತಹ ಕಾಂತಿಯ ಮಂಗಳಕರವಾದ ಸರ್ವೋತ್ಕೃಷ್ಟವಾದ, ತೊಡೆಯಮೇಲೆ ಮಹಾಲಕ್ಷ್ಮಿ ಎಂಬ ದುಂಬಿಯನ್ನು ಹೊಂದಿರುವವನೇ! (ಕರುಣೆಯಿಂದ ತುಂಬಿದವನೇ! ವರ ನೀಡುವವನೇ! ನಿನ್ನ ಮಹಿಮೆಯನ್ನು ನನಗೆ ತಿಳಿಸಿಕೊಡು.)**

ವಿ : ೧. ಶ್ರೀಹರಿಯ ತೊಡೆಯ ವರ್ಣನೆ ಇದರಲ್ಲಿದೆ.

೨. ಶ್ರೀಹರಿಯ ತೊಡೆಯು ಆನೆಯ ಸೊಂಡಲಿನಂತೆ ಕಂಗೊಳಿಸುವುದು. ಮಂಗಳಕರವಾದಂತಹ ಆ ತೊಡೆಯ ಮೇಲೆ ಮಹಾಲಕ್ಷ್ಮಿಯು ಕುಳಿತಿರುವಳು ಎಂದರ್ಥ.

೩. ಆನೆಯ ಮದರಸಕ್ಕೆ ದುಂಬಿಗಳು ಆಕರ್ಷಿತವಾಗಿ ಧಾವಿಸುವ ಸಂಗತಿಯು ಸುಪ್ರಸಿದ್ಧವಾದುದು; ಶ್ರೀಹರಿಯ ತೊಡೆಯು ಆನೆಯ ಸೊಂಡಲಿನಂತಿರುವದರಿಂದ ಮಹಾಲಕ್ಷ್ಮಿಯು ದುಂಬಿಯಂತೆ ಆಕರ್ಷಿತಳಾಗುವಳು ಎಂದರ್ಥ.

೪. ಆಲಿ ಎಂಬುದಕ್ಕೆ ಗೆಳತಿ [೧]ಎಂಬರ್ಥವೂ ಇದೆ. ಆದ್ದರಿಂದ ಶ್ರೀಹರಿಯ ಆಕರ್ಷಣೆಗೊಳಗಾಗುವ ಅವನ ನಿತ್ಯ ಗೆಳತಿಯಾದ ಮಹಾಲಕ್ಷ್ಮಿಯು ಶ್ರೀಹರಿಯ ಬಳಿಗೆ ಅವನ ತೊಡೆಯೇರಿ ಕುಳ್ಳಿರಲೆಂದು ಧಾವಿಸುವಳು ಎಂಬ ಅರ್ಥವೂ ವಿವಕ್ಷಿತ.

**ಅಸನೋತ್ಫುಲ್ಲಸುಪುಷ್ಪಕಸಮವರ್ಣಾವರಣಾಂತೇ ।**
**ಕರುಣಾಪೂರ್ಣ ವರಪ್ರದ ಚರಿತಂ ಜ್ಞಾಪಯ ಮೇ ತೇ ॥ ೧೨ ॥**

**ಪ :** ಅಸನೋತ್ಫುಲ್ಲಸುಪುಷ್ಪಕಸಮವರ್ಣಾವರಣಾಂತೇ, ಕರುಣಾಪೂರ್ಣ, ವರಪ್ರದ, ಚರಿತಮ್, ಜ್ಞಾಪಯ, ಮೇ, ತೇ ।

**ಅ :** ಅಸನೋತ್ಫುಲ್ಲಸುಪುಷ್ಪಕಸಮವರ್ಣಾವರಣಾಂತೇ, ಕರುಣಾಪೂರ್ಣ, ವರಪ್ರದ, ತೇ, ಚರಿತಮ್, ಮೇ, ಜ್ಞಾಪಯ ।

**ಪ್ರ.ಪ. : ಅಸನೋತ್ಫುಲ್ಲಸುಪುಷ್ಪಕಸಮವರ್ಣಾವರಣಾಂತೇ** – ಅರಳಿದ ಹೊನ್ನೆ ಹೂವಿನಂತಹ ಹಳದಿ ಬಣ್ಣದಿಂದ ಕಂಗೊಳಿಸುವ ಪೀತಾಂಬರವನ್ನು ಧರಿಸಿದವನೇ!; (**ಕರುಣಾಪೂರ್ಣ** – ಕರುಣೆಯಿಂದ ತುಂಬಿದವನೇ!; **ವರಪ್ರದ** – ವರ ನೀಡುವವನೇ!; **ತೇ** – ನಿನ್ನ; **ಚರಿತಮ್** – ಮಹಿಮೆಯನ್ನು; **ಮೇ** – ನನಗೆ; **ಜ್ಞಾಪಯ** – ತಿಳಿಸಿಕೊಡು.)

**ಚೆಲುಹೊನ್ನೆ ಪುಷ್ಪದೊಲು ಅರಳಿ ನಿಂತಿರುವಂಥ**
**ಚೆಲುವಾದ ವಸನಧರನೆ ।**
**ಕರುಣೆ ತುಂಬಿರುವವನೆ ವರಗಳನು ನೀಡುವನೆ**
**ತಿಳಿಸೆನಗೆ ನಿನ್ನ ಮಹಿಮೆ ॥ ೧೨ ॥**

**ಅನು : ಅರಳಿದ ಹೊನ್ನೆಹೂವಿನಂತಹ ಹಳದಿ ಬಣ್ಣದಿಂದ ಕಂಗೊಳಿಸುವ ಪೀತಾಂಬರವನ್ನು ಧರಿಸಿದವನೇ! (ಕರುಣೆಯಿಂದ ತುಂಬಿದವನೇ! ವರ ನೀಡುವವನೇ! ನಿನ್ನ ಮಹಿಮೆಯನ್ನು ನನಗೆ ತಿಳಿಸಿಕೊಡು.)**

ವಿ : ೧. ಅಸನ ಎಂದರೆ ಹೊನ್ನೆ ಹೂವು; ಅದರ ಬಣ್ಣ ಅಚ್ಚ ಹಳದಿ. ಆ ಬಣ್ಣದ ಉಡುಗೆ ಎಂದರೆ ಪೀತಾಂಬರ ಎಂದರ್ಥ.

೨. ಹರನು ಚರ್ಮಾಂಬರಧಾರಿ. ಶ್ರೀಹರಿಯು ಪೀತಾಂಬರಧಾರಿ; ಎಂದರೆ ಹರನದು ತಪಸ್ವಿಯ ವೇಷ; ಹರಿಯದು ರಾಜಪೋಷಾಕು; ಅದು ಅವನು ಸರ್ವಸ್ವಾಮಿ ಎಂಬುದಕ್ಕೆ ದ್ಯೋತಕ ಎಂದು [೨]ಭಾವ.

---

೧. 'ಆಲಿಃ ಸಖೀ ವಯಸ್ಯಾ ಚ' (ಅಮರ); 'ಆಲಿಃ ಸಖೀ ...' (ಶಾಶ್ವತಕೋಶ)

೨. ಇದಕ್ಕೆ ಸಂಬಂಧಿಸಿದಂತೆ ಒಂದು ಸೂಕ್ತಿ ಹೀಗಿದೆ:

**ಶತಮೋದೋದ್ಭವಸುಂದರವರಪದ್ಮೋತ್ಥಿತನಾಭೇ ।**
**ಕರುಣಾಪೂರ್ಣ ವರಪ್ರದ ಚರಿತಂ ಜ್ಞಾಪಯ ಮೇ ತೇ ॥ ೧೩ ॥**

**ಪ** : ಶತಮೋದೋದ್ಭವಸುಂದರವರಪದ್ಮೋತ್ಥಿತನಾಭೇ, ಕರುಣಾಪೂರ್ಣ, ವರಪ್ರದ, ಚರಿತಮ್, ಜ್ಞಾಪಯ, ಮೇ, ತೇ ।

**ಅ** : ಶತಮೋದೋದ್ಭವಸುಂದರವರಪದ್ಮೋತ್ಥಿತನಾಭೇ, ಕರುಣಾಪೂರ್ಣ, ವರಪ್ರದ, ತೇ, ಚರಿತಮ್, ಮೇ, ಜ್ಞಾಪಯ ।

**ಪ್ರ.ಪ. : ಶತಮೋದೋದ್ಭವಸುಂದರವರಪದ್ಮೋತ್ಥಿತನಾಭೇ** – ಶತಾನಂದ ಎನ್ನಿಸಿದ ಬ್ರಹ್ಮದೇವರು ಜನಿಸಿದ ಸುಂದರವಾದ, ಶ್ರೇಷ್ಠವಾದ ಪದ್ಮವು ಹೊರಹೊಮ್ಮಿರುವ ನಾಭಿ ಉಳ್ಳವನೇ!; (**ಕರುಣಾಪೂರ್ಣ** – ಕರುಣೆಯಿಂದ ತುಂಬಿದವನೇ!; **ವರಪ್ರದ** – ವರ ನೀಡುವವನೇ!; **ತೇ** – ನಿನ್ನ; **ಚರಿತಮ್** – ಮಹಿಮೆಯನ್ನು; **ಮೇ** – ನನಗೆ; **ಜ್ಞಾಪಯ** – ತಿಳಿಸಿಕೊಡು.)

**ಚತುರಾಸ್ಯನನು ಪೆತ್ತ ವರಕಮಲ ಪೊಂದಿರುವ**
**ಚೆಲುವಾದ ಹೊಕ್ಕಳವನೆ ।**
**ಕರುಣೆ ತುಂಬಿರುವವನೆ ವರಗಳನು ನೀಡುವನೆ**
**ತಿಳಿಸೆನಗೆ ನಿನ್ನ ಮಹಿಮೆ** ॥ ೧೩ ॥

**ಅನು : ಶತಾನಂದ ಎನ್ನಿಸಿದ ಬ್ರಹ್ಮದೇವರು ಜನಿಸಿದ ಸುಂದರವಾದ, ಶ್ರೇಷ್ಠವಾದ ಪದ್ಮವು ಹೊರಹೊಮ್ಮಿರುವ ನಾಭಿ ಉಳ್ಳವನೇ! (ಕರುಣೆಯಿಂದ ತುಂಬಿದವನೇ! ವರ ನೀಡುವವನೇ! ನಿನ್ನ ಮಹಿಮೆಯನ್ನು ನನಗೆ ತಿಳಿಸಿಕೊಡು.)**

೧. ಶ್ರೀಹರಿಯ ನಾಭಿ ಅನನ್ಯವಾದುದು; ಅದರಿಂದ ಪ್ರಾದರ್ಭವಿಸಿದ ಕಮಲ ಹದಿನಾಲ್ಕು ಲೋಕಗಳ ಸಂಕೇತ; ಅದರ ಮಧ್ಯದಲ್ಲಿ ಚತುರ್ಮುಖಬ್ರಹ್ಮ ಉದ್ಭವಿಸಿದ ಎಂಬುದು ವೇದಪುರಾಣಗಳಿಂದ ತಿಳಿಯು ವಿಶೇಷಾಂಶ. ಈ ಹಿನ್ನೆಲೆಯಲ್ಲಿ ಈ ವರ್ಣನೆ ಬಂದಿದೆ.

೨. ಶತಾನಂದ ಎನ್ನಿಸಿದ ಬ್ರಹ್ಮನ ಹುಟ್ಟಿಗೆ ಕಾರಣವಾದ ಅದ್ಭುತಕಮಲ ಉದ್ಭವಿಸುವ ಅನನ್ಯವಾದ ನಾಭಿಕಮಲವೆನಿಸಿದೆ; ಅದಕ್ಕೆಂದೇ ಶ್ರೀಹರಿಗೆ ಪದ್ಮನಾಭ ಎಂಬ ಹೆಸರು.

೩. ಹೀಗೆ ಸೃಷ್ಟಿಕರ್ತನಾದ ಬ್ರಹ್ಮನ ಸೃಷ್ಟಿಗೇ ಕಾರಣವಾದ ನಾಭಿ ಎಂದು ಇದರ ಭಾವ.

---

ಕಿಂ ವಾಸಸ್ಯೆವಂ ನ ವಿಚಾರಣೀಯಂ ವಾಸಃ ಪ್ರಧಾನಂ ಖಲು ಯೋಗ್ಯತಾಯಾಃ ।
ಪೀತಾಂಬರಂ ವೀಕ್ಷ್ಯ ದದೌ ತನೂಜಾಂ ದಿಗಂಬರಂ ವೀಕ್ಷ್ಯ ವಿಷಂ ಸಮುದ್ರಃ ॥

೪. ಶತಮೋದ, ಉದ್ಭವ, ಸುಂದರ, ವರ, ಪದ್ಮೋತ್ಥಿತನಾಭೇ ಎಂಬುದಾಗಿ ವಿಭಾಗ ಮಾಡಿ ಅರ್ಥಮಾಡಿಕೊಳ್ಳಬಹುದು. ಶತಮೋದ ಎಂದರೆ ಪೂರ್ಣಾನಂದ, ಉದ್ಭವ ಎಂದರೆ ಉತ್ಕೃಷ್ಟವಾದ ಪ್ರಾದುರ್ಭಾವ ಉಳ್ಳವನು (**ಉದ್ಭವಃ** ಕ್ಷೋಭಣೋ ದೇವಃ; **ಉದ್ಭವಃ** ಸುಂದರಃ ಸುಂದಃ - ವಿಷ್ಣುಸಹಸ್ರನಾಮ), ವರ ಎಂದರೆ ಸರ್ವಶ್ರೇಷ್ಠ ಪದ್ಮೋತ್ಥಿತನಾಭೇ ಎಂದರೆ ಪದ್ಮವು ಉದ್ಭವಿಸಿದ ನಾಭಿ ಉಳ್ಳವನು, ಪದ್ಮನಾಭ ಎಂದರ್ಥ. ವರಪದ್ಮ ಎಂದು ಇದನ್ನು ಅರ್ಥಮಾಡಿಕೊಳ್ಳಬಹುದು. ವರಪದ್ಮ ಎಂದರೆ ಹದಿನಾಲ್ಕುಲೋಕಗಳ ಸಾರಭೂತವಾದ ವಿಶಿಷ್ಟವಾದ ಪದ್ಮ ಎಂದರ್ಥ[೧].

**ಜಗದಾಗೂಹಕಪಲ್ಲವಸಮಕುಕ್ಷೇ ಶರಣಾದೇ ।**
**ಕರುಣಾಪೂರ್ಣ ವರಪ್ರದ ಚರಿತಂ ಜ್ಞಾಪಯ ಮೇ ತೇ ॥ ೧೪ ॥**

**ಪ** : ಜಗದಾಗೂಹಕಪಲ್ಲವಸಮಕುಕ್ಷೇ, ಶರಣ, ಆದೇ, ಕರುಣಾಪೂರ್ಣ, ವರಪ್ರದ, ಚರಿತಮ್, ಜ್ಞಾಪಯ, ಮೇ, ತೇ ।

**ಅ** : ಜಗದಾಗೂಹಕಪಲ್ಲವಸಮಕುಕ್ಷೇ, ಶರಣ, ಆದೇ, ಕರುಣಾಪೂರ್ಣ, ವರಪ್ರದ, ತೇ, ಚರಿತಮ್, ಮೇ, ಜ್ಞಾಪಯ ।

**ಪ್ರ.ಪ.** : **ಜಗದಾಗೂಹಕಪಲ್ಲವಸಮಕುಕ್ಷೇ** - ಜಗತ್ತನ್ನೇ ಅಡಗಿಸಿಕೊಳ್ಳುವ ಎಸಳಿನಂತಹ ತೆಳುವಾದ ಉದರ ಉಳ್ಳವನೇ!; **ಶರಣ** - ರಕ್ಷಕನೇ!; **ಆದೇ** - ಮೂಲಕಾರಣನೇ!; (**ಕರುಣಾಪೂರ್ಣ** - ಕರುಣೆಯಿಂದ ತುಂಬಿದವನೇ!; **ವರಪ್ರದ** - ವರ ನೀಡುವವನೇ!; **ತೇ** - ನಿನ್ನ; **ಚರಿತಮ್** - ಮಹಿಮೆಯನ್ನು; **ಮೇ** - ನನಗೆ; **ಜ್ಞಾಪಯ** - ತಿಳಿಸಿಕೊಡು.)

**ಜಗವೆಲ್ಲ ಧರಿಸಿದ್ದು ಪಲ್ಲವದ ತೆರನಿರುವ**
**ತೆಳುವಾದ ಉದರದವನೆ ।**
**ಕರುಣೆ ತುಂಬಿರುವವನೆ ವರಗಳನು ನೀಡುವನೆ**
**ತಿಳಿಸೆನಗೆ ನಿನ್ನ ಮಹಿಮೆ ॥ ೧೪ ॥**

**ಅನು : ಜಗತ್ತನ್ನೇ ಅಡಗಿಸಿಕೊಳ್ಳುವ ಎಸಳಿನಂತಹ ತೆಳುವಾದ ಉದರ ಉಳ್ಳವನೇ! ರಕ್ಷಕನೇ! ಮೂಲಕಾರಣನೇ! (ಕರುಣೆಯಿಂದ ತುಂಬಿದವನೇ! ವರ ನೀಡುವವನೇ! ನಿನ್ನ ಮಹಿಮೆಯನ್ನು ನನಗೆ ತಿಳಿಸಿಕೊಡು.)**

---

೧. **'ಅಜಸ್ಯ ನಾಭಾವಿತಿ ಯಸ್ಯ ನಾಭೇರಭೂಚ್ಚುತೇಃ ಪುಷ್ಕರಂ ಲೋಕಸಾರಮ್ । ತಸ್ಮೈ ನಮೋ ವ್ಯಸ್ತಸಮಸ್ತವಿಶ್ವವಿಭೂತಯೇ ವಿಷ್ಣವೇ ಲೋಕಕರ್ತ್ರೇ' ಇತಿ ಸ್ಕಾಂದೇ ।**
- ಬ್ರ.ಸೂ.ಭಾ.(೧/೧/೧)

ವಿ : ೧. ಶ್ರೀಹರಿಯ ಉದರವು ಜಗತ್ತನ್ನೇ ತನ್ನಲ್ಲಿ ಅಡಗಿಸಿಕೊಂಡಿರುವುದು; ಇಷ್ಟು ಅದ್ಭುತ ಕಾರ್ಯವನ್ನು ಮಾಡುತ್ತಿದ್ದರೂ, ಅದು ಮಾತ್ರ ಎಸಳಿನಂತೆ ತೆಳುವಾಗಿರುವುದು ಅದರ ಹಿರಿಮೆ. ಅಂತಹ ಶ್ರೀಹರಿಗೆ ನಿನ್ನ ಮಹಿಮೆಯನ್ನು ತಿಳಿಸು.

೨. ಮೊದಲ ಅಧ್ಯಾಯದಲ್ಲಿ ವರ್ಣಿತವಾದ ಉದರದ ಮತ್ತೊಂದು ಬಗೆಯ ವರ್ಣನೆ ಇದರಲ್ಲಿದೆ. ಇದು ಶ್ರೀಹರಿಯ ಅಚಿಂತ್ಯಾದ್ಭುತ ಮಹಿಮೆ ಎಂದು ಭಾವ.

**ಜಗದಂಬಾಮಲಸುಂದರಗೃಹವಕ್ಷೋವರಯೋಗಿನ್ ।**
**ಕರುಣಾಪೂರ್ಣ ವರಪ್ರದ ಚರಿತಂ ಜ್ಞಾಪಯ ಮೇ ತೇ ॥ ೧೫ ॥**

**ಪ** : ಜಗದಂಬಾಮಲಸುಂದರಗೃಹವಕ್ಷೋವರಯೋಗಿನ್, ಕರುಣಾಪೂರ್ಣ, ವರಪ್ರದ, ಚರಿತಮ್, ಜ್ಞಾಪಯ, ಮೇ, ತೇ ।

**ಅ** : ಜಗದಂಬಾಮಲಸುಂದರಗೃಹವಕ್ಷೋವರಯೋಗಿನ್, ಕರುಣಾಪೂರ್ಣ, ವರಪ್ರದ, ತೇ, ಚರಿತಮ್, ಮೇ, ಜ್ಞಾಪಯ ।

**ಪ್ರ.ಪ.** : **ಜಗದಂಬಾಮಲಸುಂದರಗೃಹವಕ್ಷೋವರಯೋಗಿನ್** – ಜಗನ್ಮಾತೆಯಾದ ಮಹಾಲಕ್ಷ್ಮಿಗೆ ಸುಂದರ ನೆಲೆ ಎನ್ನಿಸಿರುವ ಶ್ರೇಷ್ಠ ವಕ್ಷಃಸ್ಥಳವನ್ನು ಹೊಂದಿರುವವನೇ!, ಮಹಾಯೋಗಿಯೇ!; (**ಕರುಣಾಪೂರ್ಣ** – ಕರುಣೆಯಿಂದ ತುಂಬಿದವನೇ!; **ವರಪ್ರದ** – ವರ ನೀಡುವವನೇ!; **ತೇ** – ನಿನ್ನ; **ಚರಿತಮ್** – ಮಹಿಮೆಯನ್ನು; **ಮೇ** – ನನಗೆ; **ಜ್ಞಾಪಯ** – ತಿಳಿಸಿಕೊಡು.)

**ಜಗದಂಬೆ ಸಿರಿರಮೆಗೆ ಚೆಲುನೆಲೆಯು ಎನಿಸಿರುವ**
**ಬಲುರಮ್ಯ ದಿವ್ಯವಕ್ಷ ।**
**ಕರುಣೆ ತುಂಬಿರುವವನೆ ವರಗಳನು ನೀಡುವನೆ**
**ತಿಳಿಸೆನಗೆ ನಿನ್ನ ಮಹಿಮೆ** ॥ ೧೫ ॥

**ಅನು** : **ಜಗನ್ಮಾತೆಯಾದ ಮಹಾಲಕ್ಷ್ಮಿಗೆ ಸುಂದರ ನೆಲೆ ಎನ್ನಿಸಿರುವ ಶ್ರೇಷ್ಠ ವಕ್ಷಃಸ್ಥಳವನ್ನು ಹೊಂದಿರುವವನೇ! ಮಹಾಯೋಗಿಯೇ! (ಕರುಣೆಯಿಂದ ತುಂಬಿದವನೇ! ವರ ನೀಡುವವನೇ! ನಿನ್ನ ಮಹಿಮೆಯನ್ನು ನನಗೆ ತಿಳಿಸಿಕೊಡು.)**

ವಿ : ೧. ಜಗನ್ಮಾತೆಯಾದ ಲಕ್ಷ್ಮಿಯು ಶ್ರೀಹರಿಯಂತೆ ಸರ್ವತ್ರವ್ಯಾಪ್ತಳು; ಅಂತಹ ಮಹಾಲಕ್ಷ್ಮಿಗೂ ಆಸರೆ ನೀಡುವುದು ಶ್ರೀಹರಿಯ ಹಿರಿಮೆ; ಇದರಿಂದ ಶ್ರೀಹರಿಯ ವ್ಯಾಪ್ತಿ ಸ್ವತಂತ್ರ ಎಂಬ ಕಾರಣದಿಂದ ಮಹಾಲಕ್ಷ್ಮಿಯ ವ್ಯಾಪ್ತಿಗಿಂತ ವಿಶೇಷ ಹಿರಿಮೆಯುಳ್ಳದ್ದು ಎಂದರ್ಥ.

೨. ಇನ್ನೊಂದರ್ಥದಲ್ಲಿ ಇದು ಶ್ರೀಮಹಾಲಕ್ಷ್ಮಿಯು ಶ್ರೀಹರಿಯ ಪರಮಪ್ರೀತಿಗೆ ಪಾತ್ರಳು ಎಂದಾಗುವುದು.

೩. ಒಂದರ್ಥದಲ್ಲಿ ಇದು ಶ್ರೀಹರಿಯ ವಕ್ಷದ ವರ್ಣನೆಯಾಗಿರುವುದರಿಂದ, ಇಲ್ಲಿ ಪ್ರಸಕ್ತವಾದ ಮಹಾಲಕ್ಷ್ಮಿಯ ರೂಪ ಶ್ರೀವತ್ಸ ಎಂದು ತಿಳಿಯಬಹುದು.

**ದಿತಿಜಾಂತಪ್ರದಚಕ್ರದರಗದಾಯುಗ್ವರಬಾಹೋ ।**
**ಕರುಣಾಪೂರ್ಣ ವರಪ್ರದ ಚರಿತಂ ಜ್ಞಾಪಯ ಮೇ ತೇ ॥ ೧೬ ॥**

**ಪ :** ದಿತಿಜಾಂತಪ್ರದಚಕ್ರದರಗದಾಯುಗ್ವರಬಾಹೋ, ಕರುಣಾಪೂರ್ಣ, ವರಪ್ರದ, ಚರಿತಮ್, ಜ್ಞಾಪಯ, ಮೇ, ತೇ।

**ಅ :** ದಿತಿಜಾಂತಪ್ರದಚಕ್ರದರಗದಾಯುಗ್ವರಬಾಹೋ, ಕರುಣಾಪೂರ್ಣ, ವರಪ್ರದ, ತೇ, ಚರಿತಮ್, ಮೇ, ಜ್ಞಾಪಯ।

**ಪ್ರ.ಪ. : ದಿತಿಜಾಂತಪ್ರದ** – ದೈತ್ಯರನ್ನು ಕೊನೆಗಾಣಿಸುವಂತಹ; **ಚಕ್ರದರಗದಾಯುಗ್ವರಬಾಹೋ** – ಚಕ್ರ, ಶಂಖ, ಗದೆಗಳನ್ನು ಹಿಡಿದ ಶ್ರೇಷ್ಠ ತೋಳುಗಳುಳ್ಳವನೇ!; (**ಕರುಣಾಪೂರ್ಣ** – ಕರುಣೆಯಿಂದ ತುಂಬಿದವನೇ!; **ವರಪ್ರದ** – ವರ ನೀಡುವವನೇ!; **ತೇ** – ನಿನ್ನ; **ಚರಿತಮ್** – ಮಹಿಮೆಯನ್ನು; **ಮೇ** – ನನಗೆ; **ಜ್ಞಾಪಯ** – ತಿಳಿಸಿಕೊಡು.)

**ರಕ್ಕಸರ ತರಿವಂಥ ಗದೆಶಂಖಚಕ್ರಗಳ**
**ಧರಿಸಿರುವ ಪರಮಭುಜನೆ ।**
**ಕರುಣೆ ತುಂಬಿರುವವನೆ ವರಗಳನು ನೀಡುವನೆ**
**ತಿಳಿಸೆನಗೆ ನಿನ್ನ ಮಹಿಮೆ ॥ ೧೬ ॥**

**ಅನು : ದೈತ್ಯರನ್ನು ಕೊನೆಗಾಣಿಸುವಂತಹ ಚಕ್ರ, ಶಂಖ, ಗದೆಗಳನ್ನು ಹಿಡಿದ ಶ್ರೇಷ್ಠ ತೋಳುಗಳುಳ್ಳವನೇ! (ಕರುಣೆಯಿಂದ ತುಂಬಿದವನೇ! ವರ ನೀಡುವವನೇ! ನಿನ್ನ ಮಹಿಮೆಯನ್ನು ನನಗೆ ತಿಳಿಸಿಕೊಡು.)**

ವಿ : ೧. ಶ್ರೀಹರಿಯ ತೋಳುಗಳ ವರ್ಣನೆ ಇದರಲ್ಲಿದೆ.

೨. ಚಕ್ರ, ಶಂಖ, ಗದಾ ಮೊದಲಾದ ಆಯುಧಗಳನ್ನು ಹಿಡಿದ ಶ್ರೀಹರಿಯ ತೋಳುಗಳಿಂದ ಸಕಲ ದೈತ್ಯರ ಸಂಪೂರ್ಣ ನಾಶ ನಿಶ್ಚಿತವಾಗಿ ಆಗುವುದು ಎಂದು ಭಾವ.

೩. ಶ್ರೀಹರಿಯು ಆಯುಧಗಳನ್ನು ಹಾಗೆ ಧರಿಸುವುದು ತನ್ನ ರಕ್ಷಣೆಗೆಂದಲ್ಲ; ಭಕ್ತರ ವಿಶ್ವಾಸಕ್ಕಾಗಿ ಮಾತ್ರ ಎಂಬ ವಿವರ ಈಗಾಗಲೇ ಬಂದಿದೆ.

೪. ಶ್ರೀಹರಿಯು ಹಾಗೆ ತನ್ನ ಅನಂತ ಬಗೆಯ ಆಯುಧಗಳನ್ನು ಹಿಡಿದಿರುವನು ಎಂಬ ವಿಶೇಷಾಂಶ ತಂತ್ರಸಾರಸಂಗ್ರಹದಲ್ಲಿದ್ದು, ಆ ವಿವರ ಈಗಾಗಲೇ ಬಂದಿದೆ.

೫. ಹಾಗೆ ಆಯುಧಗಳನ್ನು ಸದಾ ಹಿಡಿದಿರುವನೇ ಹೊರತು, ಯಾವಾಗಲೋ ಒಮ್ಮೆಯಲ್ಲ ಎಂಬುದು ಮತ್ತೊಂದು ವಿಶೇಷಾಂಶ.

೬. ಹೀಗೆ ಶ್ರೀಹರಿಯ ತೋಳುಗಳು, ಅವನು ಹಿಡಿದಿರುವ ಆಯುಧಗಳು ಹಾಗೂ ಅವುಗಳ ಸಂಖ್ಯೆ ಅವುಗಳಿಂದಾಗುವ ಪ್ರಯೋಜನ ಮೊದಲಾದ ಪ್ರತಿಯೊಂದೂ ಸಹ ಅನನ್ಯ ಎಂದು ತಾತ್ಪರ್ಯ.

೭. ದೈತ್ಯರ ಪಾಲಿಗೆ ಮಾತ್ರ ನಾಶಕ್ಕೆ ಮಾತ್ರವಲ್ಲದೆ, ಅವರ ಆಯುಧ ಮೊದಲಾಗಿ ಇತರ ಸರ್ವಸ್ವಕ್ಕೂ ಹಾಗೂ ಪುತ್ರಾದಿ ಸಮಸ್ತ ಬಂಧುವರ್ಗಕ್ಕೂ ಸರ್ವ ನಾಶಪ್ರದವಾಗಿದೆ ಎಂಬ ವಿಶೇಷಾಂಶವೂ ಇದರಲ್ಲಿದೆ: **ಸಪುತ್ರಮಿತ್ರಬಾಂಧವೋ ವಿನಾಶಮಾಶು ಯಾಸ್ಯಸಿ** (ಮ.ಭಾ.ತಾ.ನಿ. ೭/೩೯) ಎಂಬಂತೆ.

೮. ಇಲ್ಲಿ ದಿತಿಜ ಎಂಬ ಮಾತು ದುಷ್ಟದೈತ್ಯರಿಗೂ ಹಾಗೂ ಪ್ರಹ್ಲಾದನಂತ ಶಿಷ್ಟದೈತ್ಯರಿಗೂ ಅನ್ವಯಿಸುವಂತಿದ್ದು ಅದರ ಭಾವವನ್ನು ಮೇಲೆ ತಿಳಿಸಿದಂತೆ ಅರ್ಥಮಾಡಿಕೊಳ್ಳಬೇಕು.

೯. ಇದು ಮೊದಲನೆಯ ಅಧ್ಯಾಯದಲ್ಲಿ ಬಂದಿರುವ ಶ್ರೀಹರಿಯ ಭುಜಗಳ ವರ್ಣನೆಯ ವಿವರರೂಪವಾಗಿದೆ.

೧೦. ಇದನ್ನು **ಹೇ ದಿತಿಜಾಂತಪ್ರದ, ಚಕ್ರದರಗದಾಯುಕ್ ವರಬಾಹೋ** ಎಂದೂ ವಿಭಾಗ ಮಾಡಿ ಅರ್ಥಮಾಡಿಕೊಳ್ಳಬಹುದು.

**ಪರಮಜ್ಞಾನಮಹಾನಿಧಿವದನ ಶ್ರೀರಮಣೇಂದೋ ।**
**ಕರುಣಾಪೂರ್ಣ ವರಪ್ರದ ಚರಿತಂ ಜ್ಞಾಪಯ ಮೇ ತೇ ॥ ೧೭ ॥**

**ಪ** : ಪರಮಜ್ಞಾನಮಹಾನಿಧಿವದನಶ್ರೀರಮಣೇಂದೋ, ಕರುಣಾಪೂರ್ಣ, ವರಪ್ರದ, ಚರಿತಮ್, ಜ್ಞಾಪಯ, ಮೇ, ತೇ ।

**ಅ** : ಪರಮಜ್ಞಾನಮಹಾನಿಧಿವದನಶ್ರೀರಮಣೇಂದೋ, ಕರುಣಾಪೂರ್ಣ, ವರಪ್ರದ, ತೇ, ಚರಿತಮ್, ಮೇ, ಜ್ಞಾಪಯ ।

**ಪ್ರ.ಪ. : ಪರಮಜ್ಞಾನಮಹಾನಿಧಿವದನ ಶ್ರೀರಮಣೇಂದೋ** – ಶ್ರೇಷ್ಠವಾದ ಜ್ಞಾನವೆಂಬ ಮಹಾನಿಧಿಯುಳ್ಳ, ಮಹಾಲಕ್ಷ್ಮಿಗೆ ಆನಂದವನ್ನು ನೀಡುವ ಚಂದ್ರನಂತಹವನೇ!; (**ಕರುಣಾಪೂರ್ಣ** – ಕರುಣೆಯಿಂದ ತುಂಬಿದವನೇ!; **ವರಪ್ರದ** – ವರ ನೀಡುವವನೇ!; **ತೇ** – ನಿನ್ನ; **ಚರಿತಮ್** – ಮಹಿಮೆಯನ್ನು; **ಮೇ** – ನನಗೆ; **ಜ್ಞಾಪಯ** – ತಿಳಿಸಿಕೊಡು.)

**ಪರಿಪೂರ್ಣಜ್ಞಾನನಿಧಿ ಹರಿ ನಿನ್ನ ವರವದನ**
**ಸಿರಿರಮೆಯ ರಮಿಪ ಚಂದ್ರ ।**
**ಕರುಣೆ ತುಂಬಿರುವವನೆ ವರಗಳನು ನೀಡುವನೆ**
**ತಿಳಿಸೆನಗೆ ನಿನ್ನ ಮಹಿಮೆ ॥ ೧೭ ॥**

**ಅನು: ಶ್ರೇಷ್ಠವಾದ ಜ್ಞಾನವೆಂಬ ಮಹಾನಿಧಿಯನ್ನು ಹೊಂದಿದ, ಮಹಾಲಕ್ಷ್ಮಿಗೆ ಆನಂದವನ್ನು ನೀಡುವ ಚಂದ್ರನಂತಹವನೇ! (ಕರುಣೆಯಿಂದ ತುಂಬಿದವನೇ! ವರ ನೀಡುವವನೇ! ನಿನ್ನ ಮಹಿಮೆಯನ್ನು ನನಗೆ ತಿಳಿಸಿಕೊಡು.)**

ವಿ : ೧. ಇಲ್ಲಿ ಶ್ರೀಹರಿಯ ಮುಖದ ವರ್ಣನೆ ಬಂದಿದೆ.

೨. ಮುಖ ಮನಸ್ಸಿನ ಕನ್ನಡಿ ಎಂಬ ಮಾತಿದೆ. ನಮಗೆ ಕಾಣುವುದು ಮುಖವೇ ಹೊರತು, ಮನಸ್ಸಲ್ಲ; ಆದ್ದರಿಂದ ಮುಖದ ದರ್ಶನದಿಂದ ವ್ಯಕ್ತಿಯ ಮನೋಭಾವ ತಿಳಿಯುವುದು ಎಂಬುದು ಪ್ರಸಿದ್ಧವಾದ ಮಾತು. ಈ ಹಿನ್ನೆಲೆಯಲ್ಲಿ ಈ ಶ್ಲೋಕದ ಮಹತ್ವ ಅರ್ಥವಾಗುವುದು. ಶ್ರೀಹರಿಯ ಮುಖವು ಪರಮೋತ್ಕೃಷ್ಟಜ್ಞಾನದ ನಿಧಿಯಾಗಿದೆ. ಮಹಾಲಕ್ಷ್ಮಿಗೂ ಆನಂದ ನೀಡುವ ಚಂದ್ರನಂತಿದೆ ಎಂದು ಭಾವ.

೩. ಪರಮಜ್ಞಾನ ಎಂದರೆ ಸರ್ವೋತ್ತಮನಾದ ಪರಮಾತ್ಮನನ್ನು ತಿಳಿಸಿಕೊಡುವ ಪರದೈವ ಎಂದರ್ಥ; ಮಹಾನಿಧಿ ಎಂದರೆ ನವನಿಧಿಗಳಿಗಿಂತ ಶ್ರೇಷ್ಠವಾದ ಉಚ್ಚನಿಧಿ ಎಂದರ್ಥ. ಪರಮ, ಜ್ಞಾನ ಎಂಬುದಾಗಿಯೂ ಇದನ್ನು ವಿಭಾಗಮಾಡಿ ಅರ್ಥಮಾಡಿಕೊಳ್ಳಬಹುದು. ಪರಮ ಎಂದರೆ ಸರ್ವೋತ್ಕೃಷ್ಟ, ಜ್ಞಾನ ಎಂದರೆ ಜ್ಞಾನಸ್ವರೂಪ, ಆನಂದ ಆನಂದಿ ಎಂಬುದು ಹೇಗೋ ಹಾಗೆ. ಜ್ಞಾನ ಎಂಬುದಕ್ಕೆ ನಾಮೈಕದೇಶೇ ನಾಮಗ್ರಹಣ ನ್ಯಾಯದಿಂದ ಜ್ಞಾನಗಮ್ಯ ಎಂದೂ ಅರ್ಥಮಾಡಿಕೊಳ್ಳಬಹುದು.

೪. ಮಹಾಲಕ್ಷ್ಮಿಯು ನಿಷ್ಕಳಂಕಳು; ಆದ್ದರಿಂದ ಅವಳಿಗೆ ಆನಂದ ನೀಡುವ ಶ್ರೀಹರಿಯ ಮುಖ ಪರಿಪೂರ್ಣಚಂದ್ರ ಎಂದು ಅರ್ಥ.

೫. ಇದನ್ನು **ಪರಮ, ಜ್ಞಾನ, ಮಹಾನಿಧಿವದನ, ಶ್ರೀರಮಣ, ಇಂದೋ** ಎಂದೂ ವಿಭಾಗ ಮಾಡಿ ಅರ್ಥಮಾಡಿಕೊಳ್ಳಬಹುದು.

೬. ಇಲ್ಲಿ **ಮಹಾನಿಧಿ** ಎಂದರೆ ಮಹತ್ತತ್ತ್ವದಿಂದ ನಿಧಿಯನ್ನು ಹೊಂದಿರುವ ಸರಸ್ವತೀ, ಭಾರತಿಯರು ಎಂದರ್ಥ; ಅವರಿಗೆ ಆಶ್ರಯನೀಡುವ ಮುಖ ಶ್ರೀಹರಿಯದ್ದು ಎಂಬ ವಿಶೇಷಾರ್ಥ ಇದರಲ್ಲಿದೆ.

**ನಿಖಿಲಾಘೌಘವಿನಾಶನಪರಸೌಖ್ಯಪ್ರದದೃಷ್ಟೇ ।**
**ಕರುಣಾಪೂರ್ಣ ವರಪ್ರದ ಚರಿತಂ ಜ್ಞಾಪಯ ಮೇ ತೇ ॥ ೧೮ ॥**

**ಪ** : ನಿಖಿಲಾಘೌಘವಿನಾಶನಪರಸೌಖ್ಯಪ್ರದದೃಷ್ಟೇ, ಕರುಣಾಪೂರ್ಣ, ವರಪ್ರದ, ಚರಿತಮ್, ಜ್ಞಾಪಯ, ಮೇ, ತೇ ।

**ಅ** : ನಿಖಿಲಾಘೌಘವಿನಾಶನಪರಸೌಖ್ಯಪ್ರದದೃಷ್ಟೇ, ಕರುಣಾಪೂರ್ಣ, ವರಪ್ರದ, ತೇ, ಚರಿತಮ್, ಮೇ, ಜ್ಞಾಪಯ ।

**ಪ್ರ.ಪ.** : **ನಿಖಿಲಾಘೌಘವಿನಾಶನಪರಸೌಖ್ಯಪ್ರದದೃಷ್ಟೇ** – ಸಕಲ ಪಾಪಗಳ ರಾಶಿಯನ್ನು ಸಂಪೂರ್ಣವಾಗಿ ಪರಿಹರಿಸುವ ಪೂರ್ಣಸುಖವನ್ನು ವಿಶೇಷವಾಗಿ ನೀಡುವ ನೋಟದವನೇ!; (**ಕರುಣಾಪೂರ್ಣ** – ಕರುಣೆಯಿಂದ ತುಂಬಿದವನೇ!; **ವರಪ್ರದ** – ವರ ನೀಡುವವನೇ!; **ತೇ** – ನಿನ್ನ; **ಚರಿತಮ್** – ಮಹಿಮೆಯನ್ನು; **ಮೇ** – ನನಗೆ; **ಜ್ಞಾಪಯ** – ತಿಳಿಸಿಕೊಡು.)

**ಅಘವೆಲ್ಲ ತರಿಯುತಲಿ ಪರಸುಖವನೀಯುತಿಹ**
**ಪರಿಪೂರ್ಣದಿವ್ಯನೇತ್ರ ।**
**ಕರುಣೆ ತುಂಬಿರುವವನೆ ವರಗಳನು ನೀಡುವನೆ**
**ತಿಳಿಸೆನಗೆ ನಿನ್ನ ಮಹಿಮೆ ॥ ೧೮ ॥**

**ಅನು : ಸಕಲ ಪಾಪಗಳ ರಾಶಿಯನ್ನು ಸಂಪೂರ್ಣವಾಗಿ ಪರಿಹರಿಸುವ ಪೂರ್ಣಸುಖವನ್ನು ವಿಶೇಷವಾಗಿ ನೀಡುವ ನೋಟದವನೇ! (ಕರುಣೆಯಿಂದ ತುಂಬಿದವನೇ! ವರ ನೀಡುವವನೇ! ನಿನ್ನ ಮಹಿಮೆಯನ್ನು ನನಗೆ ತಿಳಿಸಿಕೊಡು.)**

ವಿ : ೧. ಶ್ರೀಹರಿಯ ನೋಟದ ಹಿರಿಮೆ ಇಲ್ಲಿ ವರ್ಣಿತವಾಗಿದೆ.

೨. ಸಕಲ ಪಾಪರಾಶಿಯೂ ಸಹ ಶ್ರೀಹರಿಯ ದರ್ಶನಮಾತ್ರದಿಂದ ಸಂಪೂರ್ಣ ನಾಶವಾಗುವುದು. ಕತ್ತಲೆಯ ರಾಶಿ ಸೂರ್ಯನ ದರ್ಶನದಿಂದ ನಾಶವಾಗುವುದು ಹೇಗೋ ಹಾಗೆ.

೩.. ಹಲವು ಬಗೆಯ ವ್ರತ, ಉಪವಾಸಗಳಿಂದ, ಯಜ್ಞಯಾಗಗಳಿಂದ, ತೀರ್ಥಯಾತ್ರೆ ಮೊದಲಾದವುಗಳಿಂದ ಕೆಲವು ಬಗೆಯ ಪಾಪಗಳು ನಾಶವಾಗುವವೇ ಹೊರತು, ಸಕಲ ಪಾಪಗಳಲ್ಲ; ಆದರೆ ಶ್ರೀಹರಿಯ ನೋಟ ಹಾಗಲ್ಲ; ಅದು ಅನಾದಿ ಕಾಲದಿಂದ ಮಾಡಲ್ಪಟ್ಟ ಸಕಲವಿಧಪಾಪಗಳನ್ನು ಸಹ ಸಂಪೂರ್ಣವಾಗಿ ಕ್ಷಣಮಾತ್ರದಲ್ಲಿ ನಾಶಮಾಡುವುದು; ಆದ್ದರಿಂದ ಅವನ ದರ್ಶನ ನಿತ್ಯಕರ್ತವ್ಯ ಎಂದು ತಿಳಿಯಬೇಕು. ದೇವಪೂಜೆಯ ಕಾಲದಲ್ಲಿ

ಪ್ರತಿನಿತ್ಯ ಶ್ರೀಹರಿಯ ಕರುಣಾದೃಷ್ಟಿಯ ಪ್ರಾರ್ಥನೆ ತಪ್ಪದೇ ವಿಹಿತವಾಗಿರುವ ಹಿನ್ನೆಲೆ ಇದರಿಂದ ತಿಳಿಯುವುದು.

೪. ಶ್ರೀರಾಮನ ದರ್ಶನ ಮಾತ್ರದಿಂದ ಅಹಲ್ಯೆಯ ಉದ್ಧಾರವಾದ ಪ್ರಸಂಗ ರಾಮಾಯಣದಲ್ಲಿದೆ; ಅವನ ಕೆಂಪಾದ ಕುಡಿನೋಟ ಮಾತ್ರದಿಂದಲೇ ಇಡೀ ಸಮುದ್ರವು ಸಂಪೂರ್ಣವಾಗಿ ಒಣಗಿಹೋದ ನಿದರ್ಶನವು ಸಹ ರಾಮಾಯಣದಲ್ಲೇ ಬಂದಿದೆ. ಮಂದರಪರ್ವತವನ್ನು ತರುವ ಪ್ರಸಂಗದಲ್ಲಿ ಪೆಟ್ಟಿಗೆ ಹತವಾದ ದೇವಾದಿವೃಂದವನ್ನು ಶ್ರೀಹರಿಯು ತನ್ನ ನೋಟಮಾತ್ರದಿಂದಲೇ ಬದುಕಿಸಿದ ವಿವರ ಶ್ರೀಮದ್ಭಾಗವತ ಹಾಗೂ ಮಹಾಭಾರತತಾತ್ಪರ್ಯನಿರ್ಣಯಗಳಲ್ಲಿ ಬಂದಿದೆ.

೫. ಇಲ್ಲಿ ಶ್ರೀಹರಿಯ ದರ್ಶನ ಎಂದರೆ ನಾವು ಮಾಡುವ ಅವನ ದರ್ಶನವೆಂದೂ, ಅವನು ನಮ್ಮ ಮೇಲೆ ಬೀರುವ ಕೃಪಾಕಟಾಕ್ಷ ಎಂದೂ ಅರ್ಥ.

೬. ಹೀಗೆ ಪಾಪನಾಶಕವೂ, ನಿತ್ಯಾನಂದಪ್ರದವೂ ಆದ ಶ್ರೀಹರಿಯ ಕಟಾಕ್ಷ ಸದಾ ನಮ್ಮ ಮೇಲಿರಲಿ ಎಂದು ಭಾವ.

೭. ಇಲ್ಲಿ ಪಾಪಗಳ ರಾಶಿ ಎಂಬ ಅರ್ಥದೊಂದಿಗೆ ಪಾಪಿಗಳ ಗುಂಪು ಎಂದೂ ಅರ್ಥ. ಇದರಿಂದ ಅವನ ನೋಟ ಮಾತ್ರದಿಂದಲೇ ಸಕಲ ಪಾಪಿಗಳು ಸರ್ವನಾಶಕ್ಕೆ ಗುರಿಯಾಗುವರು ಎಂಬ ವಿಶೇಷಾಂಶ ಸೂಚಿತ.

೮. ಹೀಗೆ ಪಾಪನಾಶ ಹಾಗೂ ಸುಖಪ್ರಾಪ್ತಿ ಎರಡನ್ನೂ ಏಕಕಾಲದಲ್ಲಿ ಸಾಧಿಸಿಕೊಡುವ ಶ್ರೀಹರಿಯ ನೋಟ ಅತ್ಯಂತ ಶ್ರೇಷ್ಠವಾದದು ಎಂದು ತಾತ್ಪರ್ಯ.

೯. ಇದನ್ನು ನಿಖಿಲಾಘೌಘವಿನಾಶನ, ಪರಸೌಖ್ಯಪ್ರದದೃಷ್ಟೇ ಎಂದು ವಿಭಾಗ ಮಾಡಿಯೂ ಅರ್ಥಮಾಡಿಕೊಳ್ಳಬಹುದು. ಸಕಲ ಪಾಪಗಳನ್ನು ಸಂಪೂರ್ಣವಾಗಿ ವಿನಾಶ ಮಾಡುವ ವಿಶೇಷಸಾಮರ್ಥ್ಯ ಹಾಗೂ ನೋಟಮಾತ್ರದಿಂದಲೇ ಪೂರ್ಣಾನಂದರೂಪವಾದ ಮೋಕ್ಷವನ್ನು ನೀಡುವ ವಿಶೇಷತೆ ಶ್ರೀಹರಿಯದು ಮಾತ್ರ ಎಂಬುದು ಇದರ ಭಾವ.

**ಪರಮಾನಂದಸುತೀರ್ಥಸುಮುನಿರಾಜೋ ಹರಿಗಾಥಾಮ್ ।**
**ಕೃತವಾನ್ ನಿತ್ಯಸುಪೂರ್ಣಕಪರಮಾನಂದಪದೈಷೀ ॥ ೧೯ ॥**

॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ದ್ವಾದಶಸ್ತೋತ್ರೇ ದಶಮೋಽಧ್ಯಾಯಃ ॥

ಪ : ಪರಮಾನಂದಸುತೀರ್ಥಸುಮುನಿರಾಜಃ, ಹರಿಗಾಥಾಮ್, ಕೃತವಾನ್, ನಿತ್ಯ-ಸುಪೂರ್ಣಕಪರಮಾನಂದಪದೈಷೀ ।

**ಅ :** ನಿತ್ಯಸುಪೂರ್ಣಕಪರಮಾನಂದಪದೈಷೀ, ಪರಮಾನಂದಸುತೀರ್ಥಸುಮುನಿರಾಜಃ, ಹರಿಗಾಥಾಮ್, ಕೃತವಾನ್ ।

**ಪ್ರ.ಪ. : ನಿತ್ಯಸುಪೂರ್ಣಕಪರಮಾನಂದಪದೈಷೀ** – ನಿತ್ಯವೂ, ಪರಿಪೂರ್ಣವೂ ಆದ; **ಪರಮಾನಂದಸುತೀರ್ಥಸುಮುನಿರಾಜಃ** – ಪರಮಾನಂದಪದವನ್ನು ಹೊಂದಬಯಸುವ ಮಹಾನಂದತೀರ್ಥರು ಎಂಬ ಶ್ರೇಷ್ಠ ಮುನಿವರೇಣ್ಯರು; **ಹರಿಗಾಥಾಮ್** – ಈ ಶ್ರೀಹರಿಯ ಸ್ತೋತ್ರವನ್ನು; **ಕೃತವಾನ್** – ರಚಿಸಿದರು.

**ಆನಂದ ಸುರಿಸುತಿಹ ಸಚ್ಛಾಸ್ತ್ರ ಬರೆದಂಥ**
**ಮುನಿರಾಜ ಹರಿಯ ಸ್ತುತಿಯ ।**
**ರಚಿಸಿಹರು ತಾವಿಂತು ಪರಿಪೂರ್ಣಪರಸುಖದ**
**ನೆಲೆಯನ್ನು ಪಡೆಯಲೆಂದು** ॥ ೧೯ ॥

**॥ ದ್ವಾದಶಸ್ತೋತ್ರದ ಕನ್ನಡಪದ್ಯಾನುವಾದದಲ್ಲಿ ಹತ್ತನೆಯ ಅಧ್ಯಾಯ ಮುಕ್ತಾಯವಾಯಿತು ॥**

**ಅನು : ನಿತ್ಯವೂ, ಪರಿಪೂರ್ಣವೂ ಆದ ಪರಮಾನಂದಪದವನ್ನು ಹೊಂದ-ಬಯಸುವ ಮಹಾನಂದತೀರ್ಥರು ಎಂಬ ಶ್ರೇಷ್ಠ ಮುನಿವರೇಣ್ಯರು ಈ ಶ್ರೀಹರಿಯ ಸ್ತೋತ್ರವನ್ನು ರಚಿಸಿದರು.**

ವಿ : ೧. ಈ ಸ್ತುತಿಯ ಕರ್ತೃ ಹಾಗೂ ಇದರ ಫಲಶ್ರುತಿ ಇವೆರಡೂ ಇದರಲ್ಲಿ ನಿರೂಪಿತವಾಗಿವೆ.

೨. ಇದನ್ನು ಆನಂದತೀರ್ಥರು ಎಂಬ ಮುನಿಚಕ್ರವರ್ತಿಗಳು ರಚಿಸಿರುವರು ಎಂದರ್ಥ.

೩. ಆನಂದತೀರ್ಥರು ಎಂಬ ತಮ್ಮ ಹೆಸರಿನ ಮಹತ್ತ್ವವು ಇದರಲ್ಲಿ ಅವರಿಂದಲೇ ನಿರೂಪಿತವಾಗಿರುವುದು ವಿಶೇಷ.

೪. ಅವರು ಪರಮಾನಂದವೆಂಬ ಮೋಕ್ಷದ ಹಾದಿಯನ್ನು ತಿಳಿಸಿಕೊಡುವ ಶಾಸ್ತ್ರವನ್ನು ಬರೆದ ಮಹನೀಯರು ಎಂದರ್ಥ.

೫. ಇದನ್ನು ಹರಿಗಾಥಾ ಎಂದು ಅವರೇ ಕರೆದಿರುವುದು ವಿಶೇಷ. ಗಾಥಾ ಎಂಬುದು ಒಂದು ಬಗೆಯ ಛಂದಸ್ಸು. ಇದು ಪ್ರಾಯಃ ಆ ಛಂದಸ್ಸಿನಲ್ಲಿದೆ. ಆರನೆಯ ಸ್ತೋತ್ರವು ಸಹ ಪ್ರಾಯಃ ಗಾಥಾರೂಪವಾಗಿದ್ದು, ಅದೂ ಸಹ ಇದರಂತೆ ಹರಿಗಾಥಾ ಎಂದೇ ನಿರೂಪಿತವಾಗಿರುವುದು ಗಮನಾರ್ಹ.

೬. ಮುನಿ ಎಂದರೆ ಓಂಕಾರವನ್ನು ಪೂರ್ಣವಾಗಿ ಅರಿತವರು ಎಂಬ ಮಾತು ಮಾಂಡೋಕ್ಯೋಪನಿಷತ್ತಿನಲ್ಲಿ ಬಂದಿದೆ. ಓಂಕಾರದ ಬಗ್ಗೆ ಶ್ರೀಮದಾಚಾರ್ಯರು ತಮ್ಮ ಸರ್ವಮೂಲ ಗ್ರಂಥಗಳಲ್ಲಿ ವಿಶೇಷವಾಗಿ ಮಾಹಿತಿಯನ್ನು ನೀಡಿರುವರು.

೭. ಅವರು ಕೇವಲ ಮುನಿಮಾತ್ರವಲ್ಲದೆ ಸುಮುನಿಯಾಗಿರುವರು; ಮುಖ್ಯವಾಗಿ ಸುಮುನಿರಾಜರಾಗಿರುವರು; ಎಂದರೆ ಭಾವಿಬ್ರಹ್ಮನಾಗಿರುವರು ಎಂದು ಭಾವ.

೮. **ನಿತ್ಯಸುಪೂರ್ಣಕಪರಮಾನಂದಪದೈಷೀ**[೧] – ಇದಕ್ಕೆ ನಿತ್ಯವೂ, ಸುಪೂರ್ಣವೂ ಆದ ಪರಮಾನಂದವುಳ್ಳ ಬ್ರಹ್ಮಪದವಿ ಎಂದೂ, ಅದಕ್ಕಿಂತ ಮುಖ್ಯವಾಗಿ ಮುಕ್ತಬ್ರಹ್ಮಪದವಿ ಎಂದೂ ಅರ್ಥವಾಗುವುದು. ಋಜುಗಳಾದ ಅವರು ನಿತ್ಯವೂ ಪರಿಪೂರ್ಣ ಆನಂದತೀರ್ಥರೇ ಆದರೂ ಇದನ್ನು ಪರಮೋತ್ಸಾಹರೂಪ ಹಿರಿಮೆಯನ್ನು ಬ್ರಹ್ಮಪದವಿಯೊಂದಿಗೆ ಹೊಂದಲಿರುವವರು ಎಂದು ಅರ್ಥ: **ಋಜೂನಾಮೇಕಮೇವಾಸ್ತಿ ಪರಮೋತ್ಸಾಹವರ್ಜನಮ್** (ಅನುವ್ಯಾಖ್ಯಾನ).

೯. **ಪರಮಾನಂದಸುತೀರ್ಥಸುಮುನಿರಾಜಃ** ಎಂಬುದನ್ನು **ಪರಮಾನಂದಸುತೀರ್ಥಃ ವೇದವ್ಯಾಸಃ ಸುಮುನಿರಾಜಃ ಯಸ್ಯ** ಎಂದು ಅರ್ಥಮಾಡಿಕೊಂಡಲ್ಲಿ ಶ್ರೀಮದಾಚಾರ್ಯರು ವೇದವ್ಯಾಸರೂಪದ ಶ್ರೀಹರಿಯ ಶಿಷ್ಯರು ಎಂಬ ವಿಶೇಷಾರ್ಥ ಲಭಿಸುವುದು.

*****

---

೧. 'ನಿತ್ಯಸುಪೂರ್ಣಕಪರಮಾನಂದಪದೈಷೀ' ಎಂಬ ಈ ಪಾಠವನ್ನು ಬನ್ನಂಜೆ ಗೋವಿಂದಾಚಾರ್ಯರು ಪ್ರಾಮಾದಿಕಪಾಠ ಎಂದಿರುವರು: "ಪರಮಾನಂದಪದೈಷಿನ್ ಭಕ್ತವರ್ಗ ತ್ವದರ್ಥಂ ಮುನಿರಾಜ ಇಮಾಂ ಹರಿಗಾಥಾಂ ಕೃತವಾನ್ । ನತು ಸ್ವಾರ್ಥಮ್ । ಸ್ವಸ್ಯ ನಿತ್ಯಂ ಭಗವತ್ಸ್ಮರಣಶರಣಸ್ಯ ಪ್ರಳಯೇऽಪಿ ಪ್ರತಿಭಾತಪರಾವರಸ್ಯ ಕಾದಾಚಿತ್ಕಸ್ತುತ್ಯನವಸರಾತ್ । ಏಕಾಂತತ್ವೇನ ಪರಮಾನಂದ–ಪದೈಷಿತ್ವಾಭಾವಾಚ್ಚ । 'ಏಕಾಂತಾನಾಂ ನ ಕಸ್ಯಚಿದರ್ಥೇ ನಾರಾಯಣೋ ದೇವಃ' ಇತಿ ಸ್ವಯಮೇವಾऽಹ ಹಿ । ಏತೇನ 'ಪರಮಾನಂದಪದೈಷೀ' ಇತಿ ಪ್ರ.ಪಾಠಃ ಪ್ರಮಾದ ಏವೇತಿ ಭಾತಿ ।" (ಪು. ೨೨೩; 'ಸರ್ವಮೂಲಗ್ರಂಥಾಃ' ಸಂಪುಟ ೫, ಪ್ರ.: ಅಖಿಲಭಾರತಮಾಧ್ವಮಹಾಮಂಡಲ, ೧೯೭೪); ಇದು ಸಮಂಜಸವಲ್ಲ. ಮೇಲೆ ತಿಳಿಸಿದಂತೆ ದ್ವಾದಶಸ್ತೋತ್ರವನ್ನು ಶ್ರೀಮದಾಚಾರ್ಯರು ಕೇವಲ ಭಕ್ತವರ್ಗಕ್ಕಾಗಿ ಮಾತ್ರವಲ್ಲದೆ, ತಮ್ಮ ಭಕ್ತಿಸೂಚಕವಾಗಿಯೂ ರಚಿಸಿರುವರು. ಇದು ಕಾದಾಚಿತ್ಕಸ್ತುತಿ ಎಂಬ ಬನ್ನಂಜೆಯ ವಾದವೂ ಸರಿಯಲ್ಲ; ಇದು ನಿತ್ಯಸ್ತುತಿಯೂ ಆಗಿದೆ. ಏಕಾಂತಭಕ್ತರಾದ ಅವರು ಪರಮಾನಂದಪದೈಷಿಗಳಲ್ಲ ಎಂಬ ಅವರ ಮತ್ತೊಂದು ವಾದವೂ ಸಹ ಅಸಮರ್ಪಕ. 'ಪರಮಾನಂದಪದ' ಎಂಬುದಕ್ಕೆ ಪರಮ–ಏಕಾಂತಭಕ್ತರು ಬಯಸುವ ಕೇವಲಪರಮಭಗವದನುಗ್ರಹ ಎಂಬ ಅರ್ಥವೇ ಶಾಸ್ತ್ರಸಮ್ಮತ–ವಾದುದು. ಅದು ಅವರಿಗೆ ಸರ್ವಥಾ ಅಪೇಕ್ಷಿತ ಎಂಬುದು 'ಪ್ರವರ್ಧತಾಂ ಭಕ್ತಿರಲಂ ಕ್ಷಣೇ ಕ್ಷಣೇ' ಎಂಬ ಅವರ ಮಾತಿನಿಂದಲೇ (ಮ.ಭಾ.ತಾ.ನಿ. ೮/೨೪೭) ಸ್ಪಷ್ಟ. ದ್ವಾದಶಸ್ತೋತ್ರದ ಪ್ರಮುಖ ವ್ಯಾಖ್ಯಾತೃಗಳಾದ ಶ್ರೀವಿಶ್ವಪತಿತೀರ್ಥರಿಂದ ಗೃಹೀತವಾಗಿರುವ ಪಾಠವು ಇದೇ ಆಗಿದೆ ಎಂಬುದು ಮತ್ತೊಂದು ಗಮಕ. ಇಲ್ಲಿಯೂ ಅವರು ಕೊನೆಯ ಸ್ತೋತ್ರದಲ್ಲಿ 'ಆನಂದತೀರ್ಥಪರಾನಂದವರದ' ಎಂದು ಶ್ರೀಮದಾಚಾರ್ಯರೇ ಸ್ಪಷ್ಟ ತಿಳಿಸಿರುವುದೂ ಸಹ ನಿರ್ಣಾಯಕ. ಆದ್ದರಿಂದ ಈ ಪಾಠವು ಅಪಪಾಠವಲ್ಲ. ಆದರಂತೆ '...ಪದೈಷಿನ್' ಎಂಬ ಪಾಠವನ್ನು ಪಾಠಾಂತರ ಎಂದು ತಿಳಿಯಬೇಕು.

## ೧೧. ಏಕಾದಶಾಧ್ಯಾಯ (ಶ್ರೀಹರಿಪಾದಸ್ತೋತ್ರ)

**ಉದೀರ್ಣಮಜರಂ ದಿವ್ಯಮಮೃತಸ್ಯಂದ್ಯಧೀಶಿತುಃ ।**
**ಆನಂದಸ್ಯ ಪದಂ ವಂದೇ ಬ್ರಹ್ಮೇಂದ್ರಾದ್ಯಭಿವಂದಿತಮ್ ॥ ೧ ॥**

**ಪ**: ಉದೀರ್ಣಮ್, ಅಜರಮ್, ದಿವ್ಯಮ್, ಅಮೃತಸ್ಯಂದಿ, ಅಧೀಶಿತುಃ, ಆನಂದಸ್ಯ, ಪದಂ, ವಂದೇ, ಬ್ರಹ್ಮೇಂದ್ರಾದ್ಯಭಿವಂದಿತಮ್ ।

**ಅ** : ಉದೀರ್ಣಮ್, ಅಜರಮ್, ದಿವ್ಯಮ್, ಅಮೃತಸ್ಯಂದಿ, ಅಧೀಶಿತುಃ, ಬ್ರಹ್ಮೇಂದ್ರಾದ್ಯಭಿವಂದಿತಮ್, ಆನಂದಸ್ಯ, ಪದಂ, ವಂದೇ ।

**ಪ್ರ.ಪ.** : **ಉದೀರ್ಣಮ್** – ಉತ್ಕೃಷ್ಟವಾದ; **ಅಜರಮ್** – ಮುಪ್ಪಿರದ; **ದಿವ್ಯಮ್** – ದಿವ್ಯವಾದ; **ಅಮೃತಸ್ಯಂದಿ** – ಅಮೃತವನ್ನು ಸುರಿಸುವ; **ಅಧೀಶಿತುಃ** – ಸರ್ವೇಶ್ವರನಾದ; **ಬ್ರಹ್ಮೇಂದ್ರಾದ್ಯಭಿವಂದಿತಮ್** – ಬ್ರಹ್ಮ, ಇಂದ್ರಾದಿಗಳಿಂದ ವಿಶೇಷವಾಗಿ ವಂದಿತನಾದ; **ಆನಂದಸ್ಯ** – ಆನಂದಪೂರ್ಣನಾದ ಶ್ರೀಹರಿಯ; **ಪದಂ** – ಪಾದವನ್ನು; **ವಂದೇ** – ವಂದಿಸುವೆನು.

**ಜಗಕೆಲ್ಲ ಮಿಗಿಲಾದ ಜರೆಯಿಂದ ದೂರಾದ**
**ಪೀಯೂಷ ಸುರಿವಂಥ ಅಖಿಲೇಶನ ।**
**ಬ್ರಹ್ಮೇಂದ್ರ ಮುಂತಾದ ಸುರರೆಲ್ಲ ಮಣಿಯುತಿಹ**
**ಆನಂದ ಚರಣನಿಗೆ ವಂದಿಸುವೆನು ॥ 1 ॥**

**ಅನು : ಉತ್ಕೃಷ್ಟವಾದ, ಮುಪ್ಪಿರದ, ದಿವ್ಯವಾದ, ಅಮೃತವನ್ನು ಸುರಿಸುವ, ಸರ್ವೇಶ್ವರನಾದ, ಬ್ರಹ್ಮ, ಇಂದ್ರಾದಿಗಳಿಂದ ವಿಶೇಷವಾಗಿ ವಂದಿತವಾದ, ಆನಂದಪೂರ್ಣನಾದ, ಶ್ರೀಹರಿಯ ಪಾದವನ್ನು ವಂದಿಸುವೆನು.**

ವಿ: ೧. ಶ್ರೀಹರಿಯ ಪಾದರೂಪವಾದ ಅವಯವವನ್ನು ಸ್ತುತಿಸುವ ಸ್ತೋತ್ರ ಇದಾಗಿದೆ. ಅವಯವದ ಏಕದೇಶವಾದ ನಖಗಳನ್ನು ಮಾತ್ರ ನಖಸ್ತುತಿಯಲ್ಲಿ ಹೇಗೋ ಹಾಗೆ.

೨. ಪದ ಎನ್ನುವುದಕ್ಕೆ ಪಾದ ಎಂಬ ಅರ್ಥದೊಂದಿಗೆ ಸ್ವರೂಪ[೧] ಎಂಬ ಅರ್ಥವೂ ಇದೆ; ಆ ಅರ್ಥದಲ್ಲಿ ಇದು ಶ್ರೀಹರಿಯ ಸ್ವರೂಪವನ್ನು ವರ್ಣಿಸುವ ಸ್ತೋತ್ರವೂ ಆಗಿದೆ.

೩. ಶ್ರೀಹರಿಯ ಪಾದವು ಸಹ ಅಪ್ರಾಕೃತವಾಗಿದ್ದು, ಉತ್ಕೃಷ್ಟವೂ, ಮುಪ್ಪು ಮೊದಲಾದ ದೋಷರಹಿತವೂ, ಅಲೌಕಿಕವೂ, ಮೋಕ್ಷಾಮೃತಪ್ರದಾಯಕವೂ ಆದ ಹಿರಿಮೆಯನ್ನು ಹೊಂದಿದೆ.

---

೧. ಉತ್ತಮಾನಾಂ ಸ್ವರೂಪಂ ತು ಪಾದಶಬ್ದೇನ ಭಣ್ಯತೇ । – ಭಾಗ.ತಾ.ನಿ.

೪. **ಬ್ರಹ್ಮೇಂದ್ರಾದ್ಯಭಿವಂದಿತಂ** – ಇಲ್ಲಿ ಇಂದ್ರಶಬ್ದವು ಈ ಮನ್ವಂತರದ ಪುರಂದರ ಇಂದ್ರ ಎಂಬ ಅರ್ಥದೊಂದಿಗೆ ಜೀವಕೋಟಿಯಲ್ಲಿ ಪರಮೈಶ್ವರ್ಯವನ್ನು ಹೊಂದಿರುವ ವಾಯುದೇವರು ಎಂಬ ಅರ್ಥವನ್ನು ಸಹ ಹೊಂದಿದೆ; ಇಂದ್ರ ಪದವಿಯಲ್ಲಿ ರೋಚನನಾಮಕ ವಾಯುದೇವರು ಇದ್ದ ವಿವರ ಇದಕ್ಕೆ ಗಮಕ.

೫. ಸತ್ಯಾದಿ ಸಕಲಲೋಕಗಳಿಗೆ ಅಧಿಪತಿಯಾದ ಬ್ರಹ್ಮ, ತ್ರಿಲೋಕಾಧಿಪತಿಯಾದ ಇಂದ್ರ ಇವರೇ ಮೊದಲಾದ ಸಮಸ್ತದೇವತೆಗಳಿಂದ ಅಭಿವಂದಿತನಾದ ಶ್ರೀಹರಿಯು ಸರ್ವೋತ್ತಮ ಎಂದರ್ಥ.

೬. ಶ್ರೀಹರಿಯ ಪಾದಗಳಿಗೆ ಆನಂದ ಹಾಗೂ [೧]ಜ್ಞಾನ ಎಂಬ ಹೆಸರಿವೆ. ಆದ್ದರಿಂದ ಜ್ಞಾನಾನಂದಪೂರ್ಣವಾದ ಅವುಗಳ ಆರಾಧನೆ, ಸರ್ವಾಪೇಕ್ಷಿತ ಮೋಕ್ಷಕ್ಕೆ ಸಾಧನವಾಗುವುದು ಎಂದರ್ಥ.

**ಸರ್ವವೇದಪದೋದ್ಗೀತಮಿಂದಿರಾವಾಸಮುತ್ತಮಮ್[೨] ।**
**ಆನಂದಸ್ಯ ಪದಂ ವಂದೇ ಬ್ರಹ್ಮೇಂದ್ರಾದ್ಯಭಿವಂದಿತಮ್ ॥ ೨ ॥**

**ಪ :** ಸರ್ವವೇದಪದೋದ್ಗೀತಮ್, ಇಂದಿರಾವಾಸಮ್, ಉತ್ತಮಮ್, ಆನಂದಸ್ಯ, ಪದಂ, ವಂದೇ, ಬ್ರಹ್ಮೇಂದ್ರಾದ್ಯಭಿವಂದಿತಮ್ ।

**ಅ :** ಸರ್ವವೇದಪದೋದ್ಗೀತಮ್, ಇಂದಿರಾವಾಸಮ್, ಉತ್ತಮಮ್, ಬ್ರಹ್ಮೇಂದ್ರಾದ್ಯಭಿವಂದಿತಮ್, ಆನಂದಸ್ಯ, ಪದಂ, ವಂದೇ ।

**ಪ್ರ.ಪ. : ಸರ್ವವೇದಪದೋದ್ಗೀತಮ್** – ಸಕಲ ವೇದಪದಗಳಿಂದ ಸರ್ವೋತ್ತಮ ಎಂಬುದಾಗಿ ಪ್ರತಿಪಾದಿತವಾದ; **ಇಂದಿರಾವಾಸಮ್** – ಮಹಾಲಕ್ಷ್ಮಿಗೆ ನೆಲೆಯಾದ; **ಉತ್ತಮಮ್** – ಉತ್ತಮವಾದ; (**ಬ್ರಹ್ಮೇಂದ್ರಾದ್ಯಭಿವಂದಿತಮ್** – ಬ್ರಹ್ಮ, ಇಂದ್ರಾದಿಗಳಿಂದ ವಿಶೇಷವಾಗಿ ವಂದಿತನಾದ; **ಆನಂದಸ್ಯ** – ಆನಂದಪೂರ್ಣನಾದ ಶ್ರೀಹರಿಯ; **ಪದಂ** – ಪಾದವನ್ನು; **ವಂದೇ** – ವಂದಿಸುವೆನು.)

**ಶ್ರುತಿಯಲ್ಲಿ ಇರುವಂಥ ಪ್ರತಿಪದವು ಸ್ತುತಿಪಂಥ**
**ಪರಿಪೂರ್ಣವಾಗಿರುವ ರಮೆಯ ನಿಲಯ ।**
**ಬ್ರಹ್ಮೇಂದ್ರ ಮುಂತಾದ ಸುರರೆಲ್ಲ ಮಣಿಯುತಿಹ**
**ಆನಂದ ಚರಣನಿಗೆ ವಂದಿಸುವೆನು ॥ ೨ ॥**

---

೧. ಸ್ವಿತ್ಯಾನಂದಃ ಸಮುದ್ದಿಷ್ಟೋ ವರಿತಿ ಜ್ಞಾನಮುಚ್ಯತೇ ।
ಮೋಕ್ಷದಾನೇನ ತಜ್ಜ್ಞಾನಾದ್ ಸುವರಸ್ಯ ಪದದ್ವಯಮ್ ॥ – ಬೃಹದ್ಭಾಷ್ಯ

೨. 'ಇಂದಿರಾಧಾರಮುತ್ತಮಮ್' (ಪಾಠಾಂತರ).

**ಅನು: ಸಕಲ ವೇದಪದಗಳಿಂದ ಸರ್ವೋತ್ತಮ ಎಂಬುದಾಗಿ ಪ್ರತಿಪಾದಿತವಾದ, ಮಹಾಲಕ್ಷ್ಮಿಗೆ ಆಸರೆಯಾದ, ಉತ್ತಮವಾದ, (ಬ್ರಹ್ಮ, ಇಂದ್ರಾದಿಗಳಿಂದ ವಿಶೇಷವಾಗಿ ವಂದಿತನಾದ, ಆನಂದಪೂರ್ಣನಾದ, ಶ್ರೀಹರಿಯ ಪಾದವನ್ನು ವಂದಿಸುವೆನು.)**

ವಿ : ೧. ಶ್ರೀಹರಿಯ ಪಾದವು ಸಕಲ ವೇದಗಳ ಪ್ರತ್ಯಕ್ಷರ, ಪ್ರತಿಪದಗಳಿಂದ ಸರ್ವೋತ್ತಮತ್ವೇನ ಸ್ತುತಿಸಲ್ಪಡುವುದು; ಮಹಾಲಕ್ಷ್ಮಿಗೂ ನೆಲಯಾಗಿರುವುದು; ಈ ರೀತಿಯ ಶ್ರೀಹರಿಯ ವಿಶೇಷ ಹಿರಿಮೆಯು '**ಉದ್ಗೀತ**' ಎಂಬ ಪದದಿಂದ ಸೂಚಿತ.

೨. ಇತರ ಸಕಲದೇವತೆಗಳು ಪ್ರತಿಪಾದಿತರಾಗಿರುವುದು ವೇದಗಳ ಏಕದೇಶದಿಂದ ಮಾತ್ರ; ಅದೂ ಸಹ ಪರಮಮುಖ್ಯವೃತ್ತಿಯಿಂದೇನಲ್ಲ ಎಂಬುದು ವಿಶೇಷ. ಸಕಲವೇದಗಳಿಂದ ಪರಮಮುಖ್ಯವೃತ್ತಿಯಿಂದ ಸ್ತುತಿಸಲ್ಪಡುವವನು ಶ್ರೀಹರಿಯೊಬ್ಬನೆ. ಆದ್ದರಿಂದ ಅವನು ಸರ್ವೋತ್ತಮ ಎಂದು ಭಾವ.

೩. **ಇಂದಿರಾವಾಸಮುತ್ತಮಮ್** - ಎಂಬುದಕ್ಕೆ ಶ್ರೀಹರಿಯು ಮಹಾಲಕ್ಷ್ಮಿಗೆ ಮುಖ್ಯನೆಲೆ ಎಂದರ್ಥ. ಇದು ಒಂದು ರೀತಿಯಲ್ಲಿ ಈಶಾವಾಸ್ಯಭಾಷ್ಯದ ಮೊದಲ ಮಂತ್ರಕ್ಕೆ ಭಾಷ್ಯದಂತಿರುವ ಮಾತು: **ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್ । ... ಈಶಸ್ಯ ಆವಾಸಯೋಗ್ಯಮ್ ಈಶಾವಾಸ್ಯಮ್ । ಜಗತ್ಯಾಂ ಪ್ರಕೃತೌ ।** - ಈಶಾವಾಸ್ಯಭಾಷ್ಯ (೧/೧).

೪. ಮಹಾಲಕ್ಷ್ಮಿಯು ಬ್ರಹ್ಮಾದಿಗಳಿಗೆ ಆಶ್ರಯ; ಮಹಾಲಕ್ಷ್ಮಿಗೆ ಶ್ರೀಹರಿಯು ಆಶ್ರಯ ಎಂಬ ವಿಶೇಷಾಂಶ ಇಂದಿರಾಧಾರ ಎಂಬ ಪದದಿಂದ ಸೂಚಿತ.

**ಸರ್ವದೇವಾದಿದೇವಸ್ಯ ವಿದಾರಿತಮಹತ್ತಮಃ ।**
**ಆನಂದಸ್ಯ ಪದಂ ವಂದೇ ಬ್ರಹ್ಮೇಂದ್ರಾದ್ಯಭಿವಂದಿತಮ್ ॥ ೩ ॥**

**ಪ** : ಸರ್ವದೇವಾದಿದೇವಸ್ಯ, ವಿದಾರಿತಮಹತ್ತಮಃ, ಆನಂದಸ್ಯ, ಪದಂ, ವಂದೇ, ಬ್ರಹ್ಮೇಂದ್ರಾದ್ಯಭಿವಂದಿತಮ್ ।

**ಅ** : ಸರ್ವದೇವಾದಿದೇವಸ್ಯ, ವಿದಾರಿತಮಹತ್ತಮಃ, ಬ್ರಹ್ಮೇಂದ್ರಾದ್ಯಭಿವಂದಿತಮ್, ಆನಂದಸ್ಯ, ಪದಂ, ವಂದೇ ।

**ಪ್ರ.ಪ.** : **ಸರ್ವದೇವಾದಿದೇವಸ್ಯ** - ಸಕಲ ದೇವತೆಗಳಿಗೂ ಆದಿದೇವನಾದ; **ವಿದಾರಿತಮಹತ್ತಮಃ** - ಮಹತ್ತರವಾದ ಅಜ್ಞಾನವೆಂಬ ಕತ್ತಲೆಯನ್ನು ಪರಿಹರಿಸಿರುವ; (**ಬ್ರಹ್ಮೇಂದ್ರಾದ್ಯಭಿವಂದಿತಮ್** - ಬ್ರಹ್ಮ, ಇಂದ್ರಾದಿಗಳಿಂದ ವಿಶೇಷವಾಗಿ ವಂದಿತನಾದ;

**ಆನಂದಸ್ಯ** – ಆನಂದಪೂರ್ಣನಾದ ಶ್ರೀಹರಿಯ; **ಪದಂ** – ಪಾದವನ್ನು; **ವಂದೇ** – ವಂದಿಸುವೆನು.)

**ಸುರರನ್ನು ಸೃಜಿಸುತಿಹ ಗುಣಗಳಿಗೆ ಗಣೆಯಾದ**
**ಮನಕವಿದ ತಮವ ಕಳೆವ ।**
**ಬ್ರಹ್ಮೇಂದ್ರ ಮುಂತಾದ ಸುರರೆಲ್ಲ ಮಣಿಯುತಿಹ**
**ಆನಂದ ಚರಣನಿಗೆ ವಂದಿಸುವೆನು** ॥ ೩ ॥

**ಅನು : ಸಕಲ ದೇವತೆಗಳಿಗೂ ಆದಿದೇವನಾದ, ಮಹತ್ತರವಾದ ಅಜ್ಞಾನವೆಂಬ ಕತ್ತಲೆಯನ್ನು ಪರಿಹರಿಸುವ, (ಬ್ರಹ್ಮ, ಇಂದ್ರಾದಿಗಳಿಂದ ವಿಶೇಷವಾಗಿ ವಂದಿತನಾದ, ಆನಂದಪೂರ್ಣನಾದ, ಶ್ರೀಹರಿಯ ಪಾದವನ್ನು ವಂದಿಸುವೆನು.)**

ವಿ : ೧. ಶ್ರೀಹರಿಯು ದೇವತೆಗಳಿಗೂ ಆದಿದೇವನೆನಿಸಿರುವ ಸರ್ವಶ್ರೇಷ್ಠ ಎಂದರೆ ಅವನು ದೇವಾಧಿದೇವನು ಆಗಿರುವನು ಎಂದರ್ಥ.

೨. ತಮಸ್ಸು ಎಂದರೆ ಅಂಧಃತಮಸ್ಸು ಎಂದರ್ಥ; ಅಂತಹ ಅಂಧಃತಮಸ್ಸನ್ನು ತನ್ನ ಚಕ್ರದಿಂದ ಸೀಳಿದ ಅಪಾರವಾದ ಹಿರಿಮೆ ಶ್ರೀಹರಿಯದು[1]; ತಮಸ್ಸು ಎಂಬುದಕ್ಕೆ ಅಜ್ಞಾನ ಎಂಬ ಅರ್ಥವೂ ಇದೆ; ಯೋಗ್ಯರಿಗೆ ಕವಿಯುವ ಅಂತಹ ಅಜ್ಞಾನಾದಿಗಳನ್ನು ಶ್ರೀಹರಿಯು ಪರಿಹಾರ ಮಾಡುವನು ಎಂದು ಭಾವ.

೩. ಈ ಅರ್ಥದಲ್ಲಿ ಇದು ಜ್ಞಾನಕಾರ್ಯರೂಪಗಳಾದ ವೇದವ್ಯಾಸ, ಹಯಗ್ರೀವ, ದತ್ತಾತ್ರೇಯ ಮೊದಲಾದ ರೂಪಗಳಿಗೆ ವಿಶೇಷವಾಗಿ ಅನ್ವಯಿಸುವ ಸ್ತುತಿಯಾಗುವುದು.

೪. **ಸರ್ವತಃ ಪಾಣಿಪಾದಂ ತತ್ ಸರ್ವತೋಽಕ್ಷಿಶಿರೋಮುಖಂ । ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ** (ಗೀತಾ. ೧೩/೧೪) ಎಂಬುದು ಭಗವದ್ಗೀತೆಯ ವಚನ; **ಆನಂದಮಾತ್ರಕರಪಾದಮುಖೋದರಾದಿಃ ಸರ್ವತ್ರ ಚ ಸ್ವಗತಭೇದವಿವರ್ಜಿತಾತ್ಮ** (ಮ.ಭಾ.ತಾ.ನಿ. ೧/೧೧); '**ಆಪಾದ ಆನಂದ ಆನಖ ಆನಂದ**' ಎಂಬ ಶ್ರೀಪುರಂದರದಾಸರ ಮಾತಿನಂತೆ ಶ್ರೀಹರಿಯ ಪಾದವು ಆನಂದಾದಿ ಅನಂತಕಲ್ಯಾಣಗುಣಪೂರ್ಣ ಎಂದು ಭಾವ.

---

೧. ತಮಃ ಸುಘೋರಂ ಗಗನಚ್ಛದಂ ಮಹದ್ ವಿದಾರಯದ್ ಭೂರಿತರೇಣ ರೋಚಿಷಾ ।
ಮನೋಜವಂ ನಿರ್ವಿವಿಶೇ ಸುದರ್ಶನಂ ಗುಣಚ್ಯುತೋ ರಾಮಶರೋ ಯಥಾ ಚಮೂಃ ॥
– ಭಾಗವತ (೧೦/೧೦೦/೫೮)

ವಿದಾರ್ಯ ಚಕ್ರೇಣ ತಮೋಽಂಧಮೀಶಃ – ಮ.ಭಾ.ತಾ.ನಿ.(೨೧/೩೦)

**ಉದಾರಮಾದರಾನ್ನಿತ್ಯಮನಿಂದ್ಯಂ ಸುಂದರೀಪತೇಃ ।**
**ಆನಂದಸ್ಯ ಪದಂ ವಂದೇ ಬ್ರಹ್ಮೇಂದ್ರಾದ್ಯಭಿವಂದಿತಮ್ ॥ ೪ ॥**

**ಪ**: ಉದಾರಮ್, ಆದರಾತ್, ನಿತ್ಯಮ್, ಅನಿಂದ್ಯಮ್, ಸುಂದರೀಪತೇಃ, ಆನಂದಸ್ಯ, ಪದಂ, ವಂದೇ, ಬ್ರಹ್ಮೇಂದ್ರಾದ್ಯಭಿವಂದಿತಮ್ ।

**ಅ** : ಉದಾರಮ್, ಆದರಾತ್, ನಿತ್ಯಮ್, ಅನಿಂದ್ಯಮ್, ಸುಂದರೀಪತೇಃ, ಬ್ರಹ್ಮೇಂದ್ರಾದ್ಯಭಿವಂದಿತಮ್, ಆನಂದಸ್ಯ, ಪದಂ, ವಂದೇ ।

**ಪ್ರ.ಪ. : ಉದಾರವ್** - ಮಹತ್ತರವಾದ; **ನಿತ್ಯವ್** - ನಿತ್ಯವಾದ; **ಅನಿಂದ್ಯಮ್** - ನಿರ್ದೋಷವಾದ; **ಸುಂದರೀಪತೇಃ** - ಮಹಾಲಕ್ಷ್ಮಿಗೆ ಪತಿಯಾದ; (**ಬ್ರಹ್ಮೇಂದ್ರಾದ್ಯಭಿವಂದಿತಮ್** - ಬ್ರಹ್ಮ, ಇಂದ್ರಾದಿಗಳಿಂದ ವಿಶೇಷವಾಗಿ ವಂದಿತನಾದ; **ಆನಂದಸ್ಯ** - ಆನಂದಪೂರ್ಣನಾದ ಶ್ರೀಹರಿಯ; **ಪದಂ** - ಪಾದವನ್ನು; **ಆದರಾತ್** - ಆದರದಿಂದ; **ವಂದೇ** - ವಂದಿಸುವೆನು.)

**ಅತ್ಯಂತಹಿರಿಮಹಿಮ ದೋಷಗಳೆ ಇಲ್ಲದಿಹ**
**ಚೆಲುವಾಂತ ಲಕುಮಿಪತಿಯ ।**
**ಬ್ರಹ್ಮೇಂದ್ರ ಮುಂತಾದ ಸುರರೆಲ್ಲ ಮಣಿಯುತಿಹ**
**ಆನಂದ ಚರಣನಿಗೆ ವಂದಿಸುವೆನು ॥ ೪ ॥**

**ಅನು : ಮಹತ್ತರವಾದ, ನಿತ್ಯವಾದ, ನಿರ್ದೋಷವಾದ, ಮಹಾಲಕ್ಷ್ಮಿಗೆ ಪತಿಯಾದ, (ಬ್ರಹ್ಮ, ಇಂದ್ರಾದಿಗಳಿಂದ ವಿಶೇಷವಾಗಿ ವಂದಿತನಾದ, ಆನಂದಪೂರ್ಣನಾದ, ಶ್ರೀಹರಿಯ ಪಾದವನ್ನು ವಂದಿಸುವೆನು.)**

ವಿ : ೧. ಸಾಮಾನ್ಯವಾಗಿ ಪಾದವನ್ನು ಅಧಮಾಂಗವೆಂದೇ ಕರೆಯುವರು; ಆದರೆ ಭೇದವಿವರ್ಜಿತನಾದ ಶ್ರೀಹರಿಯ ಪಾದವೂ ಸಹ ಉತ್ತಮಾಂಗವೇ ಆಗಿದೆ ಎಂದು ಭಾವ.

೨. ಶ್ರೀಹರಿಯ ಪಾದವು ನಿತ್ಯ ಎಂದರೆ ಅನಾದಿನಿತ್ಯ ಎಂದರ್ಥ; ಅವನಿಗದು ಸ್ವರೂಪಭೂತವಾಗಿದ್ದು, ಜ್ಞಾನಾನಂದಮಯವಾಗಿದ್ದು, ಅವನಂತೆಯೇ ಪರಮನಿತ್ಯ ಎಂದು ಭಾವ. '**ಅನಿಂದ್ಯಂ**' ಎಂದರೆ ನಿಂದನೆಗೆ ಸರ್ವಥಾ ಪಾತ್ರವಲ್ಲದ್ದು ಎಂದರ್ಥ; ದೋಷರಹಿತವಾದದ್ದು ಎಂದು ತಾತ್ಪರ್ಯ.

೩. '**ಸುಂದರೀ**' ಎಂದರೆ ಮಹಾಲಕ್ಷ್ಮೀ ಎಂಬ ವಿವರ ಈಗಾಗಲೇ ಬಂದಿದೆ: **ಸುಂದರಿನಾಥ**(೬/೨). ಮಹಾಲಕ್ಷ್ಮಿಯು ಅವ್ಯಾಕೃತಾಕಾಶಕ್ಕೆ ಅಭಿಮಾನಿದೇವತೆ; ಅವಳು ಅನಾದಿನಿತ್ಯಳೇ; ಆದ್ದರಿಂದ ಅವಳಿಂದ ವಂದಿತನಾದ ಶ್ರೀಹರಿ ಅನಿಂದ್ಯ ಎಂದು ಭಾವ.

**ಇಂದೀವರೋದರನಿಭಂ ಸುಪೂರ್ಣಂ ವಾದಿಮೋಹದಮ್ ।**
**ಆನಂದಸ್ಯ ಪದಂ ವಂದೇ ಬ್ರಹ್ಮೇಂದ್ರಾದ್ಯಭಿವಂದಿತಮ್ ॥ ೫ ॥**

ಪ: ಇಂದೀವರೋದರನಿಭಮ್, ಸುಪೂರ್ಣಮ್, ವಾದಿಮೋಹದಮ್, ಆನಂದಸ್ಯ, ಪದಂ, ವಂದೇ, ಬ್ರಹ್ಮೇಂದ್ರಾದ್ಯಭಿವಂದಿತಮ್ ।

ಅ : ಇಂದೀವರೋದರನಿಭಮ್, ಸುಪೂರ್ಣಮ್, ವಾದಿಮೋಹದಮ್, ಬ್ರಹ್ಮೇಂದ್ರಾದ್ಯಭಿವಂದಿತಮ್, ಆನಂದಸ್ಯ, ಪದಂ, ವಂದೇ ।

ಪ್ರ.ಪ. : **ಇಂದೀವರೋದರನಿಭಮ್** – ಕನ್ನೈದಿಲೆಯ ಒಡಲಿನಂತಿರುವ; **ಸುಪೂರ್ಣಮ್** – ಪರಿಪೂರ್ಣವಾದ; **ವಾದಿಮೋಹದಮ್** – ವಾದಿಗಳ ಮೋಹವನ್ನು ಪರಿಹರಿಸುವ; (**ಬ್ರಹ್ಮೇಂದ್ರಾದ್ಯಭಿವಂದಿತಮ್** – ಬ್ರಹ್ಮ, ಇಂದ್ರಾದಿಗಳಿಂದ ವಿಶೇಷವಾಗಿ ವಂದಿತನಾದ; **ಆನಂದಸ್ಯ** – ಆನಂದಪೂರ್ಣನಾದ ಶ್ರೀಹರಿಯ; **ಪದಂ** – ಪಾದವನ್ನು; **ವಂದೇ** – ವಂದಿಸುವೆನು.)

**ನೀಲಕಮಲದ ರಮ್ಯ ಉದರದೊಲು ಚೆಲುಕಾಂತಿ**
**ಗುಣಗಳಿಂ ಪರಿಪೂರ್ಣ ವಾದಿದೂರ ।**
**ಬ್ರಹ್ಮೇಂದ್ರ ಮುಂತಾದ ಸುರರೆಲ್ಲ ಮಣಿಯುತಿಹ**
**ಆನಂದ ಚರಣನಿಗೆ ವಂದಿಸುವೆನು ॥ ೫ ॥**

**ಅನು : ಕನ್ನೈದಿಲೆಯ ಒಡಲಿನಂತಿರುವ, ಪರಿಪೂರ್ಣವಾದ, ವಾದಿಗಳ ಮೋಹವನ್ನು ಪರಿಹರಿಸುವ, (ಬ್ರಹ್ಮ, ಇಂದ್ರಾದಿಗಳಿಂದ ವಿಶೇಷವಾಗಿ ವಂದಿತನಾದ, ಆನಂದಪೂರ್ಣನಾದ, ಶ್ರೀಹರಿಯ ಪಾದವನ್ನು ವಂದಿಸುವೆನು.)**

ವಿ: ೧. ಶ್ರೀಹರಿಯ ಪಾದವು ಕನ್ನೈದಿಲೆಯಂತಿದೆ ಎಂದರ್ಥ; ಈ ದ್ವಾದಶಸ್ತೋತ್ರವು ಮುಖ್ಯವಾಗಿ ಶ್ರೀಕೃಷ್ಣ ಹಾಗೂ ಶ್ರೀರಾಮರೂಪಗಳ ಸ್ತುತಿ. ಅವರೆಡೂ ಶ್ಯಾಮಲವರ್ಣ ರೂಪದ್ದು; ಆದ್ದರಿಂದ ವಿಷ್ಣುಪಾದವು ಕನ್ನೈದಿಲೆಯಂತಹದ್ದು ಎಂದಾಗುವುದು.

೨. ಸುಪೂರ್ಣಂ ಎಂದರೆ ಅವನ ಪಾದಾದಿ ಅವಯವಗಳು ಸಹ ಪರಿಪೂರ್ಣ ಎಂದು ಭಾವ: **ಪೂರ್ಣಮದಃ ಪೂರ್ಣಮಿದಂ.**

೩. ಶ್ರೀಹರಿಯ ಪಾದಗಳು ಸ್ವರೂಪತಃ ಯೋಗ್ಯರಾದವರಿಗೆ ಮೋಹವನ್ನು ಪರಿಹರಿಸುವಂತಹ ಉದ್ಧಾರದ ಕಾರ್ಯವನ್ನು ಮಾಡುವವು (**ಮೋಹಂ ದ್ಯತಿ**). ಅದರಂತೆ ಅಯೋಗ್ಯರಿಗೆ ಮೋಹವನ್ನು ಕವಿಸುವವಂತಹ ಅನರ್ಥಕರವಾದ ಕಾರ್ಯವನ್ನು ಮಾಡುವವು(**ಮೋಹಂ ದದಾತಿ**). ಹೀಗೆ ಏಕಕಾಲಕ್ಕೆ ಯೋಗ್ಯತೆಗೆ ತಕ್ಕಂತೆ ಫಲ ನೀಡುವ

ವಿಶೇಷ ಹಿರಿಮೆ ಶ್ರೀಹರಿಯದು ಎಂದು ಭಾವ; ಶ್ರೀವೇದವ್ಯಾಸರೂಪದ ಶ್ರೀಹರಿಯಿಂದ ಕೃತವಾದ ಶಾಸ್ತ್ರಗಳೂ ಸಹ ಇದೇ ತೆರನಾಗಿ ಯೋಗ್ಯರಿಗೆ ಜ್ಞಾನದಾಯಕವಾದರೆ, ಅಯೋಗ್ಯರಿಗೆ ಜ್ಞಾನನಾಶಕವಾಗಿವೆ ಎಂಬುದು ವಿಶೇಷ.

**ದಾತೃ ಸರ್ವಾಮರೈಶ್ವರ್ಯವಿಮುಕ್ತ್ಯಾದೇರಹೋ ವರಮ್ ।**
**ಆನಂದಸ್ಯ ಪದಂ ವಂದೇ ಬ್ರಹ್ಮೇಂದ್ರಾದ್ಯಭಿವಂದಿತಮ್ ॥ ೬ ॥**

**ಪ :** ದಾತೃ, ಸರ್ವಾಮರೈಶ್ವರ್ಯವಿಮುಕ್ತ್ಯಾದೇಃ, ಅಹೋ, ವರಮ್, ಆನಂದಸ್ಯ, ಪದಂ, ವಂದೇ, ಬ್ರಹ್ಮೇಂದ್ರಾದ್ಯಭಿವಂದಿತಮ್ ।

**ಅ :** ಅಹೋ, ಸರ್ವಾಮರೈಶ್ವರ್ಯವಿಮುಕ್ತ್ಯಾದೇಃ, ದಾತೃ, ವರಮ್, ಬ್ರಹ್ಮೇಂದ್ರಾದ್ಯಭಿವಂದಿತಮ್, ಆನಂದಸ್ಯ, ಪದಂ, ವಂದೇ ।

**ಪ್ರ.ಪ. : ಅಹೋ** – [1]ಆಶ್ಚರ್ಯಕರವಾದ; **ಸರ್ವಾಮರೈಶ್ವರ್ಯವಿಮುಕ್ತ್ಯಾದೇಃ** – ಸಕಲ ದೇವತೆಗಳಿಗೂ ಐಶ್ವರ್ಯ, ಮುಕ್ತಿ ಮೊದಲಾದವುಗಳನ್ನು; **ದಾತೃ** – ನೀಡುವ; **ವರಮ್** – ಶ್ರೇಷ್ಠವಾದ; (**ಬ್ರಹ್ಮೇಂದ್ರಾದ್ಯಭಿವಂದಿತಮ್** – ಬ್ರಹ್ಮ, ಇಂದ್ರಾದಿಗಳಿಂದ ವಿಶೇಷವಾಗಿ ವಂದಿತನಾದ; **ಆನಂದಸ್ಯ** – ಆನಂದಪೂರ್ಣನಾದ ಶ್ರೀಹರಿಯ; **ಪದಂ** – ಪಾದವನ್ನು; **ವಂದೇ** – ವಂದಿಸುವೆನು.)

**ಸುರಗಣಕೆ ಐಸಿರಿಯ ಮೋಕ್ಷಾದಿಗಳನೀವ**
**ಅತ್ಯಂತ ಮಿಗಿಲಾದ ಪರಮ ಅಚ್ಚರಿಯ ।**
**ಬ್ರಹ್ಮೇಂದ್ರ ಮುಂತಾದ ಸುರರೆಲ್ಲ ಮಣಿಯುತಿಹ**
**ಆನಂದ ಚರಣನಿಗೆ ವಂದಿಸುವೆನು ॥ ೬ ॥**

**ಅನು : ಆಶ್ಚರ್ಯಕರವಾದ, ಸಕಲ ದೇವತೆಗಳಿಗೂ ಐಶ್ವರ್ಯ, ಮುಕ್ತಿ ಮೊದಲಾದವುಗಳನ್ನು ನೀಡುವ, ಶ್ರೇಷ್ಠವಾದ, (ಬ್ರಹ್ಮ, ಇಂದ್ರಾದಿಗಳಿಂದ ವಿಶೇಷವಾಗಿ ವಂದಿತನಾದ, ಆನಂದಪೂರ್ಣನಾದ, ಶ್ರೀಹರಿಯ ಪಾದವನ್ನು ವಂದಿಸುವೆನು.)**

---

೧. ಇದು ಶ್ರೀಮದ್ಭಗವದ್ಗೀತೆಯಲ್ಲಿ ಬಂದಿರುವಂತೆ ಶ್ರೀಹರಿಯ ಪ್ರತಿಯೊಂದು ಮಹಿಮೆಯೂ ಸಹ ಅತ್ಯಂತ ಆಶ್ಚರ್ಯಕರ ಎಂಬ ವಿಶೇಷತೆಯನ್ನು ಸೂಚಿಸುವುದು:
ಆಶ್ಚರ್ಯವತ್ ಪಶ್ಯತಿ ಕಶ್ಚಿದೇನಮಾಶ್ಚರ್ಯವದ್ವದತಿ ತಥೈವ ಚಾನ್ಯಃ ।
ಆಶ್ಚರ್ಯವಚ್ಚೈನಮನ್ಯಃ ಶೃಣೋತಿ ಶ್ರುತ್ವಾऽಪ್ಯೇನಂ ವೇದ ನ ಚೈವ ಕಶ್ಚಿತ್ ॥ – ೨/೨೯
– ಅದರಂತೆ ಹರಿವಂಶದಲ್ಲಿ ಬಂದಿರುವ ಧನ್ಯಾಶ್ಚರ್ಯೋಪಾಖ್ಯಾನದ ವಿಶೇಷಾಂಶವನ್ನು ಸೂಚಿಸುವುದು.

ವಿ : ೧. ಸಕಲ ದೇವತೆಗಳಿಗೂ, ಸಕಲ ಬಗೆಯ ಐಶ್ವರ್ಯವನ್ನು ನೀಡುವ ಹಿರಿಮೆ ಶ್ರೀಹರಿಯ ಪಾದದ್ದು ಎಂದು ಭಾವ.

೨. ಶ್ರೀಹರಿಯ ಪಾದವು ಮುಕ್ತಿಯನ್ನು ಎಂದರೆ, ಯೋಗ್ಯರಿಗೆ ಸ್ವರೂಪಾನಂದಾ-ವಿರ್ಭಾವರೂಪವಾದ ಮುಕ್ತಿಯನ್ನು, ಅಯೋಗ್ಯರಿಗೆ ತಮಃಪ್ರಾಪ್ತಿರೂಪವಾದ ಮುಕ್ತಿಯನ್ನು ಕೊಡುವುದು ಎಂದರ್ಥ; ಅಂಬರಗಂಗಾಚುಂಬಿತಪಾದಃ ಎಂಬುದಾಗಿ ಗಂಗೆಯ ಪ್ರಸಂಗದಲ್ಲಿ ಪೂಜ್ಯತೆಯನ್ನು ಹೇಗೋ, ಹಾಗೆ, ಮಂಥರೆ ಮೊದಲಾದವರ ಪ್ರಸಂಗದಲ್ಲಿ ಅಂಧಂತಮಸ್ಸನ್ನು ಹೇಗೋ ಹಾಗೆ ಎಂದು ತಿಳಿಯಬೇಕು.

೩. ಶ್ರೀಮದಾಚಾರ್ಯರಿಂದ ಬಾಲ್ಯದಲ್ಲಿಯೇ ರಚಿತವೆಂದು ಪ್ರಸಿದ್ಧವಿರುವ ಕಂದುಕಸ್ತುತಿಯ ಆದಿಭಾಗವು ಇದರಂತೆಯೇ ಶ್ರೀಹರಿಯ ಪಾದದ ಸ್ತುತಿಯಾಗಿರುವುದು ವಿಶೇಷ[೧].

**ದೂರಾದ್ದೂರತರಂ[೨] ಯತ್ ತು ತದೇವಾಂತಿಕಮಂತಿಕಾತ್ ।**
**ಆನಂದಸ್ಯ ಪದಂ ವಂದೇ ಬ್ರಹ್ಮೇಂದ್ರಾದ್ಯಭಿವಂದಿತಮ್ ॥ ೭ ॥**

**ಪ :** ದೂರಾತ್, ದೂರತರಂ, ಯತ್, ತು, ತತ್, ಏವ, ಆಂತಿಕಮ್, ಅಂತಿಕಾತ್, ಆನಂದಸ್ಯ, ಪದಂ, ವಂದೇ, ಬ್ರಹ್ಮೇಂದ್ರಾದ್ಯಭಿವಂದಿತಮ್ ।

**ಅ :** ಯತ್, ತು, ದೂರಾತ್, ದೂರತರಂ, ತತ್, ಏವ, ಅಂತಿಕಾತ್, ಆಂತಿಕಮ್, ಬ್ರಹ್ಮೇಂದ್ರಾದ್ಯಭಿವಂದಿತಮ್, ಆನಂದಸ್ಯ, ಪದಂ, ವಂದೇ ।

**ಪ್ರ.ಪ. : ಯತ್ ತು** – ಯಾವುದು; **ದೂರಾತ್** – ದೂರಕ್ಕಿಂತ; **ದೂರತರಂ** – ಅತ್ಯಂತ ದೂರವಾಗಿರುವುದೋ; **ತತ್** ಏವ – ಅದೇ; **ಅಂತಿಕಾತ್** – ಹತ್ತಿರಕ್ಕಿಂತ; **ಆಂತಿಕಮ್** – ಹತ್ತಿರವಾಗಿದೆಯೋ; (**ಬ್ರಹ್ಮೇಂದ್ರಾದ್ಯಭಿವಂದಿತಮ್** – ಬ್ರಹ್ಮ, ಇಂದ್ರಾದಿಗಳಿಂದ ವಿಶೇಷವಾಗಿ ವಂದಿತನಾದ; **ಆನಂದಸ್ಯ** – ಆನಂದಪೂರ್ಣನಾದ ಶ್ರೀಹರಿಯ; **ಪದಂ** – ಪಾದವನ್ನು; **ವಂದೇ** – ವಂದಿಸುವೆನು.)

**ಕುಜನ ವೃಂದಕೆ ಎಂದು ದೂರದೂರನು ಇವನು**
**ಸುಜನವೃಂದಕೆ ಎಂದು ಅತ್ಯಂತ ಸನಿಹ ।**
**ಬ್ರಹ್ಮೇಂದ್ರ ಮುಂತಾದ ಸುರರೆಲ್ಲ ಮಣಿಯುತಿಹ**
**ಆನಂದ ಚರಣನಿಗೆ ವಂದಿಸುವೆನು ॥ ೭ ॥**

---

೧. ಇದನ್ನು ಪರಿಶಿಷ್ಟ-೧ ರಲ್ಲಿ ಕನ್ನಡಾನುವಾದ ಸಮೇತವಾಗಿ ಕೊಡಲಾಗಿದೆ.

೨. 'ತದ್ದೂರೇ ತದ್ವಂತಿಕೇ' – ಈಶಾವಾಸ್ಯೋಪನಿಷತ್ (೫)

**ಅನು : ಯಾವುದು ದೂರಕ್ಕಿಂತ ಅತ್ಯಂತ ದೂರವಾಗಿರುವುದೋ, ಅದೇ ಹತ್ತಿರಕ್ಕಿಂತ ಹತ್ತಿರವಾಗಿದೆಯೋ, (ಬ್ರಹ್ಮ, ಇಂದ್ರಾದಿಗಳಿಂದ ವಿಶೇಷವಾಗಿ ವಂದಿತನಾದ, ಆನಂದಪೂರ್ಣನಾದ, ಶ್ರೀಹರಿಯ ಪಾದವನ್ನು ವಂದಿಸುವೆನು.)**

ವಿ: ೧. ಶ್ರೀಹರಿಯು ಸರ್ವತ್ರ ವ್ಯಾಪ್ತ; ಆದ್ದರಿಂದ ಅವನ ಪಾದವು ದೂರಕ್ಕಿಂತ ದೂರ, ಸನಿಹಕ್ಕಿಂತ ಸನಿಹ ಎಂದು ಭಾವ.

೨. ಶ್ರೀಹರಿಯ ಪಾದವು ಸರ್ವತ್ರ ವ್ಯಾಪ್ತವಾಗಿದ್ದರೂ, ದ್ವೇಷಿಗಳಿಗೆ ತುಂಬಾ ದೂರ; ಅದರಂತೆ ಭಕ್ತರಿಗೆ ತುಂಬಾ ಸನಿಹ; ಈ ಮಾತು ಅನುಗ್ರಹದ ಹಿನ್ನೆಲೆಯಲ್ಲಿ ತುಂಬಾ ಅರ್ಥವತ್ತಾದುದು; **ಪ್ರೀಣಯಾಮೋ ವಾಸುದೇವಂ** ಎಂಬಲ್ಲಿನ **ನಶ್ಯತಾಂ ದೂರಗಂ ಸರ್ವದಾಪ್ಯಾತ್ಮಗಂ** ಎಂಬ ಮಾತಿಗೆ ಇದು ವಿವರಣೆಯಂತಿದೆ.

೩. ದುರ್ಯೋಧನಾದಿಗಳಂತಹ ದುಷ್ಟರ ಹಾಗೂ ಅರ್ಜುನಾದಿ ಶಿಷ್ಟರ ಪ್ರಸಂಗದಲ್ಲಿ ಇದು ಸ್ಪಷ್ಟವಾಗಿದೆ.

**ಪೂರ್ಣಸರ್ವಗುಣೈಕಾರ್ಣಮನಾದ್ಯಂತಂ ಸುರೇಶಿತುಃ ।**
**ಆನಂದಸ್ಯ ಪದಂ ವಂದೇ ಬ್ರಹ್ಮೇಂದ್ರಾದ್ಯಭಿವಂದಿತಮ್ ॥ ೮ ॥**

**ಪ :** ಪೂರ್ಣಸರ್ವಗುಣೈಕಾರ್ಣಮ್, ಅನಾದ್ಯಂತಮ್, ಸುರೇಶಿತುಃ, ಆನಂದಸ್ಯ, ಪದಂ, ವಂದೇ, ಬ್ರಹ್ಮೇಂದ್ರಾದ್ಯಭಿವಂದಿತಮ್ ।

**ಅ :** ಪೂರ್ಣಸರ್ವಗುಣೈಕಾರ್ಣವಮ್, ಅನಾದ್ಯಂತವಮ್, ಸುರೇಶಿತುಃ, ಬ್ರಹ್ಮೇಂದ್ರಾದ್ಯಭಿವಂದಿತಮ್, ಆನಂದಸ್ಯ, ಪದಮ್, ವಂದೇ ।

**ಪ್ರ.ಪ. : ಪೂರ್ಣಸರ್ವಗುಣೈಕಾರ್ಣಮ್** – ಪರಿಪೂರ್ಣವಾದ, ಸಕಲ ಗುಣಗಳಿಗೆ ಮುಖ್ಯನೆಲೆಯಾದ; **ಅನಾದ್ಯಂತಮ್** – ಆದಿ, ಅಂತ್ಯಗಳಿರದ; **ಸುರೇಶಿತುಃ** – ದೇವತೆಗಳಿಗೆ ಈಶನಾದ; (**ಬ್ರಹ್ಮೇಂದ್ರಾದ್ಯಭಿವಂದಿತಮ್** – ಬ್ರಹ್ಮ, ಇಂದ್ರಾದಿಗಳಿಂದ ವಿಶೇಷವಾಗಿ ವಂದಿತನಾದ; **ಆನಂದಸ್ಯ** – ಆನಂದಪೂರ್ಣನಾದ ಶ್ರೀಹರಿಯ; **ಪದಂ** – ಪಾದವನ್ನು; **ವಂದೇ** – ವಂದಿಸುವೆನು.)

**ಪರಿಪೂರ್ಣಗುಣಗಳಿಗೆ ಹಿರಿಕಡಲು ಆಗಿರುವ**
**ಆದ್ಯಂತವಿಲ್ಲದಿಹ ದಿವಿಜರೊಡೆಯ ।**
**ಬ್ರಹ್ಮೇಂದ್ರ ಮುಂತಾದ ಸುರರೆಲ್ಲ ಮಣಿಯುತಿಹ**
**ಆನಂದ ಚರಣನಿಗೆ ವಂದಿಸುವೆನು ॥ ೮ ॥**

**ಅನು : ಪರಿಪೂರ್ಣನಾದ, ಸಕಲಗುಣಸಮುದ್ರನಾದ, ಆದಿ, ಅಂತ್ಯಗಳಿರದ, ದೇವತೆಗಳಿಗೆ ಈಶನಾದ, (ಬ್ರಹ್ಮ, ಇಂದ್ರಾದಿಗಳಿಂದ ವಿಶೇಷವಾಗಿ ವಂದಿತನಾದ, ಆನಂದಪೂರ್ಣನಾದ, ಶ್ರೀಹರಿಯ ಪಾದವನ್ನು ವಂದಿಸುವೆನು.)**

ವಿ : ೧. ಶ್ರೀಹರಿಯ ಪಾದವು ಪರಿಪೂರ್ಣವಾದುದು, ಸರ್ವಗುಣಗಳಿಗೂ ನೆಲೆಯಾದುದು; ಅವನ ಇತರ ಅವಯವಗಳಂತೆ ಕೊನೆ, ಮೊದಲು ಇರದ ಅನಾದಿನಿತ್ಯವಾದುದು ಎಂದರ್ಥ.

೨. ಅನಾದಿ ಹಾಗೂ ಅನಂತ ಎಂದರೆ ಸರ್ವಥಾ ಅಪ್ರಾಕೃತ ಎಂದರ್ಥ.

೩. ಸರ್ವಗುಣಗಳು ಎಂದರೆ ಜ್ಞಾನಾನಂದಾದಿ ಅನಂತಾನಂತಗುಣಗಳು ಎಂದರ್ಥ.

**ಆನಂದತೀರ್ಥಮುನಿನಾ ಹರೇರಾನಂದರೂಪಿಣಃ ।**
**ಕೃತಂ ಸ್ತೋತ್ರಮಿದಂ ಪುಣ್ಯಂ ಪಠನ್ನಾನಂದತಾಮಿಯಾತ್ ॥ ೯ ॥**

**॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ದ್ವಾದಶಸ್ತೋತ್ರೇ ಏಕಾದಶೋಽಧ್ಯಾಯಃ ॥**

**ಪ :** ಆನಂದತೀರ್ಥಮುನಿನಾ, ಹರೇಃ, ಆನಂದರೂಪಿಣಃ, ಕೃತಮ್, ಸ್ತೋತ್ರಮ್, ಇದಮ್, ಪುಣ್ಯಮ್, ಪಠನ್, ಆನಂದತಾಮ್, ಇಯಾತ್ ।

**ಅ :** ಆನಂದತೀರ್ಥಮುನಿನಾ, ಕೃತಮ್, ಆನಂದರೂಪಿಣಃ, ಹರೇಃ, ಇದಮ್, ಪುಣ್ಯಮ್, ಸ್ತೋತ್ರಮ್, ಪಠನ್, ಆನಂದತಾಮ್, ಇಯಾತ್ ।

**ಪ್ರ.ಪ. :** **ಆನಂದತೀರ್ಥಮುನಿನಾ** – ಆನಂದತೀರ್ಥಮುನಿಗಳಿಂದ; **ಕೃತಮ್** – ರಚಿತವಾದ; **ಆನಂದರೂಪಿಣಃ** – ಆನಂದಸ್ವರೂಪವಾದ; **ಹರೇಃ** – ಹರಿಯ; **ಇದಮ್** – ಈ; **ಪುಣ್ಯಮ್** – ಪುಣ್ಯಕರವಾದ; **ಸ್ತೋತ್ರಮ್** – ಸ್ತೋತ್ರವನ್ನು; **ಪಠನ್** – ಪಠಿಸುವವನು; **ಆನಂದತಾಮ್** – ಆನಂದರೂಪವನ್ನು; **ಇಯಾತ್**–ಹೊಂದುವನು.

**ಆನಂದತೀರ್ಥಾರ್ಯಮುನಿವರ್ಯ ರಚಿಸಿರುವ**
**ಆನಂದರೂಪಿ ಹರಿಯ ।**
**ಪುಣ್ಯಸಾಧನವಾದ ಈ ಸ್ತವನ ಪಠಿಸುವನು**
**ಆನಂದರೂಪವಹ ಮುಕುತಿಯೈದುವನು ॥ ೯ ॥**

**॥ ದ್ವಾದಶಸ್ತೋತ್ರದ ಕನ್ನಡಪದ್ಯಾನುವಾದದಲ್ಲಿ ಹನ್ನೊಂದನೆಯ ಅಧ್ಯಾಯ ಮುಕ್ತಾಯವಾಯಿತು ॥**

**ಅನು : ಆನಂದತೀರ್ಥಮುನಿಗಳಿಂದ ರಚಿತವಾದ ಆನಂದಸ್ವರೂಪವಾದ ಶ್ರೀಹರಿಯ ಈ ಪುಣ್ಯಕರವಾದ ಸ್ತೋತ್ರವನ್ನು ಪಠಿಸುವವರು ಆನಂದರೂಪವನ್ನು ಹೊಂದುವರು.**

೧. ಈ ಸ್ತೋತ್ರವನ್ನು ಬರೆದವರು ಆನಂದತೀರ್ಥರೆಂಬ ಮುನಿಗಳು; ಸ್ತುತ್ಯನಾದವನು ಆನಂದಸ್ವರೂಪನಾದ ಶ್ರೀಹರಿ; ದೊರಕುವ ಫಲ ನಿತ್ಯಾನಂದರೂಪ ಎಂಬ ಭಾವ ಇಲ್ಲಿ ರೋಚಕ.

೨. **ಹರಿ** ಎಂದರೆ ಪಾಪವನ್ನು ಪರಿಹರಿಸುವವನು (ಪರಿಹರತಿ) ಹಾಗೂ ಪುಣ್ಯವನ್ನು ತಂದುಕೊಡುವವನು (ಆಹರತಿ) ಎಂದರ್ಥ. ಸಕಲಪಾಪಗಳ ಪರಿಹಾರ ಹಾಗೂ ಸಕಲಪುಣ್ಯ-ರಾಶಿಪ್ರಾಪ್ತಿ - ಎಂದರೆ ಮುಕ್ತಿಯೆಂದೇ ಅರ್ಥ.

೩. ಇಲ್ಲಿ **ಪದ** ಎಂಬುದಕ್ಕೆ ಶ್ರೀಹರಿಯಿಂದ ರಚಿತವಾದ, ಪ್ರಕಾಶಿತವಾದ, ಆನಂದರೂಪವಾದ, ಆನಂದಪ್ರದವಾದ ಶಾಸ್ತ್ರ ಎಂದು ಸಹ ಅರ್ಥ ಮಾಡಿಕೊಳ್ಳಬಹುದು; ಆ ಅರ್ಥದಲ್ಲಿ ಈ ಸಮಗ್ರ ಸ್ತೋತ್ರವನ್ನು ಭಗವದುಪದಿಷ್ಟವಾದ ಬ್ರಹ್ಮಸೂತ್ರ, ಮಹಾಭಾರತಾದಿ ಶಾಸ್ತ್ರಗ್ರಂಥಗಳ ಪರವಾಗಿಯೂ ಅರ್ಥೈಸಬಹುದು; ಆನಂದಸ್ಯ ಆನಂದರೂಪದ ಶ್ರೀಹರಿಯ ಪದರೂಪವಾದ ಶಾಸ್ತ್ರವನ್ನು ವಂದಿಸುವೆನು ಎಂದು ಅರ್ಥವಾಗುವುದು. '**ರೂಪಮನ್ಯದಿವ ಧನ್ಯಮಾತ್ಮನಃ**' (ಮಧ್ವವಿಜಯ೯/೧೧) ಎಂಬಂತೆ. ಮಂಗಳಾಷ್ಟಕದ ಈ ಕೆಳಗಿನ ಮಾತಿನಂತೆ ಎಂದು ಇದನ್ನು ತಿಳಿಯಬೇಕು:

> **ವೇದಾಶ್ಚೋಪನಿಷದ್ಗಣಾಶ್ಚ ವಿವಿಧಾಃ ಸಾಂಗಾಃ ಪುರಾಣಾನ್ವಿತಾ**
> **ವೇದಾಂತಾ ಅಪಿ ಮಂತ್ರತಂತ್ರಸಹಿತಾಸ್ತರ್ಕಾಃ ಸ್ಮೃತೀನಾಂ ಗಣಾಃ।**
> **ಕಾವ್ಯಾಲಂಕೃತಿನೀತಿನಾಟಕಯುತಾಃ ಶಬ್ದಾಶ್ಚ ನಾನಾವಿಧಾಃ**
> **ಶ್ರೀವಿಷ್ಣೋರ್ಗುಣರಾಶಿಕೀರ್ತನಪರಾಃ ಕುರ್ವಂತು ನೋ ಮಂಗಲಮ್ ॥**

೪. ಶಾಸ್ತ್ರಪರವಾಗಿ ಅರ್ಥ ಮಾಡಿದಾಗ ಅದು ಉತ್ಕೃಷ್ಟ ಮುಪ್ಪಿಲ್ಲದ್ದು ಅಲೌಕಿಕ, ಮೋಕ್ಷಸಾಧಕ, ಬ್ರಹ್ಮೇಂದ್ರಾದಿ ದೇವತಾವೃಂದವಂದಿತ, ಸಕಲ ವೇದಗಳಿಂದಲೂ ಉತ್ತಮ ಎಂದು ಪ್ರಶಂಸಿತ; ಮಹಾಲಕ್ಷ್ಮಿಯಿಂದ ಅಭಿಮಾನ್ಯಮಾನ, ಸದಾ ಅಜ್ಞಾನವನ್ನು ಸಂಪೂರ್ಣ ನಾಶಮಾಡುವ ಅನಿಂದ್ಯವಾದ ಕನ್ನೈದಿಲೆಯಂತಹ ಅಕ್ಷರಗಳಿಂದ ಶೋಭಿಸುವ, ಸಾತ್ತ್ವಿಕಸ್ವಭಾವದವರ ಮೋಹ ಅಳಿಸುವ, ದುರ್ವಾದಿಗಳಿಗೆ ಮೋಹ ಕವಿಸುವ, ಅಧ್ಯಯನ ಮಾಡುವ ಸಕಲರಿಗೂ ಪರಮೈಶ್ವರ್ಯವನ್ನು ನೀಡುವ, ವಿಶೇಷಮುಕ್ತಿಗೆ ಸಾಧನವಾದ, ದುಷ್ಟರಿಗೆ ಅತ್ಯಂತ ದೂರವೆನ್ನಿಸುವ, ಸಜ್ಜನರಿಗೆ ತುಂಬಾ ಹತ್ತಿರವಾಗುವ, ಪರಿಪೂರ್ಣಗುಣಸಾಗರನಾದ ಶ್ರೀಹರಿಯನ್ನು ಪ್ರತಿಪಾದಿಸುವ, ಅನಾದಿನಿತ್ಯವಾದ ಹಿರಿಮೆಯನ್ನು ಹೊಂದಿದೆ ಎಂದು ಅರ್ಥವಾಗುವುದು.

೫. ಇದು **ಆನಂದಸ್ಯ ಪದಂ** ಎಂದರೆ ಆನಂದತೀರ್ಥರ ಶಾಸ್ತ್ರ ಎಂದು ಅರ್ಥ ಮಾಡಿಕೊಂಡಾಗ, ಮಧ್ವಶಾಸ್ತ್ರದ ಅಪಾರವಾದ ಮಾಹಾತ್ಮ್ಯವನ್ನು ಪ್ರತಿಪಾದಿಸುವ ಅಪೂರ್ವಸ್ತೋತ್ರವೂ ಆಗುವುದು.

ಮಹಾನಂದತೀರ್ಥಸ್ಯ ಯೇ ಭಾಷ್ಯಭಾವಂ ಮನೋವಾಗ್ಭಿರಾವರ್ತಯಂತೇ ಸ್ವಶಕ್ತ್ಯಾ ।
ಸುರಾದ್ಯಾ ನರಾಂತಾ ಮುಕುಂದಪ್ರಸಾದಾದಿಮಂ ಮೋಕ್ಷಮೇತೇ ಭಜಂತೇ ಸದೇತಿ ॥
(ಮಧ್ವವಿಜಯ . ೧೧/೭೯)

ಅಭ್ರಮಂ ಭಂಗರಹಿತಮಜಡಂ ವಿಮಲಂ ಸದಾ ।
ಆನಂದತೀರ್ಥಮತುಲಂ ಭಜೇ ತಾಪತ್ರಯಾಪಹಮ್ ।
- ನ್ಯಾಯಾಮೃತ(ಶ್ರೀವ್ಯಾಸರಾಜರು)

೬. ಶ್ರೀಮದಾಚಾರ್ಯರ ಈ ಸ್ತೋತ್ರದ ಹಿನ್ನೆಲೆಯಲ್ಲಿಯೇ ಹರಿದಾಸಸಾಹಿತ್ಯದಲ್ಲಿ ಅನೇಕ ಕೃತಿಗಳು ಕಂಡುಬರುವವು. ಶ್ರೀವಿಜಯದಾಸರ ಪಾದಸುಳಾದಿ, ಶ್ರೀಕನಕದಾಸರ ಪಾದವರ್ಣನೆಯ ಕೀರ್ತನೆ ಮೊದಲಾದವುಗಳು ಇದಕ್ಕೆ ನಿದರ್ಶನ.

*****

## ೧೨. ದ್ವಾದಶಾಧ್ಯಾಯ (ಪರಾನಂದಸ್ತುತಿ)

**ಆನಂದ ಮುಕುಂದ [೧]ಅರವಿಂದನಯನ ।**
**ಆನಂದತೀರ್ಥಪರಾನಂದವರದ ॥ ೧ ॥**

**ಪ :** ಆನಂದ ,ಮುಕುಂದ, ಅರವಿಂದನಯನ, ಆನಂದತೀರ್ಥಪರಾನಂದವರದ।

**ಅ :** ಆನಂದ ,ಮುಕುಂದ, ಅರವಿಂದನಯನ, ಆನಂದತೀರ್ಥಪರಾನಂದವರದ।

**ಪ್ರ.ಪ. : ಆನಂದ** - ಎಲ್ಲೈ ಆನಂದಪೂರ್ಣನೇ !;**ಮುಕುಂದ** - ಮುಕ್ತಿಯನ್ನು ನೀಡುವವನೇ!; **ಅರವಿಂದನಯನ** – ಪುಂಡರೀಕಾಕ್ಷನೇ!; **ಆನಂದತೀರ್ಥಪರಾನಂದವರದ** – ಆನಂದತೀರ್ಥರಿಗೆ ಪೂರ್ಣಾನಂದವೆಂಬ ಸುಖವನ್ನು ನೀಡುವವನೇ! (ನಿನಗೆ ವಂದನೆ)

**ಮೋದರೂಪ ಮುಕ್ತಿದಾತ ಕಮಲನಯನನೆ ।**
**ಮಧ್ವಮುನಿಗೆ ಪರಮಮೋದವರವನೀವನೆ ॥ ೧ ॥**

**ಅನು: ಎಲ್ಲೈ ಆನಂದಪೂರ್ಣನೆ! ಮುಕ್ತಿಯನ್ನು ನೀಡುವವನೇ! ಪುಂಡರೀಕಾಕ್ಷನೆ! ಆನಂದತೀರ್ಥರಿಗೆ ಪೂರ್ಣಾನಂದವೆಂಬ ಸುಖವನ್ನು ನೀಡುವವನೇ! ನಿನಗೆ ವಂದನೆ.**

ವಿ : ೧. ಇದು ಹನ್ನೆರಡನೆ ಹಾಗೂ ಕೊನೆಯ ಸ್ತೋತ್ರವಾಗಿದೆ; ಹರಿದಾಸ ಸಾಹಿತ್ಯದ ಅಂಕಿತ ಪದ್ಧತಿಗೆ ನಾಂದಿ ಹಾಡಿದ ಕೃತಿಯಾಗಿಯೂ ಇದು ಮಹತ್ವಪೂರ್ಣವೆನ್ನಿಸುವುದು.

೨. ಒಂದು ರೀತಿಯಲ್ಲಿ ಇದು ಹರಿದಾಸಸಾಹಿತ್ಯದಲ್ಲಿ ಕೊನೆಯ ನುಡಿಯಲ್ಲಿ ಅಂಕಿತವನ್ನು ಅಳವಡಿಸುವ ಪದ್ಧತಿಗೆ ನಾಂದಿಹಾಡಿದ ಕೃತಿ ಎನ್ನಬಹುದು.

೩. ಇದರಲ್ಲಿ ನೇರವಾಗಿ ಶ್ರೀಹರಿಯನ್ನು ಸಂಬೋಧಿಸುತ್ತಾ, ನಿನಗೆ ವಂದಿಸುವೆ ಎಂದು ಸ್ತುತಿಸಲಾಗಿದೆ.

೪. ಆನಂದ ಮುಕುಂದ ಎಂಬ ಪದಗಳು ವಿಷ್ಣುಸಹಸ್ರನಾಮದಲ್ಲಿ ಬಂದಿದೆ: **'ಆನಂದೋ ನಂದನೋ ನಂದಃ'**; 'ಮುಕುಂದೋಽಮಿತವಿಕ್ರಮಃ'.

೫. ಈ ಸ್ತೋತ್ರದ ಪಲ್ಲವಿಯಾಗಿ ಆನಂದತೀರ್ಥಪರಾನಂದವರದ ಪ್ರತಿಶ್ಲೋಕಕ್ಕೂ ಅನ್ವಯಿಸುವುದು; ಪ್ರೀಣಯಾಮೋ ವಾಸುದೇವಂ ಇತ್ಯಾದಿ.

೬. ಆನಂದತೀರ್ಥರ ಶಾಸ್ತ್ರದ, ಪಾಠಪ್ರವಚನರೂಪದ, ಅಧ್ಯಯನಾದಿರೂಪದ ಕಾರ್ಯದಲ್ಲಿ ನಿರತರಾದವರಿಗೆ ಸ್ವರೂಪಾನಂದಾವಿರ್ಭಾವರೂಪವಾದ ಮುಕ್ತಿಯನ್ನು

---

೧. ಪದ್ಮನಾಭೋಽರವಿಂದಾಕ್ಷಃ – ವಿಷ್ಣುಸಹಸ್ರನಾಮ

ಶ್ರೀಹರಿಯು ನೀಡುವನು (**'ಆನಂದತೀರ್ಥಾಧ್ಯಯನಪರಾಣಾಂ ಗುರೂಣಾಂ ಶಿಷ್ಯಾಣಾಂ ಚ ಪರಃ ಆನಂದಃ ಯಸ್ಮಾತ್'**):

**ಮಹಾನಂದತೀರ್ಥಸ್ಯ ಯೇ ಭಾಷ್ಯಭಾವಂ ಮನೋವಾಗ್ಭಿರಾವರ್ತಯಂತೇ ಸ್ವಶಕ್ತ್ಯಾ।**
**ಸುರಾದ್ಯಾ ನರಾಂತಾ ಮುಕುಂದಪ್ರಸಾದಾದಿಮಂ ಮೋಕ್ಷಮೇತೇ ಭಜಂತೇ ಸದೇತಿ ॥**
**- ಸುಮಧ್ವವಿಜಯ (೧೧/೭೯)**

**ಸುಂದರಿಮಂದಿರ ಗೋವಿಂದ ವಂದೇ।**
**ಆನಂದತೀರ್ಥಪರಾನಂದವರದ ॥ ೨ ॥**

**ಪ :** ಸುಂದರಿಮಂದಿರ, ಗೋವಿಂದ, ವಂದೇ, ಆನಂದತೀರ್ಥಪರಾನಂದವರದ।

**ಅ :** ಸುಂದರಿಮಂದಿರ, ಗೋವಿಂದ, ಆನಂದತೀರ್ಥಪರಾನಂದವರದ, ವಂದೇ।

**ಪ್ರ.ಪ. : ಸುಂದರಿಮಂದಿರ** - ಸರ್ವಶ್ರೇಷ್ಠ ಸುಂದರಿಯಾದ ಮಹಾಲಕ್ಷ್ಮಿಗೆ ನೆಲೆಯಾದವನೆ; **ಗೋವಿಂದ** - ಗೋವಿಂದನೆ; **ಆನಂದತೀರ್ಥಪರಾನಂದವರದ** - ಆನಂದತೀರ್ಥರಿಗೆ ಪೂರ್ಣಾನಂದವೆಂಬ ಸುಖವನ್ನು ನೀಡುವವನೆ!; **ವಂದೇ** - ವಂದಿಸುವೆನು;

**ಲಕುಮಿನಿಲಯ ವೇದಹೃದಯ ದೇವ ವಂದನೆ।**
**ಮಧ್ವಮುನಿಗೆ ಪರಮಮೋದವರವನೀವನೆ ॥ ೨ ॥**

**ಅನು : ಸರ್ವಶ್ರೇಷ್ಠ ಸುಂದರಿಯಾದ ಮಹಾಲಕ್ಷ್ಮಿಗೆ ನೆಲೆಯಾದವನೆ ! ಗೋವಿಂದನೆ! ಆನಂದತೀರ್ಥರಿಗೆ ಪೂರ್ಣಾನಂದವೆಂಬ ಸುಖವನ್ನು ನೀಡುವವನೆ! ನಿನಗೆ ವಂದನೆ.**

ವಿ : ೧. ಮಹಾಲಕ್ಷ್ಮಿಗೆ ಮಂದಿರವಾದವನು, ಎಂದರೆ ಆಶ್ರಯವಾದವನು ಎಂದರ್ಥ; ಅದರಂತೆ ಮಹಾಲಕ್ಷ್ಮಿಯಲ್ಲಿ ಪೂರ್ಣಸನ್ನಿಧಾನವನ್ನು ಇರಿಸಿದವನು ಎಂದೂ ಅರ್ಥವಾಗುವುದು.

೨. ಸುಂದರಿಮಂದಿರ - **'ಸುಂದರಿ'** ಎಂದರೆ ಈಗಾಗಲೇ ತಿಳಿಸಿರುವಂತೆ ಸರ್ವೋತ್ಕೃಷ್ಟಸುಂದರಳಾದ ಮಹಾಲಕ್ಷ್ಮಿ ಎಂದರ್ಥ (೬/೨); ಮಹಾಲಕ್ಷ್ಮಿಗೆ ನೆಲೆಯಾಗಿರುವ ವಕ್ಷಸ್ಥಳರೂಪವಾದ ಮಂದಿರವನ್ನು ಹೊಂದಿರುವವನು ಶ್ರೀಹರಿ ಎಂದೂ ಭಾವ: **'ಜಗದಂಬಾಮಲಸುಂದರಗೃಹವಕ್ಷೋವರಯೋಗಿನ್'** (೧೦/೧೫) ಎಂಬ ಮಾತು ಇದರ ವಿವರಣೆಯಂತಿದೆ.

೩. '**ಗೋವಿಂದ**' ಎಂಬುದು ವಿಷ್ಣುಸಹಸ್ರನಾಮದ ಪದ: '**ಮಹಾವರಾಹೋ ಗೋವಿಂದಃ**', '**ಗೋವಿಂದೋ ಗೋವಿದಾಂಪತಿಃ**'. '**ಗೋವಿಂದ**' ಶಬ್ದದ ವಿವರಣೆ ಈಗಾಗಲೇ ಬಂದಿದೆ (೫/೪).

**ಚಂದ್ರಸುರೇಂದ್ರಸುವಂದಿತ ವಂದೇ ।**
**ಆನಂದತೀರ್ಥಪರಾನಂದವರದ** ॥ ೩ ॥

**ಪ :** ಚಂದ್ರಸುರೇಂದ್ರಸುವಂದಿತ, ವಂದೇ, ಆನಂದತೀರ್ಥಪರಾನಂದವರದ ।

**ಅ :** ಚಂದ್ರಸುರೇಂದ್ರಸುವಂದಿತ, ಆನಂದತೀರ್ಥಪರಾನಂದವರದ, ವಂದೇ, ।

**ಪ್ರ.ಪ. : ಚಂದ್ರಸುರೇಂದ್ರಸುವಂದಿತ** – ಚಂದ್ರ ಹಾಗೂ ದೇವೇಂದ್ರರಿಂದ ಭಕ್ತಿಯಿಂದ ವಂದಿತನಾದವನೆ!; **ಆನಂದತೀರ್ಥಪರಾನಂದವರದ** – ಆನಂದತೀರ್ಥರಿಗೆ ಪೂರ್ಣಾನಂದವೆಂಬ ಸುಖವನ್ನು ನೀಡುವವನೆ!; **ವಂದೇ** – ವಂದಿಸುವೆನು.

**ಇಂದ್ರಚಂದ್ರರಿಂದ ವಿನುತ ಪರಮ ವಂದನೆ ।**
**ಮಧ್ವಮುನಿಗೆ ಪರಮಮೋದವರವನೀವನೆ** ॥ ೩ ॥

**ಅನು : ಚಂದ್ರ ಹಾಗೂ ದೇವೇಂದ್ರರಿಂದ ಭಕ್ತಿಯಿಂದ ವಂದಿತನಾದವನೆ ! ಆನಂದತೀರ್ಥರಿಗೆ ಪೂರ್ಣಾನಂದವೆಂಬ ಸುಖವನ್ನು ನೀಡುವವನೆ! ನಿನಗೆ ವಂದನೆ.**

ವಿ : ೧. ಇಲ್ಲಿ ಚಂದ್ರನು ಯಾಮಿನೀನಾಥ ಎನಿಸಿದರೆ, ಸುರೇಂದ್ರನು ತ್ರಿಲೋಕನಾಥ ಎನ್ನಿಸಿದವನು; ಚಂದ್ರನು ಚಾಂದ್ರಮಾನ ಎಂಬ ಪದದ ಹಿನ್ನೆಲೆಯಲ್ಲಿ ಕಾಲನಿಯಾಮಕ ಎನ್ನಿಸುವನು. ಅದರಂತೆ ಇಂದ್ರ ಲೋಕನಿಯಾಮಕ ಎನ್ನಿಸುವನು. ಇದರಿಂದ ಮುಖ್ಯವಾಗಿ ಶ್ರೀಹರಿಯೇ ಕಾಲಲೋಕಾದಿಗಳ ನಿಯಾಮಕನಾದ ಸರ್ವನಿಯಾಮಕ ಎಂದೂ ಭಾವ.

೨. ಇದನ್ನು **ಚಂದ್ರ**, **ಸುರ**, **ಇಂದ್ರ**, **ಸುವಂದಿತ** ಎಂಬುದಾಗಿಯೂ ವಿಭಾಗ ಮಾಡಿ ಅರ್ಥ ಮಾಡಿಕೊಳ್ಳಬಹುದು. '**ಚದಿ ಆಹ್ಲಾದೇ**' ಎಂಬ ಧಾತುಕೋಶದಿಂದ '**ಚಂದ್ರ**' ಎಂಬುದಕ್ಕೆ ಆಹ್ಲಾದಕರ; ಚಂದ್ರನಲ್ಲಿದ್ದು ಆನಂದ ನೀಡುವವನು ಸಹ ಅವನೆ ಎಂಬುದು ಇದರ ಮುಖ್ಯಭಾವ: '**ಯಚ್ಚಂದ್ರಮಸಿ... ತತ್ತೇಜೋ ವಿದ್ಧಿಮಾಮಕಂ**' (ಭಗವದ್ಗೀತಾ). '**ಸುರ**' ಎಂದರೆ '**ಸುಷ್ಠು ರಮತೇ ಇತಿ ಸುರಃ**' ಎಂದರ್ಥ. ಅಥವಾ '**ನಾಮೈಕದೇಶೇ ನಾಮಗ್ರಹಣನ್ಯಾಯ**'ದಿಂದ '**ಚಂದ್ರ**' ಎಂದರೆ '**ಚಂದ್ರಾಂಶು**' ಎಂದೂ ('**ಚಂದ್ರಾಂಶುರ್ಭಾಸ್ಕರದ್ಯುತಿಃ**' – ವಿಷ್ಣುಸಹಸ್ರನಾಮ). '**ಸುರ**' ಎಂಬುದಕ್ಕೆ '**ಸುರಾನಂದಃ**', '**ಸುರಾಧ್ಯಕ್ಷಃ**', '**ಸುರೇಂದ್ರಃ**' ಎಂದು ವಿಷ್ಣುಸಹಸ್ರನಾಮದ ಬೆಳಕಿನಲ್ಲಿ ಅರ್ಥವಿಶೇಷಗಳನ್ನು ತಿಳಿಯಬಹುದು.

೩. '**ಇಂದ್ರ**' – '**ಇದಿ ಪರಮೈಶ್ವರ್ಯೇ**' ಎಂಬ ಧಾತುಕೋಶದಿಂದ ಇಂದಿರಾಪತಿತ್ವರೂಪ ಪರಮೈಶ್ವರ್ಯಯುಕ್ತನಾದ್ದರಿಂದ '**ಇಂದ್ರ**' ಎಂದರೆ ಶ್ರೀಹರಿಯೇ ಎಂದು ಮುಖ್ಯಾರ್ಥವಾಗುವುದು. ಯಜ್ಞನಾಮಕರೂಪದಿಂದ ಶ್ರೀಹರಿಯೇ ಸ್ವಾಯಂಭುವ-ಮನ್ವಂತರದಲ್ಲಿ ಇಂದ್ರಪದವಿಯಲ್ಲಿದ್ದುದು ಸುಪ್ರಸಿದ್ಧವೇ ಆಗಿದೆ.

೪. '**ಸುವಂದಿತ**' ಎಂಬುದು '**ವಂದ್ಯಂ**' ಎಂಬುದು ಹೇಗೋ, ಹಾಗೆ. ಸರ್ವರಿಂದ ಸುವಂದಿತ ಎಂದು ಭಾವ. '**ಸು**' ಎಂಬ ಉಪಸರ್ಗದಿಂದ **ಸದಾ ವಂದ್ಯ**, ಅಷ್ಟಾಂಗಗಳಿಂದ ವಂದ್ಯ ('**ಸರ್ವಾಂಗಕೈಃ ಪ್ರಣತಿಮಸ್ಯ ಚಕಾರ ಭಕ್ತ್ಯಾ**' – ಮ.ಭಾ.ತಾ.ನಿ. ೭/೪೯ ಎಂಬಲ್ಲಿ ಹೇಗೋ, ಹಾಗೆ), ಸದಾ ಸರ್ವೋತ್ತಮತ್ವೇನ ವಂದ್ಯ , ನಿರವಧಿಕವಾಗಿ ವಂದ್ಯ ಮೊದಲಾದ ಅನೇಕಬಗೆಯ ವಿಶೇಷಾಂಶಗಳು ಸೂಚಿತವಾಗುವವು.

**ಚಂದ್ರಕಮಂದಿರನಂದಕ ವಂದೇ ।**
**ಆನಂದತೀರ್ಥಪರಾನಂದವರದ ॥ ೪ ॥**

**ಪ** : ಚಂದ್ರಕಮಂದಿರನಂದಕ; ವಂದೇ; ಆನಂದತೀರ್ಥಪರಾನಂದವರದ ।

**ಅ** : ಚಂದ್ರಕಮಂದಿರನಂದಕ, ಆನಂದತೀರ್ಥಪರಾನಂದವರದ, ವಂದೇ ।

**ಪ್ರ.ಪ. : ಚಂದ್ರಕಮಂದಿರನಂದಕ** – ಚಂದ್ರ ಹಾಗೂ ವರುಣರಿಗೆ ಆನಂದ ನೀಡುವವನೆ!; **ಆನಂದತೀರ್ಥಪರಾನಂದವರದ** – ಆನಂದತೀರ್ಥರಿಗೆ ಪೂರ್ಣಾನಂದವೆಂಬ ಸುಖವನ್ನು ನೀಡುವವನೆ!; **ವಂದೇ** – ವಂದಿಸುವೆನು.

**ಸೋಮನನ್ನು ವರುಣನನ್ನು ನಲಿಪ ದೇವನೆ**
**ಮಧ್ವಮುನಿಗೆ ಪರಮಮೋದವರವನೀವನೆ ॥ ೪ ॥**

**ಅನು : ಚಂದ್ರ ಹಾಗೂ [೧]ವರುಣರಿಗೆ ಆನಂದ ನೀಡುವವನೆ! ಆನಂದತೀರ್ಥರಿಗೆ ಪೂರ್ಣಾನಂದವೆಂಬ ಸುಖವನ್ನು ನೀಡುವವನೆ! ನಿನಗೆ ವಂದನೆ.**

ವಿ: ೧. ಇದನ್ನು **ಚಂದ್ರ**, **ಕಮಂದಿರ**, **ನಂದ**, **ಕ** ಎಂದೂ ವಿಭಾಗ ಮಾಡಿ, ಅನೇಕ ವಿಶೇಷಾರ್ಥಗಳನ್ನು ತಿಳಿಯಬಹುದು. ಚಂದ್ರ ಎಂದರೆ ಚಂದ್ರನೇ. '**ಕಮಂದಿರ**' ಎಂದರೆ ನಾರಾಯಣ ('**ಆಪೋ ನಾರಾ ಇತಿ ಪ್ರೋಕ್ತಾಃ ...**'), '**ನಮೋಽಸ್ತು ನೀರಾಯಣ-ಮಂದಿರಾಯ**' – ಶ್ರೀವಾದಿರಾಜರು); '**ನಂದ**' ಎಂಬುದು ವಿಷ್ಣುಸಹಸ್ರನಾಮದ ಪದ ('**ಆನಂದೋ ನಂದನೋ ನಂದಃ**'). '**ಕ** ಎಂಬುದು ವಿಷ್ಣುಸಹಸ್ರನಾಮದ ಪದ – '**ಏಕೋ ನೈಕಃ ಸವಃ ಕಃ ಕಿಂ**'. '**ಕ**' ಎಂದರೆ ಜಲ, ಆನಂದ.

---

೧. ಮಂದಿರೋ ಮಕರಾವಾಸೇ । – ಹೈಮಕೋಶ

**ಮಂದಾರಸ್ಯಂದಿತಮಂದಿರ ವಂದೇ ।**
**ಆನಂದತೀರ್ಥಪರಾನಂದವರದ ॥ ೫ ॥**

**ಪ :** ಮಂದಾರಸ್ಯಂದಿತಮಂದಿರ, ವಂದೇ, ಆನಂದತೀರ್ಥಪರಾನಂದವರದ ।

**ಅ :** ಮಂದಾರಸ್ಯಂದಿತಮಂದಿರ, ಆನಂದತೀರ್ಥಪರಾನಂದವರದ, ವಂದೇ ।

**ಪ್ರ.ಪ. : ಮಂದಾರಸ್ಯಂದಿತಮಂದಿರ** – ಮಂದಾರಪುಷ್ಪಗಳಿಂದ ಸೇವಿತವಾದ ಮಂದಿರದಲ್ಲಿ ನೆಲೆಸಿರುವವನೆ!; **ಆನಂದತೀರ್ಥಪರಾನಂದವರದ** – ಆನಂದತೀರ್ಥರಿಗೆ ಪೂರ್ಣಾನಂದವೆಂಬ ಸುಖವನ್ನು ನೀಡುವವನೆ!; **ವಂದೇ** – ವಂದಿಸುವೆನು.

**ಪಾರಿಜಾತಪುಷ್ಪಸುರಿವ ನಿಲಯ ವಂದನೆ ।**
**ಮಧ್ವಮುನಿಗೆ ಪರಮಮೋದವರವನೀವನೆ ॥ ೫ ॥**

**ಅನು : ಮಂದಾರಪುಷ್ಪಗಳಿಂದ ಸೇವಿತವಾದ ಮಂದಿರದಲ್ಲಿ ನೆಲೆಸಿರುವವನೆ! ಆನಂದತೀರ್ಥರಿಗೆ ಪೂರ್ಣಾನಂದವೆಂಬ ಸುಖವನ್ನು ನೀಡುವವನೆ! ನಿನಗೆ ವಂದನೆ.**

ವಿ: ೧. ಮಂದಾರಸ್ಯಂದಿತಮಂದಿರ ವಂದೇ – ಶ್ರೀಕೃಷ್ಣನು ಸತ್ಯಭಾಮಾದೇವಿಗೆ ವಚನ ನೀಡಿದ್ದಂತೆ, ಇಂದ್ರಾದಿದೇವತೆಗಳನ್ನು ಪರಾಭವಗೊಳಿಸಿ, ಪಾರಿಜಾತವೃಕ್ಷವನ್ನು ತನ್ನ ಮನೆಯ ಅಂಗಳದಲ್ಲಿ ಪ್ರತಿಷ್ಠಾಪಿಸಿದ. ಆದರಿಂದಾಗಿ ಅಂತಹ ವಿಶಿಷ್ಟವಾದ ಶ್ರೀಕೃಷ್ಣನ ಹಿರಿಮೆಯನ್ನು ಇದು ಸೂಚಿಸುವುದು.

೨. ಇಂದ್ರಾದಿಸಮಸ್ತದೇವತೆಗಳಿಂದಲೂ ವಂದಿತನಾದ ಶ್ರೀಕೃಷ್ಣ ಸರ್ವದೇವೋತ್ತಮ ಎಂಬುದು ಇದರ ಒಟ್ಟು ಭಾವ.

**ವೃಂದಾರಕವೃಂದಸುವಂದಿತ ವಂದೇ ।**
**ಆನಂದತೀರ್ಥಪರಾನಂದವರದ ॥ ೬ ॥**

**ಪ :** ವೃಂದಾರಕವೃಂದಸುವಂದಿತ, ವಂದೇ, ಆನಂದತೀರ್ಥಪರಾನಂದವರದ ।

**ಅ :** ವೃಂದಾರಕವೃಂದಸುವಂದಿತ, ಆನಂದತೀರ್ಥಪರಾನಂದವರದ, ವಂದೇ ।

**ಪ್ರ.ಪ. : ವೃಂದಾರಕವೃಂದಸುವಂದಿತ** – ದೇವವೃಂದದಿಂದ ಭಕ್ತಿಯಿಂದ ಸ್ತುತ್ಯನಾದವನೆ!; **ಆನಂದತೀರ್ಥಪರಾನಂದವರದ** – ಆನಂದತೀರ್ಥರಿಗೆ ಪೂರ್ಣಾನಂದವೆಂಬ ಸುಖವನ್ನು ನೀಡುವವನೆ!; **ವಂದೇ** – ವಂದಿಸುವೆನು.

**ದೇವವೃಂದನಿರುತವಂದ್ಯ ನಿನಗೆ ವಂದನೆ**
**ಮಧ್ವಮುನಿಗೆ ಪರಮಮೋದವರವನೀವನೆ ॥ ೬ ॥**

**ಅನು : ದೇವವೃಂದದಿಂದ ಭಕ್ತಿಯಿಂದ ಸ್ತುತ್ಯನಾದವನೆ! ಆನಂದತೀರ್ಥರಿಗೆ ಪೂರ್ಣಾನಂದವೆಂಬ ಸುಖವನ್ನು ನೀಡುವವನೆ! ನಿನಗೆ ವಂದನೆ.**

ವಿ: ೧. ಶ್ರೀಕೃಷ್ಣನು ಕೆಲವು ದೇವತೆಗಳಿಂದ ಮಾತ್ರವಲ್ಲದೆ, ಬ್ರಹ್ಮರುದ್ರಾದಿಸಮಸ್ತ-ದೇವತೆಗಳಿಂದ ವಂದಿತನಾದವನು. ಆದ್ದರಿಂದಲೇ ಅವನು ಸರ್ವೋತ್ತಮ ಎಂಬುದು ಇಲ್ಲಿಯ ಮುಖ್ಯಭಾವ.

೨. ಹಾಗೆ ಸಮಸ್ತದೇವತೆಗಳು ಮಾಡುವ ವಂದನೆಗಳು ಸಹ ಯಾಂತ್ರಿಕವಾದ ವಂದನೆಗಳಾಗಿರದೆ, ಕೇವಲ ಭೀತಿ ಮೊದಲಾದ ಇತರ ಕಾರಣದ ವಂದನೆಯೂ ಆಗಿರದೇ, ಶ್ರೀಕೃಷ್ಣನು ಸಾಕ್ಷಾತ್ ಸರ್ವೋತ್ಕೃಷ್ಟನಾದ ಪರಮದೇವತೆ ಎಂಬ ಮಾಹಾತ್ಮ್ಯಜ್ಞಾನ-ಪೂರ್ವಕವಾದ, ನಿರ್ಮಲಭಕ್ತಿಪೂರ್ವಕವಾದ ವಂದನೆ ಎಂಬುದು ಇಲ್ಲಿ ಸೂಚಿತವಾಗಿರುವ ವಿಶೇಷಾಂಶ.

**ಇಂದಿರಾನಂದಕಸುಂದರ ವಂದೇ ।**
**ಆನಂದತೀರ್ಥಪರಾನಂದವರದ ॥ ೭ ॥**

**ಪ :** ಇಂದಿರಾನಂದಕಸುಂದರ, ವಂದೇ, ಆನಂದತೀರ್ಥಪರಾನಂದವರದ ।

**ಅ :** ಇಂದಿರಾನಂದಕಸುಂದರ, ಆನಂದತೀರ್ಥಪರಾನಂದವರದ, ವಂದೇ ।

ಪ್ರ.ಪ. : **ಇಂದಿರಾನಂದಕಸುಂದರ** – ಮಹಾಲಕ್ಷ್ಮಿಗೆ ಆನಂದ ನೀಡುವ ಮನೋಹರನೆ!; **ಆನಂದತೀರ್ಥಪರಾನಂದವರದ** – ಆನಂದತೀರ್ಥರಿಗೆ ಪೂರ್ಣಾನಂದವೆಂಬ ಸುಖವನ್ನು ನೀಡುವವನೆ!; **ವಂದೇ** – ವಂದಿಸುವೆನು.

**ರಮೆಗೆ ಪರಮ ನಲಿವನೀವ ಚೆಲುವ ವಂದನೆ ।**
**ಮಧ್ವಮುನಿಗೆ ಪರಮಮೋದವರವನೀವನೆ ॥ ೭ ॥**

**ಅನು : ಮಹಾಲಕ್ಷ್ಮಿಗೆ ಆನಂದ ನೀಡುವ ಮನೋಹರನೆ! ಆನಂದತೀರ್ಥರಿಗೆ ಪೂರ್ಣಾನಂದವೆಂಬ ಸುಖವನ್ನು ನೀಡುವವನೆ! ನಿನಗೆ ವಂದನೆ.**

ವಿ : ೧. ಇದನ್ನು '**ಇಂದಿರಾನಂದ**', '**ಕ**', '**ಸುಂದರ**' ಎಂದೂ ವಿಭಾಗ ಮಾಡಿ, ವಿಶೇಷಾರ್ಥಗಳನ್ನು ತಿಳಿಯಬಹುದು. '**ಕ**' ಹಾಗೂ '**ಸುಂದರ**' ('ಏಕೋ ನೈಕಃ ಸವಃ ಕಃ', '**ಉದ್ಭವಃ ಸುಂದರಃ ಸುಂದಃ**') ಎಂಬವು ವಿಷ್ಣುಸಹಸ್ರನಾಮದಲ್ಲಿ ಬಂದಿವೆ.

೨. ಮಹಾಲಕ್ಷ್ಮಿಯು ಸುಂದರೀ ಎಂಬುದಾಗಿ ಸರ್ವಶ್ರೇಷ್ಠ ಸ್ತ್ರೀ ಎನ್ನಿಸಿದ್ದರೆ, ಶ್ರೀಹರಿಯು ಸುಂದರನಾಗಿ ಸರ್ವಶ್ರೇಷ್ಠಪುರುಷನಾಗಿ, ಮುಖ್ಯತಃ ಪುರುಷೋತ್ತಮನಾಗಿ, ಸಕಲಶಾಸ್ತ್ರಗಳಿಂದ ಪ್ರತಿಪಾದಿತನಾದವನು ಎಂದು ಭಾವ.

**ಮಂದಿರಸ್ಯಂದಿತಸ್ಯಂದಕ ವಂದೇ ।**
**ಆನಂದತೀರ್ಥಪರಾನಂದವರದ ॥ ೮ ॥**

**ಪ :** ಮಂದಿರಸ್ಯಂದಿತಸ್ಯಂದಕ, ವಂದೇ, ಆನಂದತೀರ್ಥಪರಾನಂದವರದ ।

**ಅ :** ಮಂದಿರಸ್ಯಂದಿತಸ್ಯಂದಕ, ಆನಂದತೀರ್ಥಪರಾನಂದವರದ, ವಂದೇ ।

**ಪ್ರ.ಪ. : ಮಂದಿರಸ್ಯಂದಿತಸ್ಯಂದಕ** – ಬ್ರಹ್ಮಾದಿಗಳಿಂದ ಸೇವಿತವಾದ ಮಂದಿರವುಳ್ಳವನೆ!; **ಆನಂದತೀರ್ಥಪರಾನಂದವರದ** – ಆನಂದತೀರ್ಥರಿಗೆ ಪೂರ್ಣಾನಂದವೆಂಬ ಸುಖವನ್ನು ನೀಡುವವನೆ!; **ವಂದೇ** – ವಂದಿಸುವೆನು.

**ಭಕುತಗೃಹಕೆ ಭರದಿ ನಡೆವ ದೇವ ವಂದನೆ ।**
**ಮಧ್ವಮುನಿಗೆ ಪರಮಮೋದವರವನೀವನೆ ॥ ೮ ॥**

**ಅನು : ಬ್ರಹ್ಮಾದಿಗಳಿಂದ ಸೇವಿತವಾದ ಮಂದಿರವುಳ್ಳವನೆ! ಆನಂದತೀರ್ಥರಿಗೆ ಪೂರ್ಣಾನಂದವೆಂಬ ಸುಖವನ್ನು ನೀಡುವವನೆ! ನಿನಗೆ ವಂದನೆ.**

ವಿ: ೧. ಶ್ರೀಹರಿಯು ಹೀಗೆ ಸಕಲದೇವವಂದ್ಯನಾದ ಪರಮದೇವತೆಯಾಗಿದ್ದರೂ ಸಹ, ತನ್ನ ಭಕ್ತರ ಮನೆಗಳಿಗೆ ಪ್ರೀತಿಯಿಂದ ಧಾವಿಸಿ ಬರುವ ಪರಮಕರುಣಾಳು ಎಂದು ಭಾವ.

೨. ಮಹಾಭಾರತದ ಉದ್ಯೋಗಪರ್ವದಲ್ಲಿ ಶ್ರೀಕೃಷ್ಣನು ಹಾಗೆ ಭೀಷ್ಮಾದಿಗಳ ಗೃಹವನ್ನು ತೊರೆದು, ವಿದುರನ ಮನೆಗೆ ಧಾವಿಸಿದ ಪ್ರಸಂಗ ಇದಕ್ಕೆ ಉತ್ತಮ ನಿದರ್ಶನ; ಅದರಂತೆ ಶ್ರೀರಾಮರೂಪದಿಂದ ಶರಭಂಗ, ಶಬರಿ ಮೊದಲಾದವರನ್ನು ಉದ್ಧರಿಸಿದ ಅನೇಕಪ್ರಸಂಗಗಳು ಸಹ.

**ಆನಂದಚಂದ್ರಿಕಾಸ್ಪಂದಕ ವಂದೇ ।**
**ಆನಂದತೀರ್ಥಪರಾನಂದವರದ ॥ ೯ ॥**

**॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ದ್ವಾದಶಸ್ತೋತ್ರೇ ದ್ವಾದಶೋऽಧ್ಯಾಯಃ ॥**

**ಪ :** ಆನಂದಚಂದ್ರಿಕಾಸ್ಪಂದಕ, ವಂದೇ, ಆನಂದತೀರ್ಥಪರಾನಂದವರದ ।

**ಅ :** ಆನಂದಚಂದ್ರಿಕಾಸ್ಪಂದಕ, ಆನಂದತೀರ್ಥಪರಾನಂದವರದ, ವಂದೇ ।

**ಪ್ರ.ಪ. : ಆನಂದಚಂದ್ರಿಕಾಸ್ಪಂದಕ** – ಆನಂದದ ಬೆಳದಿಂಗಳನ್ನು ಉಕ್ಕಿಸುವವನೆ!; **ಆನಂದತೀರ್ಥಪರಾನಂದವರದ** – ಆನಂದತೀರ್ಥರಿಗೆ ಪೂರ್ಣಾನಂದವೆಂಬ ಸುಖವನ್ನು ನೀಡುವವನೆ!; **ವಂದೇ** – ವಂದಿಸುವೆನು.

**ಸುಖದ ಬೆಳಕ ಸುರಿವ ಪೂರ್ಣಚಂದ್ರ ವಂದನೆ।**
**ಮಧ್ವಮುನಿಗೆ ಪರಮಮೋದವರವನೀವನೆ ॥ ೯ ॥**

**॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಕೃತ ದ್ವಾದಶಸ್ತೋತ್ರದ ವ್ಯಾಸತಟಾಕಪ್ರಭಂಜನಾಚಾರ್ಯಕೃತ ಕನ್ನಡಪದ್ಯಾನುವಾದದಲ್ಲಿ ಹನ್ನೆರಡನೆಯ ಅಧ್ಯಾಯ ಮುಕ್ತಾಯವಾಯಿತು ॥**

**ಅನು : ಆನಂದದ ಬೆಳದಿಂಗಳನ್ನು ಉಕ್ಕಿಸುವವನೆ! ಆನಂದತೀರ್ಥರಿಗೆ ಪೂರ್ಣಾನಂದವೆಂಬ ಸುಖವನ್ನು ನೀಡುವವನೆ! ನಿನಗೆ ವಂದನೆ.**

ವಿ: ೧. ಇಲ್ಲಿ ಆನಂದವನ್ನು ಬೆಳದಿಂಗಳಿಗೆ ಹೋಲಿಸುವ ಮೂಲಕ, ಅದು ಅತ್ಯಂತ ಆಪ್ಯಾಯಮಾನ ಎಂಬ ವಿಶೇಷಾಂಶ ಸೂಚಿತ.

೨. ಇದು ಒಂದು ರೀತಿಯಲ್ಲಿ **ಸುಜನೋದಧಿಸಂವೃದ್ಧಿಪೂರ್ಣಚಂದ್ರಃ** ಎಂಬ ಮೊದಲನೆಯ ಸ್ತೋತ್ರದ ವಿವರಣೆಯಂತಿದೆ.

೩. ಆನಂದವು ಸಕಲರಿಂದಲೂ ಅತ್ಯಂತ ಅಪೇಕ್ಷಿತವಾದ, ಸರ್ವಶ್ರೇಷ್ಠವಾದ ಸಿದ್ಧಿ. ಅದನ್ನು ನೀಡುವ ಸಾಮರ್ಥ್ಯ ಸದಾ ಆನಂದಪೂರ್ಣನಾದ ಶ್ರೀಹರಿಯದು ಮಾತ್ರ ಎಂಬ ವಿಶೇಷಾಂಶವು ಇದರಿಂದ ಸೂಚಿತ.

೪. ಆನಂದತೀರ್ಥಪರಾನಂದವರದ - ಒಟ್ಟಾಗಿ ಆನಂದತೀರ್ಥರಿಗೆ ಪರಾನಂದ ಎಂಬ ವರವನ್ನು ನೀಡಿದವನು ಎಂಬ ಮಾತಿನಲ್ಲಿ ಪರಾನಂದ ಎಂಬುದಕ್ಕೆ ಪೂರ್ಣಾನಂದ, ಶ್ರೇಷ್ಠವಾದ ಆನಂದ, ಪರಮೋತ್ಸಾಹಭರಿತವಾದ ಆನಂದ, ಸರ್ವಾಂಗಸಾಯುಜ್ಯರೂಪವಾದ ಸಾರ್ಷ್ಟಿ ಎಂಬ ಮುಕ್ತಿಪ್ರಾಪ್ತಿರೂಪವಾದ ಆನಂದ ಹೀಗೆ ಅನೇಕಾರ್ಥಗಳನ್ನು ತಿಳಿಯಬಹುದು. ಇದು ಜೀವಿಗಳು ಪಡೆಯುವ ಸಿದ್ಧಿಯ ಪರಾಕಾಷ್ಠೆಯಾಗಿದ್ದು, ಇಂತಹ ವಿಶೇಷತೆಯನ್ನು ಪಡೆಯುವ ಕಾರಣದಿಂದ ಬ್ರಹ್ಮ, ವಾಯುಗಳು ಜೀವೋತ್ತಮರು ಎಂಬುದಾಗಿ ಪ್ರತಿಪಾದಿತರಾಗಿರುವರು. ಶ್ರೀವಾಯುದೇವರ ಮಧ್ವರೂಪದಿಂದ ರಚಿತವಾದ ಕೃತಿ ಎಂಬ ಕಾರಣದಿಂದ ಇದಕ್ಕಿರುವ ಮಹತ್ತ್ವ ಅನ್ಯಾದೃಶವಾದುದು ಎಂದು ಒಟ್ಟು ಭಾವ.

**॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಂ ದ್ವಾದಶಸ್ತೋತ್ರಮ್ ॥**

**॥ ಇತಿ ದ್ವಾದಶಸ್ತೋತ್ರಮ್ ॥**

*****

**॥ ಶ್ರೀಕೃಷ್ಣಾರ್ಪಣಮಸ್ತು ॥**

*****

**ಸಮರ್ಪಿತಂ ಮಯಾ ಭವೇತ್ ಸುಮಧ್ವನುತ್ತವಾಣಿನಾ।**
**ರಮಾರಮೇಶಪಾದಯೋಃ ಪ್ರಭಂಜನಾಭಿಧಾಯುಜಾ**

*****

# ಶ್ರೀಮದಾನಂದತೀರ್ಥಭಗವತ್ಪಾದಕೃತ
# ಶ್ರೀಕೃಷ್ಣಪದ್ಯಮ್(ಕಂದುಕಸ್ತುತಿಃ)[೧]

ಅಂಬರಗಂಗಾಚುಂಬಿತಪಾದಃ ಪದತಲವಿದಲಿತಗುರುತರಶಕಟಃ
ಕಾಲಿಯನಾಗಕ್ಷ್ವೇಲನಿಹಂತಾ ಸರಸಿಜನವದಲವಿಕಸಿತನಯನಃ ।
ಕಾಲಘನಾಲೀಕರ್ಬುರಕಾಯಃ ಶರಶತಶಕಲಿತರಿಪುಶತನಿವಹಃ
ಸಂತತಮಸ್ಮಾನ್ ಪಾತು ಮುರಾರಿಃ ಸತತಗಸಮಜವಖಗಪತಿನಿರತಃ ॥

*****

## ಶ್ರೀಕೃಷ್ಣಪದ್ಯಮ್ - ಕನ್ನಡ ಅನುವಾದ

ಗಗನಗಂಗೆ ಮುತ್ತನೀವ ದಿವ್ಯಚರಣನು
ಘೋರಶಕಟನನ್ನು ಹಣಿದ ಪಾದಪದುಮನು
ಕಾಲಿಯನ್ನ ವಿಷವ ತರಿದ ಪುಣ್ಯಪಾದನು
ಅರಳಿದಂಥ ಕಮಲದಂಥ ದಿವ್ಯನೇತ್ರನು ।
ನೀಲಮೇಘ ಹೋಲುವಂಥ ರಮ್ಯವರ್ಣನು
ದೈತ್ಯವೃಂದವನ್ನು ತರಿದ ಬಾಣವೃಂದನು
ಮುರನ ಕೊಂದ ಕೃಷ್ಣದೇವ ನಮ್ಮ ಪೊರೆವನು
ಸತತ ಚರಿಪ ಗರುಡನನ್ನು ಏರಿ ಮೆರೆವನು ॥

॥ ಇಲ್ಲಿಗೆ ಶ್ರೀಮದಾನಂದತೀರ್ಥಕೃತ ಕಂದುಕಸ್ತುತಿಯ ವ್ಯಾಸತಟಾಕಪ್ರಭಂಜನಾಚಾರ್ಯಕೃತ ಕನ್ನಡಾನುವಾದ ಮುಕ್ತಾಯವಾಯಿತು ॥

*****

॥ ಶ್ರೀಕೃಷ್ಣಾರ್ಪಣಮಸ್ತು ॥

*****

ಸಮರ್ಪಿತಂ ಮಯಾ ಭವೇತ್ ಸುಮಧ್ವನುತ್ತವಾಣಿನಾ ।
ರಮಾರಮೇಶಪಾದಯೋಃ ಪ್ರಭಂಜನಾಭಿಧಾಯುಜಾ

*****

---

೧. 'ಕಂದುಕಸ್ತುತಿ'ಯ ಬಗ್ಗೆ ಹೆಚ್ಚಿನ ವಿವರಗಳಿಗೆ ನಮ್ಮ ಪ್ರಕಾಶನದ 'ಸರ್ವಮೂಲಸೌರಭ' ಕೃತಿಯನ್ನು ನೋಡಬಹುದು.

ಪರಿಶಿಷ್ಟ- ೨

# ಶ್ರೀಅಕ್ಷೋಭ್ಯತೀರ್ಥಕೃತ
# ವೇದಸಾರಮ್(ಹಿತೋಪದೇಶಃ)

ಸ್ಮರ ಕೃಷ್ಣಂ ಭಜ ಹರಿಂ ನಮ ವಿಷ್ಣುಂ ಶ್ರಯಾಚ್ಯುತಮ್ ।
ತ್ಯಜ ಕಾಮಂ ಜಹಿ ಕ್ರೋಧಂ ಜಹಿ ಮೋಹಂ ಭವಾಲಯಮ್ ॥ ೧ ॥

ಶೃಣು ಶೌರಿಕಥಾಃ ಪುಣ್ಯಾಃ ಪಶ್ಯ ಶ್ರೀಪತಿವಿಗ್ರಹಮ್ ।
ಜಿಘ್ರ ಶ್ರೀಪಾದತುಲಸೀಃ ಸ್ಪೃಶ ವೈಕುಂಠವಲ್ಲಭಮ್ ॥ ೨ ॥

ಭುಂಕ್ಷ್ವ ಕೇಶವನೈವೇದ್ಯಂ ತಿಷ್ಠ ಮಾಧವಮಂದಿರೇ ।
ಜಪ ನಾರಾಯಣಮನುಂ ಪಠ ತನ್ನಾಮ ಮಂಗಲಮ್ ॥ ೩ ॥

ಪಾಹಿ ಪ್ರಪನ್ನಜನತಾಂ ಬ್ರೂಹಿ ತಥ್ಯಂ ಹಿತಂ ನೃಣಾಮ್ ।
ದೇಹಿ ಕಾಂಕ್ಷಿತಮರ್ಥಿಭ್ಯೋ ಯಾಹಿ ಸಜ್ಜನಸಂಗತಿಮ್ ॥ ೪ ॥

ಕುರು ಭೂತದಯಾಂ ನಿತ್ಯಂ ಚರ ಧರ್ಮಮಹರ್ನಿಶಮ್ ।
ಜಾನೀಹಿ ನಿತ್ಯಮಾತ್ಮಾನಮವೇಹ್ಯನ್ಯದ್ಧಿ ನಶ್ವರಮ್ ॥ ೫ ॥

ಪಂಚಶ್ಲೋಕೀಮಿಮಾಂ ಶಶ್ವತ್ ಪಠ ಧಾರಯ ಚಿಂತಯ ।
ಏತಾವಾನ್ ಸರ್ವವೇದಾರ್ಥಃ ಸಮಾಸೇನ ನಿರೂಪಿತಃ ॥ ೬ ॥

ನಾಸ್ತಿ ನಾರಾಯಣಸಮಂ ನ ಭೂತಂ ನ ಭವಿಷ್ಯತಿ ।
ಏತೇನ ಸತ್ಯವಾಕ್ಯೇನ ಸರ್ವಾರ್ಥಾನ್ ಸಾಧಯಾಮ್ಯಹಮ್ ॥ ೭ ॥

ಅಕ್ಷೋಭ್ಯತೀರ್ಥಮುನಿನಾ ನಿಜಶಿಷ್ಯಹಿತೈಷಿಣಾ ।
ವೇದಸಾರಮಿದಂ ಪ್ರೋಕ್ತಂ ಪ್ರೀತ್ಯೈ ಮಾಧವಮಧ್ವಯೋಃ ॥ ೮ ॥

॥ ಇತಿ ಶ್ರೀಮದಕ್ಷೋಭ್ಯತೀರ್ಥಕೃತಂ ವೇದಸಾರಮ್ (ಹಿತೋಪದೇಶಃ) ॥

* * * *

# ವೇದಸಾರಮ್ (ಹಿತೋಪದೇಶಃ)

## (ಕನ್ನಡ ಪದ್ಯಾನುವಾದ)

ಸ್ಮರಿಸು ಕೃಷ್ಣನ ಭಜಿಸು ಹರಿಯನು ನಮಿಸು ದೇವನ ವಿಷ್ಣುವ ।
ಶ್ರಯಿಸು ಅವನನು ತ್ಯಜಿಸು ಕಾಮವ ಕ್ರೋಧಮೋಹದ ಜಾಲವ ॥ ೧ ॥

ಕೇಳು ಸಂತತ ಅವನ ಚರಿತೆಯ ನೋಡು ಪಾವನವಿಗ್ರಹ
ಅವನ ಪಾದದ ತುಳಸಿ ಸೇವಿಸು ಅವನ ಮೂರುತಿ ಸ್ಪರ್ಶಿಸು ॥ ೨ ॥

ಉಣ್ಣು ಅವನಿಗೆ ಅರ್ಪಿತಾನ್ನವ ನೆಲೆಸು ದೇವನ ಸದನದಿ
ಅವನ ಮಂತ್ರವ ಜಪಿಸು ಸಂತತ ಪಠಿಸು ಮಂಗಲನಾಮವ ॥ ೩ ॥

ಅವನ ನಂಬಿದ ಜನರ ಪಾಲಿಸು ಹಿತವ ಸತ್ಯವ ಬೋಧಿಸು
ನೀಡು ಬೇಡುವ ಭಾಗವತರಿಗೆ ಮಾಡು ಸಜ್ಜನಸಂಗವ ॥ ೪ ॥

ತೋರು ದಯೆಯನು ಜೀವಜಾತಕೆ ಚರಿಸು ಧರ್ಮವ ಸಂತತ
ಆತ್ಮ ಶಾಶ್ವತವೆಂದು ಭಾವಿಸು ಉಳಿದುದೆಲ್ಲವು ನಶ್ವರ ॥ ೫ ॥

ಪಂಚಪದ್ಯವ ನಿರುತ ಚಿಂತಿಸು ಪಠಿಸು ಅರ್ಥವ ತಿಳಿಯುತ
ಸಕಲವೇದದ ಸಾರಸಂಗ್ರಹವೆಲ್ಲ ತುಂಬಿದೆ ಇದರೊಳು ॥ ೬ ॥

ಶ್ರೀಹರಿಗೆ ಸಮರಿಲ್ಲ ಜಗದೊಳು ಹಿಂದೆ ಮುಂದೆಯು ಎಂದಿಗೂ
ಸತ್ಯವಚನವಿದೆಲ್ಲ ಕಾಲಕು ಸಕಲ ಕಾಮಿತವೀವುದು ॥ ೭ ॥

ಕ್ಷೋಭೆ ಎಂದಿಗು ಇರದ ಮುನಿಗಳು ಶಿಷ್ಯಹಿತವನು ಆಶಿಸಿ ।
ವೇದಸಾರವನಿಂತು ಪೇಳ್ದರು ಮಧ್ವಮಾಧವರೊಲುಮೆಗೆ ॥ ೮ ॥

॥ ಇಲ್ಲಿಗೆ ಶ್ರೀಮದಕ್ಷೋಭ್ಯತೀರ್ಥಮುನಿಕೃತ ವೇದಸಾರಕೃತಿಯ
ವ್ಯಾಸತಟಾಕಪ್ರಭಂಜನಾಚಾರ್ಯಕೃತ ಕನ್ನಡಾನುವಾದ ಮುಕ್ತಾಯವಾಯಿತು ॥

* * * * *

॥ ಶ್ರೀಕೃಷ್ಣಾರ್ಪಣಮಸ್ತು ॥

*****

ಸಮರ್ಪಿತಂ ಮಯಾ ಭವೇತ್ ಸುಮಧ್ವನುತ್ತವಾಣಿನಾ ।
ರಮಾರಮೇಶಪಾದಯೋಃ ಪ್ರಭಂಜನಾಭಿಧಾಯುಜಾ

*****

# ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯರ
# (ಹರಿದಾಸಸಾಹಿತ್ಯವನ್ನು ಕುರಿತ) ಕೃತಿಗಳು

## ಪ್ರಕಾಶಿತ ಕೃತಿಗಳು

೦೧. ಶ್ರೀಕನಕದಾಸರ ಹರಿಭಕ್ತಿಸಾರ (ಪ್ರತಿಪದಾರ್ಥ ಮತ್ತು ವಿವರಣೆ ಸಮೇತ)
೦೨. ಶ್ರೀಕನಕದಾಸರ ಸಮಗ್ರ ಕೀರ್ತನೆಗಳು ಭಾಗ – ೧
೦೩. ಸಂತ-ಕವಿ-ಭಕ್ತ ಶ್ರೀಕನಕದಾಸರು
೦೪. ಶ್ರೀಕನಕದಾಸರ ನುಡಿಮುತ್ತುಗಳು
೦೫. ಗುರು–ವರದ–ತಂದೆ ಗೋಪಾಲದಾಸರ ಕೃತಿಗಳು
೦೬. ಶ್ರೀವಿಜಯದಾಸ ದರ್ಶನ
೦೭. ಹರಿಕಥಾಮೃತಸಾರ (ಅರ್ಥ ಮತ್ತು ವಿವರಣೆಸಮೇತ)
೦೮. ಹರಿಕಥಾಮೃತಸಾರ (ಕಮಲಾಪತಿದಾಸರ ವ್ಯಾಖ್ಯಾನ ಸಮೇತ)
೦೯. ಹರಿಕಥಾಮೃತಸಾರ(ಯೋಧ್ಯೇಯವಿಟ್ಠಲರ ಗುರುಹೃದಯಪ್ರಕಾಶಿಕಾ ಸಮೇತ)
೧೦. ಶ್ರೀಜಗನ್ನಾಥದಾಸರ ತತ್ತ್ವಸುವ್ವಾಲಿ
೧೧. ಪುರಂದರದಾಸರ ಆಯ್ದ ಕೃತಿಗಳು
೧೨. ಶ್ರೀಹರಿಭಜನಕಲ್ಪದ್ರುಮ
೧೩. ಶ್ರೀಹರಿಗುರು ಭಜನಾಮೃತ
೧೪. ಶ್ರೀಹರಿದಾಸರ ಉಗಾಭೋಗಗಳು
೧೫. ಹರಿದಾಸ ಕೃತಿಮಂಜರೀ
೧೬. ಭಜನಮಂಜರೀ
೧೭. ಲಕ್ಷ್ಮೀಭಜನಾಮೃತ
೧೮. ಅನಂತಾದ್ರೀಶರ ಶ್ರೀವೇಂಕಟೇಶಪಾರಿಜಾತ
೧೯. ಶ್ರೀಮಧ್ವಪತಿವಿಟ್ಠಲದಾಸರು
೨೦. ಹರಿಕಥಾಮೃತಸಾರ (ಮೂಲಮಾತ್ರ–ಸಂಶೋಧಿತ ಪ್ರತಿ)

## ಪ್ರಕಟಣೆಗೆ ಸಿದ್ಧವಿರುವ ಕೃತಿಗಳು

೦೧. ಶ್ರೀಶ್ರೀಪಾದರಾಜರ ಸಮಗ್ರ ಕೃತಿಗಳು
೦೨. ಶ್ರೀವ್ಯಾಸರಾಜರ ಸಮಗ್ರ ಕೃತಿಗಳು
೦೩. ಶ್ರೀವಾದಿರಾಜರ ಸಮಗ್ರ ಕೃತಿಗಳು (ಎರಡು ಸಂಪುಟಗಳು)
೦೪. ಶ್ರೀಪುರಂದರದಾಸರ ಸಮಗ್ರ ಕೃತಿಗಳು (ಮೂರು ಸಂಪುಟಗಳು)
೦೫. ಶ್ರೀಕನಕದಾಸರ ಸಮಗ್ರ ಕೃತಿಗಳು (ಎರಡು ಸಂಪುಟಗಳು)
೦೬. ಶ್ರೀಮಹಿಪತಿದಾಸರ ಸಮಗ್ರ ಕೃತಿಗಳು
೦೭. ಶ್ರೀಪಸನ್ನ ವೇಂಕಟದಾಸರ ಸಮಗ್ರ ಕೃತಿಗಳು (ಎರಡು ಸಂಪುಟಗಳು)
೦೮. ಶ್ರೀವಿಜಯದಾಸರ ಸಮಗ್ರ ಕೃತಿಗಳು (ಐದು ಸಂಪುಟಗಳು)
೦೯. ಶ್ರೀಗೋಪಾಲದಾಸರ ಸಮಗ್ರ ಕೃತಿಗಳು
೧೦. ಶ್ರೀಜಗನ್ನಾಥದಾಸರ ಸಮಗ್ರ ಕೃತಿಗಳು (ಎರಡು ಸಂಪುಟಗಳು)
೧೧. ಶ್ರೀಮೋಹನದಾಸರ ಸಮಗ್ರ ಕೃತಿಗಳು
೧೨. ಶ್ರೀಪ್ರಾಣೇದಾಸರ ಸಮಗ್ರ ಕೃತಿಗಳು

*****

# Śrī Vyāsamadhva Research Foundation

## PEN DRIVES

1. **Śrīmadbhāgavata-Proṣṭhapadi Bhāgavata(Pravacana), Bhāgavata - Mūlaśloka with meaning, Śrīmadbhāgavata (Full) with commentary of Vijayadhvajatīrtha, Śrīmadbhāgavatasāroddhāra of Śrī Viṣṇutīrtha (with Vyākhyāna and meaning), Bhāgavata Māhātmya. This pen drive has more than 2000 Hours of Pravachanas, and price is Rs. 2500.00**

2. **Pravachana Mālikā - Rāmāyaṇa, Mahābhārata, Bhāgavata (Proṣṭhapadi), Bhagavadgīte, Śrīnivāsa Kalyāṇa, Gītā Māhātmya, Viṣṇupurāṇa, Sumadhvavijaya, Devaru, Ekadaśī, Hanumaj-jayanti, Harivaṃśa, Kṛṣṇāṣṭami, Mahābhāratatātparyanirṇaya, Mahāśivarātri, Narasiṃha Jayanti, Vedavyāsa Jayanti.
This pen drive has more than 1000 Hours of Pravachanas, and price is Rs. 1200.00**

3. **Shāstra Pāṭha - (with Ṭīkā of Śrī Jayatīrtharu) - Tattvasaṅkhyāna, Tattvaviveka, Pramāṇlakṣaṇa, Kathālakṣaṇa, Māyāvādakhaṇḍana, Upādhikhaṇḍana, Mithyātvānumānakhaṇḍana, Tattvodyta, Viṣṇutattvavinirṇaya, Brahmasūtra Bhāṣya+Tattvaprakāśikā, Gītābhāṣya, Gītātātparyanirṇaya, Īśāvāsyopaniṣadbhāṣya, Ṣaṭpraśnopaniṣadbhāṣya.**

**Other Sarvamūla Granthas - Talavakāropaniṣadbhāṣya, KāṭhakopaniṣadBhāṣya, Muṇḍakopaniṣadbhāṣya, Māṇḍūkopaniṣadbhāṣya, Taittarīyopaniṣadbhāṣya, Aitareyopaniṣadbhāṣya, Chāndogyopaniṣadbhāṣya, Bṛhadāraṇyakopaniṣadbhāṣya, Sadācārasmṛti, Tantrasāra, Karmanirṇaya, Dvādaśa stotra, Yamaka Bhārata, Aṇubhāṣya (Tattvamañjarī)**

**This pen drive has more than 1000 Hours of Pāṭha, and price is Rs. 1500.00**

**The above pendrives can be had by sending DD/Cheque/ Online transfer in favour of Śrī Vyāsamadhva Research Foundation, A/c No. 0472101044870, Canara Bank, Hanumantha Nagar Branch, IFSC Code - CNRB0000472**

